# ಎಚ್ಚೆನ್ ಹೆಜ್ಜೆಗುರುತುಗಳು



ಖ್ಯಾತ ವಿಚಾರವಾದಿ ಅಬ್ರಹಾಂ ಕೋವೂರ್ ಅವರ ಜನ್ಮಶತಾಬ್ದಿ ಕಾರ್ಯಕ್ರಮದ ಸಂದರ್ಭದಲ್ಲಿ ಡಾ|| ಎಚ್. ಎನ್.



ನವಕರ್ನಾಟಕ ಪ್ರಕಾಶನ ವಿಶ್ವಕಥಾಕೋಶ ನಾಲ್ಕನೇ ಕಂತಿನ ಬಿಡುಗಡೆ ಸಮಾರಂಭದಲ್ಲಿ ಎಚ್. ಎನ್.



ಮುಖ್ಯಮಂತ್ರಿ ಎಸ್. ಎಂ. ಕೃಷ್ಣ ಮತ್ತು ಎಚ್. ಎನ್.



ಡಾ|| ಎಸ್. ನಿಜಲಿಂಗಪ್ಪನವರೊಡನೆ ಸರಸ ಸಂಭಾಷಣೆಯಲ್ಲಿ




ಬೆಂಗಳೂರು ಸೈನ್ಸ್ ಫೋರಂ ಪರವಾಗಿ ರಾಷ್ಟ್ರೀಯ ಪುರಸ್ಕಾರ ಪಡೆಯುತ್ತಿರುವುದು




ಬಸವನಗುಡಿ ನ್ಯಾಷನಲ್ ಕಾಲೇಜಿನ ಸುವರ್ಣ ಮಹೋತ್ಸವದ ಸಮಾರಂಭದಲ್ಲಿ



ನ್ಯಾಷನಲ್ ಕಾಲೇಜಿನ ನಾಟಕ ಸ್ಪರ್ಧೆ ಸಂದರ್ಭದಲ್ಲಿ ಶ್ರೀ ಬಿ. ವಿ. ಕಾರಂತರೊಡನೆ



ಚಿರನಿದ್ರೆಯಲ್ಲಿ ಎಚ್. ಎನ್.

# ಹೊಸತು

ನೆಮ್ಮದಿಯ ನಾಳೆ ನಮ್ಮದು


## ಒಳಗೇನಿದೆ ...


**ಎಚ್.ಎನ್. ನೆನಪುಗಳು**

ಪ್ರೊ॥ ಬರಗೂರು ರಾಮಚಂದ್ರಪ್ಪ
ಡಾ॥ ಎಚ್. ಎಸ್. ರಾಘವೇಂದ್ರ ರಾವ್, ಪ್ರೊ॥ ಸಿ. ವಿ. ವಿಶ್ವೇಶ್ವರ
ಪ್ರೊ॥ ಜಿ. ಆರ್. ಲಕ್ಷ್ಮಣರಾವ್, ಡಾ॥ ಕೆ. ದ್ವಾರಕಾನಾಥ್
ಡಾ॥ ಕೆ. ವಿ. ನಾರಾಯಣ, ಡಾ॥ ಎನ್. ಗಾಯತ್ರಿ
ಡಾ॥ ಕೆ. ಶ್ರೀನಿವಾಸನ್, ಭಾರ್ಗವಿ ನಾರಾಯಣ್
ಡಾ॥ ಎಚ್. ಎನ್. ಸುಬ್ರಹ್ಮಣ್ಯ, ಎಚ್. ವಿ. ನಟರಾಜ
ಎಚ್. ಕೆ. ಅಂಬಿಕಾ, ನಗರಗೆರೆ ರಮೇಶ್
ಎಚ್. ಆರ್. ರಾಮಕೃಷ್ಣರಾವ್, ಸೀಯಾರ್ಕೆ
ಡಾ॥ ಎಚ್. ಎಸ್. ನಿರಂಜನಾರಾಧ್ಯ, ಡಾ॥ ಸುಂದರ್‌ರಾಜ್ ಅರಸ್
ಡಾ॥ ಸಿದ್ದನಗೌಡ ಪಾಟೀಲ, ಜಿ. ಶ್ರೀನಿವಾಸರಾಜು, ನಿಸ್ಸಾರ್ ಅಹಮದ್ ... ೮

**ದೇಶಕ್ಕೊಂದು ಸೂಕ್ತ ಭಾಷಾನೀತಿ** ಡಾ॥ ಪಿ. ವಿ. ನಾರಾಯಣ ...೨೮

**'ಬದುಕು' ತೆರೆದಿಟ್ಟ ಬರಹಗಾರ್ತಿ – ಗೀತಾ ನಾಗಭೂಷಣ**
ಡಾ॥ ಎನ್. ಗಾಯತ್ರಿ ... ೩೨

**ಕನ್ನಡ ಪತ್ರಿಕೋದ್ಯಮದ ಪಿತಾಮಹ ವೆಂಕಟಕೃಷ್ಣಯ್ಯ**
ಶಮಂತ್ ಪಾಟೀಲ್ ಜೆ. ... ೬೧

**ಖರೇ ವಾರಸುದಾರರು** ವೈಕೊಮ್ ಮುಹಮ್ಮದ್ ಬಶೀರ್ ... ೪೧

**ಕಾಯಕದ ಕೈಲಾಸದಲ್ಲೊಬ್ಬ ಬಣಗಾರ ಹುಡುಗ**
ರವೀಂದ್ರನಾಥ ಠಾಕೂರ್ ... ೪೬

**ಕಾವ್ಯಧಾರೆ** ೨೨, ೨೯, ೬೨

**ಎಕೂಪೆ ಫೆಬ್ರವರಿ ಅರಿವಿನ ವಿಸ್ತಾರ** ಆಶಾ ವಸಂತ್ ...೩೧

**ಬಸವಣ್ಣ ಮತ್ತು ಶ್ರಮಜೀವಿ ಚಳವಳಿ** ವೈ. ಗ. ಜಗದೀಶ್ ... ೩೫

**ಲಿಂಗಸಂಬಂಧಗಳು, ಅಭಿವೃದ್ಧಿ ಮತ್ತು ಜನಸಂಖ್ಯಾ ಬೆಳವಣಿಗೆ**
ಡಾ॥ ಟಿ. ಆರ್. ಚಂದ್ರಶೇಖರ ... ೩೯

**ನಭದ ಗುರುವಿನ ಹಕ್ಕು ಭುವಿಯ ಗುರುವಿಗೆ ಕೋಕ್**
ಅರವಿಂದ ಚೊಕ್ಕಾಡಿ ... ೪೩

**ಶಿಕ್ಷಣ ಹಾಗೂ ಮಹಿಳಾ ಸಬಲೀಕರಣ** ಡಾ॥ ಬಸವರಾಜ ಸಬರದ ... ೪೯

**ಪರಿಸರ ಮತ್ತು ಜೀವಸಂಕುಲ** ವಿ. ಚಂದ್ರಶೇಖರ ನಂಗಲಿ ... ೫೧

**ಅಮೆರಿಕದ ಡಾಲರು ಕ್ರಾಂತಿಗೆ ಕಡಿವಾಣ ಇಲ್ಲದಿದ್ದರೆ ಅನಾಹುತ**
ಸೀಯಾರ್ಕೆ ...೫೭

**ಇಸ್ಲಾಮಿಕ್ ಮೂಲಭೂತವಾದ ಅಪಾಯಗಳು**
ಐ. ಆರ್. ಪ್ರಮೋದ್ ... ೫೯

**ಹುಣ್ಣಿಮೆಯ ಅಪೂರ್ವ ಸೊಬಗು** ಡಾ॥ ಬಿ. ಎಸ್. ಶೈಲಜಾ ... ೫೫

**ಹೊಸ ಓದು** ಇಂದಿರಾಕುಮಾರಿ ... ೫೮

**ಮಾನವ ಧರ್ಮ** ಡಾ॥ ಎಚ್. ನರಸಿಂಹಯ್ಯ ... ೬೨



ಚಿತ್ರಗಳು : ಸೃಜನ್, ಶ್ರೀಹರಿ, ಮೋನಪ್ಪ
ಮುಖಪುಟದಲ್ಲಿ : ಡಾ॥ ಎಚ್. ನರಸಿಂಹಯ್ಯ
ಚಿತ್ರಕೃಪೆ : ಶ್ರೀ ಎಚ್. ವಿ. ವೇಣುಗೋಪಾಲ
ವಿನ್ಯಾಸ : ನವಕರ್ನಾಟಕ ವಿನ್ಯಾಸ
ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

೧೯೮೦ರ ದಶಕದಲ್ಲಿ ಮೈಸೂರಿನ ಬಳಿ ರತ್ನಹಳ್ಳಿಯಲ್ಲಿ ಒಂದು ಕಾರ್ಖಾನೆ ಇತ್ತು. ಅಲ್ಲಿ ಯುರೇನಿಯಂ ಸಂಸ್ಕರಣ ನಡೆಯುತ್ತಿದ್ದುದು ಹೊರಗಿನ ಪ್ರಪಂಚಕ್ಕೆ ತಿಳಿಯುವಂತಿರಲಿಲ್ಲ. ಸುಮಾರು ೨೫ ವಯಸ್ಸಿನ ಒಬ್ಬ ಯುವಕ ಅದನ್ನು ಹೇಗೋ ಪತ್ತೆ ಹಚ್ಚಿ ಪತ್ರಿಕೆಗಳಿಗೆ ವಿವರವಾದ ಮಾಹಿತಿ ಒದಗಿಸಿದ, ಸ್ವತಃ ಲೇಖನಗಳನ್ನು ಬರೆದು ಕೋಲಾಹಲವೆಬ್ಬಿಸಿದ. ಕಾರ್ಖಾನೆಯ ವ್ಯವಸ್ಥಾಪಕ ನಿರ್ದೇಶಕ ಗರ್ಗ್ ಎಂಬಾತ ಮುಂಬೈಯಿಂದ ಬಂದು ಮೈಸೂರಿನ ಮೇಯರನ್ನು ಭೇಟಿಯಾಗಿ, ಕಾರ್ಖಾನೆಯಲ್ಲಿ ಕೆಲವು ರಾಸಾಯನಿಕಗಳನ್ನು ತಯಾರಿಸಲಾಗುತ್ತಿದೆಯೇ ವಿನಾ ಯುರೇನಿಯಂ ಅಲ್ಲವೇ ಅಲ್ಲವೆಂದು ಹೇಳಿದ. ಭೇಟಿಯ ಸಂದರ್ಭದಲ್ಲಿ ಮೇಯರ್ ಒಬ್ಬ ಖ್ಯಾತ ರಸಾಯನಶಾಸ್ತ್ರ ಪ್ರಾಧ್ಯಾಪಕರನ್ನು ಕರೆಸಿಕೊಂಡು ತಮ್ಮೊಡನೆ ಚರ್ಚೆಯಲ್ಲಿ ಭಾಗವಹಿಸುವಂತೆ ವಿನಂತಿಸಿಕೊಂಡಿದ್ದರು. ಅಲ್ಲಿ ಯಾವ ಅಪಾಯಕರ ವಸ್ತುವನ್ನೂ ತಯಾರಿಸುತ್ತಿಲ್ಲವಾದರೆ ಮೇಯರ್ ಹಾಗೂ ತಮ್ಮನ್ನು ಕಾರ್ಖಾನೆಗೆ ಕರೆದುಕೊಂಡುಹೋಗಿ ತೋರಿಸಬಹುದಲ್ಲವೆ, ಎಂದು ಪ್ರಾಧ್ಯಾಪಕರು ಹೇಳಿದಾಗ ಗರ್ಗ್ ಗಪ್‌ಚಿಪ್ ಆದರು. ಕಾರ್ಖಾನೆಗೆ ಇವರನ್ನು ಕರೆದುಕೊಂಡು ಹೋಗುವ ಬದಲು ತಾನೇ ರಾತ್ರೋ ರಾತ್ರಿ ಮೈಸೂರು ಬಿಟ್ಟ ಆತ ! ಹೀಗೆ ರತ್ನಹಳ್ಳಿಯ ಗುಟ್ಟನ್ನು ಬಹಿರಂಗಗೊಳಿಸಿದ್ದ ಯುವಕ ಸಾಕೇತ್ ರಾಜನ್, ಕಳಸದ ಬಳಿ ಈಚೆಗೆ ಪೊಲೀಸರ ಗುಂಡಿಗೆ ಬಲಿಯಾದ ನಕ್ಸಲೀಯ ನಾಯಕ. ಆ ನಾಯಕ ಇಂತಹ ಮಾರ್ಗಕ್ಕೆ ಬದ್ಧನಾಗುತ್ತಾನೆಂದು ಆತನ ಸ್ನೇಹಿತರನೇಕರು ನಿರೀಕ್ಷಿಸಿರಲಿಲ್ಲವೆನ್ನುತ್ತಾರೆ. ಕರ್ನಾಟಕದ ಇತಿಹಾಸವನ್ನು ಎರಡು ಸಂಪುಟಗಳಲ್ಲಿ ಪಾಂಡಿತ್ಯಪೂರ್ಣವಾಗಿ, ಜನರ ದೃಷ್ಟಿಯಿಂದ, ಪ್ರತಿಪಾದಿಸಿರುವುದು ಸಾಕೇತ್‌ರ ಒಂದು ಸಾಧನೆ. ಆತನ ಹಾಗೂ ಆತನ ಸಹಚರ ಶಿವಲಿಂಗುವಿನ ಹತ್ಯೆಯ ನಂತರ ಪ್ರತೀಕಾರದ ರೂಪದಲ್ಲಿ ಎಂಟು ಮಂದಿ ಪೊಲೀಸರನ್ನು ನಕ್ಸಲೀಯರು ಪಾವಗಡದ ಬಳಿ ಹತ್ಯೆ ಮಾಡಿದ್ದಾರೆಂಬ ದಾರುಣ ವರದಿ ಎಲ್ಲರನ್ನೂ ದಂಗಾಗಿಸಿದೆ. ಈ ಸರಣಿ ಹೀಗೇ ಮುಂದುವರಿದರೆ ನಮ್ಮ ರಾಜ್ಯದ ಅಭಿವೃದ್ಧಿಯ ಹಾದಿಗೆ ಇತಿಶ್ರೀ ಹಾಡಿ ಪರಸ್ಪರ ಕೊಲ್ಲುವ ಪ್ರಕ್ರಿಯೆಯು ಶಾಂತಿಯನ್ನು ಧೂಳೀಪಟ ಮಾಡುತ್ತದೆ.

ಮೈಸೂರಿನ ಪ್ರಕರಣದಲ್ಲಿ ಜನರನ್ನು ಒಟ್ಟುಮಾಡಿ ಪ್ರಜ್ಞಾಪೂರ್ವಕ ಹೋರಾಟದಲ್ಲಿ ಅವರನ್ನು ತೊಡಗಿಸುವುದರಲ್ಲಿ ಶ್ರದ್ಧೆ ತೋರಿಸಿದ್ದ ಯುವಕ ನಂತರ ಬೇರೊಂದು ಹಾದಿಯನ್ನು ಆಯ್ಕೆ ಮಾಡಿಕೊಂಡುದನ್ನು ವಿಶ್ಲೇಷಿಸಿಕೊಳ್ಳುವ ಅಗತ್ಯವಿದೆ. ಜನರನ್ನು ನೇರವಾಗಿ ಹೋರಾಟದಲ್ಲಿ ತೊಡಗಿಸುವ ಬದಲು ಜನರ ಪರವಾಗಿ ತಾನು ಮತ್ತು ತನ್ನಂಥವರು ಕೆಲವರು ಶಸ್ತ್ರಧಾರಿಗಳಾಗಿ ಇಡೀ ವ್ಯವಸ್ಥೆಯನ್ನು ಗುಣಾತ್ಮಕವಾಗಿ ಬದಲಾಯಿಸಿಬಿಡಬೇಕೆಂಬ ಆಶಯ ಅದರಲ್ಲಿದೆ. ಲೆನಿನ್‌ರ ಸಹೋದರ ಇಂಥದೇ ಹಾದಿ ಹಿಡಿದಿದ್ದಾಗ "ಇದು ನನ್ನ ಹಾದಿಯಾಗಲಾರದು" ಎಂದು ಲೆನಿನ್ ಉದ್ಗರಿಸಿದ್ದುದಾಗಿ ದಾಖಲಾಗಿದೆ. ಸಶಸ್ತ್ರ ಕ್ರಾಂತಿಯ ಸ್ವರೂಪ ಮತ್ತು ಅದು ಕಾರ್ಯಗತವಾಗಲು ಅಗತ್ಯವಾದ ಸನ್ನಿವೇಶದ ಬಗ್ಗೆ ಲೆನಿನ್ ವಿವೇಚಿಸಿರುವ ಅನೇಕ ಸೂಕ್ಷ್ಮಗಳನ್ನು ಕ್ರಾಂತಿಗಾಗಿ ಸೆಣೆಸುವವರೆಲ್ಲರೂ ಚೆನ್ನಾಗಿ ಅಭ್ಯಾಸ ಮಾಡಬೇಕಾಗಿದೆ. ಜನರ ಬಗ್ಗೆ ಸಾಂತ್ವನ ತೋರುವುದೆಂದರೆ ಅವರನ್ನು ಕ್ರಿಯೆಯಲ್ಲಿ ತೊಡಗಿಸದೆ ಅನ್ಯಮಾರ್ಗವಿಲ್ಲವೆಂದರ್ಥ. ಅವರ ಬದಲಾಗಿ ಬೇರೆಯವರು ಅವರ ಜಂಜಾಟಗಳನ್ನು ನೀಗಿಸುತ್ತಾರೆಂಬುದು ಆಗಿಹೋಗದ ಮಾತು. ಕೆಲವು ವ್ಯಕ್ತಿಗಳು ಬಂದೂಕು ಹಿಡಿದು ಪ್ರಭುತ್ವದ ಅಸೀಮ ಶಕ್ತಿಯನ್ನು ಹೊಸಕಿಹಾಕಲಾದೀತೆ ? ತನ್ನ ಮೇಲೆ ಯುದ್ಧ ಸಾರಿದವರನ್ನು ಪ್ರಭುತ್ವವು ಕರುಣೆಯಿಂದ ಅಥವಾ ಸೌಜನ್ಯದಿಂದ ನಡೆಸಿಕೊಳ್ಳುತ್ತದೆಂದು ನಿರೀಕ್ಷಿಸಲಾಗದು. ಸಾಮುದಾಯಿಕ ಮಧ್ಯಪ್ರವೇಶವೊಂದೇ ಪ್ರಭುತ್ವದ ಲಕ್ಷಣವನ್ನು ಬದಲಾಯಿಸಲು ಸಮರ್ಥವಾದ ಮದ್ದೆಂದು ಇತಿಹಾಸ ತಿಳಿಸುತ್ತದೆ. ಸಮುದಾಯದಿಂದ ಬೇರ್ಪಟ್ಟು ಅದನ್ನು ರಕ್ಷಿಸುವ ತವಕವು ಅವತಾರ ಪುರುಷನಿಗೆ ಮಾತ್ರ ಶೋಭಿಸುತ್ತದೆ. ನಮ್ಮ ದೇಶದ ಯುವಶಕ್ತಿಯನ್ನು ಪ್ರಭುತ್ವವು ಯಾವ ರೀತಿಯಲ್ಲಿ ಕ್ರಿಯಾಶೀಲವಾಗಿಸಬೇಕೋ ಹಾಗೆ ಮಾಡದಿದ್ದಾಗಲೂ ಬದಲಾವಣೆಯ ಹರಿಕಾರರು ಆ ಯುವಶಕ್ತಿಯನ್ನು ಪೋಲು ಮಾಡುವಂತಹ ರೀತಿಯಲ್ಲಿ ಕಣಕ್ಕಿಳಿಸುವುದು ಸರ್ವಥಾ ಸಾಧುವಲ್ಲ. ಹತಾಶೆಯನ್ನು ಕ್ರಾಂತಿಕಾರಕ ಧೈರ್ಯವೆಂದು ಭ್ರಮಿಸಿ ಹೆಜ್ಜೆ ಇಡಹೋದಾಗ ಈಗ ಸಂಭವಿಸಿರುವ ವ್ಯಸನ ಅನಿವಾರ್ಯವಾಗುತ್ತದೆ. ಇಬ್ಬರು ನಕ್ಸಲೀಯರ ಜೀವಹಾನಿಗೆ ಉತ್ತರ ಎಂಟು ಪೊಲೀಸರ ಜೀವಹಾನಿಯಲ್ಲ. ಅದನ್ನು ಮಾನ್ಯ ಮಾಡದೆ, ಕೊಲ್ಲುವ ಹಾದಿಯನ್ನೇ ಅನುಸರಿಸುವುದಾದರೆ ಪ್ರಭುತ್ವದಿಂದ ಯಾವ ರಿಯಾಯಿತಿಯನ್ನೂ ಬಯಸುವಂತಿಲ್ಲ ಮತ್ತು ಶಾಂತಿಸಂಧಾನದ ಮಾತಾಡುವಂತಿಲ್ಲ. ಶಾಂತಿ - ಸಹಕಾರಗಳ ವಾತಾವರಣದಲ್ಲಿ ಪ್ರಭುತ್ವ ಹಾಗೂ ನಕ್ಸಲೀಯರು ಮಾತುಕತೆ ನಡೆಸಬೇಕಾದರೆ ಮೊದಲು ಈ ಪರಸ್ಪರ ಕೊಲ್ಲುವಿಕೆಯನ್ನು ನಿಲ್ಲಿಸುವುದು ಅವಶ್ಯಕ. ಇದರಲ್ಲಿ ಸರ್ಕಾರದ್ದು ಮಾತ್ರವೇ ಜವಾಬ್ದಾರಿಯಿಲ್ಲ; ನಕ್ಸಲೀಯರದೂ ಅಷ್ಟೇ ಜವಾಬ್ದಾರಿ ಇದೆ. ಪೊಲೀಸರನ್ನು ಹತ್ಯೆ ಮಾಡಿರುವುದು ಶಾಂತಿಯುತ ಸಂವಾದವನ್ನು ನಿರರ್ಥಕಗೊಳಿಸುವುದಿರಲಿ, ಅದು ಸಾಧ್ಯವೂ ಇಲ್ಲದಂತೆ ಮಾಡಿದೆ.

ಹಾಗೆಂದಮಾತ್ರಕ್ಕೆ ಪ್ರಭುತ್ವ ಮತ್ತು ನಕ್ಸಲೀಯರ ನಡುವೆ ಮಾತುಕತೆಯಾಗಬೇಕೆಂದು

೭ನೇ ಪುಟಕ್ಕೆ...




ಸಂಪುಟ-೬ ಸಂಚಿಕೆ-೮ ಮಾರ್ಚ್ ೨೦೦೫

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೨೦೩೫೮೦ / ೮೧ / ೮೨
e-mail : nkp@bgl.vsnl.net.in
website : www.navakarnatakabooks.com



# ಡಾ|| ಎಚ್. ನರಸಿಂಹಯ್ಯ

ಎಚ್ಚೆನ್ ಎಂದೇ ಪ್ರಸಿದ್ಧರಾಗಿದ್ದ ಮಾನ್ಯ ಡಾ|| ಎಚ್. ನರಸಿಂಹಯ್ಯನವರು ಇದೇ ಜನವರಿಯ ಕೊನೆಯ ದಿನದಂದು ತೀರಿಕೊಂಡರು. ಅವರಿಗೆ 'ಹೊಸತು' ತನ್ನ ಅತ್ಯಾದರದ ಗೌರವ ಸೂಚಿಸುತ್ತದೆ. ಈ ಸಂಚಿಕೆಯನ್ನು ವಿಶೇಷವಾಗಿ ಅವರ ನೆನಪಿಗೆ ಮೀಸಲಾಗಿಡಲಾಗಿದೆ. ಅವರನ್ನು ಹತ್ತಿರದಿಂದ ಕಂಡಿದ್ದ ಅನೇಕ ಸ್ನೇಹಿತರು ಡಾ|| ಎಚ್ಚೆನ್ ಬಗ್ಗೆ ಅವರ ನೆನಪುಗಳನ್ನು ಮೆಲುಕುಹಾಕಿಕೊಂಡು ಆ ಅನನ್ಯ ವ್ಯಕ್ತಿಯ ಪರಿಚಯ ಮಾಡಿಕೊಟ್ಟಿದ್ದಾರೆ, ಮಾಪನ ಮಾಡಿದ್ದಾರೆ. ಅವರೆಲ್ಲರಿಗೂ 'ಹೊಸತು' ಋಣಿಯಾಗಿದೆ. ನ್ಯಾಷನಲ್ ಕಾಲೇಜಿನ ಸಂಸ್ಕೃತ ಪ್ರಾಧ್ಯಾಪಕರಾದ ಶ್ರೀ. ಎಚ್. ವಿ. ವೇಣುಗೋಪಾಲ್ ಎಚ್ಚೆನ್ ಅವರ ಚಿತ್ರಗಳನ್ನೊದಗಿಸಿದ್ದಾರೆ. ಅವರಿಗೆ 'ಹೊಸತು' ವಂದನೆ ಸಲ್ಲಿಸುತ್ತದೆ.

ಎಚ್ಚೆನ್ ಅವರನ್ನು ಅರ್ಥೈಸಿಕೊಳ್ಳಲು ನಡೆಯುವ ಯತ್ನಗಳನ್ನು ನೋಡಿದರೆ ಜೈನದರ್ಶನದ ಅನೇಕಾಂತವಾದವು ಪ್ರಾಯೋಗಿಕವಾಗಿ ಜೀವಂತಿಕೆ ಪಡೆಯುತ್ತಿದೆ ಎನಿಸುತ್ತದೆ. ಅಸ್ತಿತ್ವದಲ್ಲಿರುವ ಯಾವುದೇ ವಸ್ತುವಿನ ಸತ್ಯತೆಯ ಬಗ್ಗೆ 'ಸಪ್ತಭಂಗೀ ನ್ಯಾಯ'ದ ಮುಖೇನ ಈ ದರ್ಶನವು ವ್ಯಾಖ್ಯಾನ ನೀಡುತ್ತದೆ. ಎಚ್ಚೆನ್ ಅವರನ್ನು ಹತ್ತಿರದಿಂದ ನೋಡಿರಲಿ, ದೂರದಿಂದ ನೋಡಿರಲಿ, ಅವರ ಬಗ್ಗೆ ವ್ಯಾಪಕ ಭಿನ್ನತೆಯ ಅಭಿಪ್ರಾಯಗಳು ವ್ಯಕ್ತವಾಗಿವೆ. ಅದರಲ್ಲಿ ಯಾವುದು ಸರಿ ? ಒಂದು ಆನೆಯನ್ನು ಏಳು ಜನ ಕುರುಡರು ಬೇರೆಬೇರೆ ರೀತಿಗಳಲ್ಲಿ ಗ್ರಹಿಸಿದ್ದ ಕತೆಯಲ್ಲಿದ್ದಂತೆ ಇಲ್ಲಿಯೂ ಎಲ್ಲ ಗ್ರಹಿಕೆಗಳೂ ಸರಿ, ಆದರೆ ಯಾವೊಂದು ಗ್ರಹಿಕೆಯೂ ಪೂರ್ಣವಲ್ಲ, ಒಂದೇ ವಸ್ತುವಿನ ಬಗೆಗಿನ ತಿಳುವಳಿಕೆ ಅನೇಕ ಬಗೆಯದ್ದಾಗಿರಬಹುದೆಂಬ ಜೈನದರ್ಶನದ ಅನೇಕಾಂತವಾದವು ಎಚ್ಚೆನ್ ಸಂದರ್ಭದಲ್ಲಿ ಪ್ರಸ್ತುತವಾಗುವುದು ಹಾಗೆ. ಇನ್ನೊಂದು ವಿಶೇಷವೆಂದರೆ, ಈ ವಾದವು ಎಚ್ಚೆನ್ ಅವರಿಗೆ ಪ್ರಿಯವಾಗಿದ್ದ ವೈಜ್ಞಾನಿಕ ಸತ್ಯದ ಅರಸುವಿಕೆಗೆ ಮೂಲದ್ರವ್ಯವನ್ನು ಒದಗಿಸುತ್ತದೆ. ಈ ಸತ್ಯದ ಅನ್ವೇಷಣೆಯಲ್ಲಿ ಭಾಗಿಗಳಾಗುವವರಿಗೆಲ್ಲಾ ಒಂದಂಶ ತಿಳಿದಿರುತ್ತದೆ: ಅದೇನೆಂದರೆ, ಈ ಸತ್ಯವು ಅಂತಿಮವಲ್ಲ ಮತ್ತು ಪರಿಪೂರ್ಣವಲ್ಲ, ಆಯಾ ಚಾರಿತ್ರಿಕ ಘಟ್ಟದಲ್ಲಿ ಎಷ್ಟು ಜ್ಞಾನ ಲಭ್ಯವಿದೆಯೋ ಅದರ ಆಧಾರದ ಮೇಲೆ 'ಸತ್ಯ'ದ ನಿಷ್ಕರ್ಷೆಯಾಗಿರುತ್ತದೆ. ಜ್ಞಾನವು ವೃದ್ಧಿಯಾದಂತೆ 'ಸತ್ಯ'ದ ನಿಷ್ಕರ್ಷೆಗೆ ಅಡಿಟಿಪ್ಪಣಿಗಳನ್ನು ಸೇರಿಸುತ್ತಾ ಹೋಗಬೇಕು. ಎಚ್ಚೆನ್ ಅವರ ಸಾಧನೆಗಳಲ್ಲಿ ಈ ಅಡಿಟಿಪ್ಪಣಿಗಳ ಸೇರಿಸುವಿಕೆಗೆ ಮಹತ್ವದ ಸ್ಥಾನವಿದೆ. ಒಂದರ್ಥದಲ್ಲಿ 'ಒಬ್ಬ ವ್ಯಕ್ತಿಯ ಸೈನ್ಯ'ದಂತಿದ್ದ ಎಚ್ಚೆನ್ ತಮಗೆ ತಾವೇ ಹೊಸ ಹೊಸ ಆಜ್ಞೆಗಳನ್ನು ನೀಡಿಕೊಳ್ಳುವ ಕಮಾಂಡರ್ ಆಗಿದ್ದರು, ಅಂತೆಯೇ ಅವನ್ನು ಕಾರ್ಯಗತಗೊಳಿಸುವ ಶಸ್ತ್ರಸಜ್ಜಿತ ಸೈನಿಕನೂ ಆಗಿದ್ದರು. ಈ ಸೈನಿಕನು ಪ್ರಜ್ಞಾಖಡ್ಗವನ್ನು ಸಾಯಿಬಾಬಾನಂತಹ ಬಹುಮಂದಿಯ ಮುಂದೆ ಝಳಪಿಸಿದ್ದುಂಟು. ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ ಸಹ ಬೇರೆ ರೀತಿಯ ಕೆಲವು ಬಾಬಾಗಳನ್ನು ಎಚ್ಚೆನ್ ಎದುರಿಸಿದ್ದರೆಂಬುದು ತಿಳಿದ ವಿಷಯ. ಬಾಬಾ ಕಾರಣದಿಂದಾಗಿ ತಮ್ಮ ಕುಲಪತಿ ಹುದ್ದೆಗೆ ಎಚ್ಚೆನ್ ರಾಜಿನಾಮೆ ನೀಡಿದರೆಂದು ಹೇಳುವಾಗ ಎರಡು ಬಗೆಯ ಬಾಬಾಗಳನ್ನೂ ದೃಷ್ಟಿಯಲ್ಲಿರಿಸಿಕೊಳ್ಳಬೇಕು. ಒಂದು ಕಡೆ ಬೂದಿಯ ಬದಲು ಕುಂಬಳ ಕಾಯಿಯನ್ನು 'ಸೃಷ್ಟಿ' ಮಾಡಲಾರದೆ ಸೋತ ಹುಲಿಯ ಬಳಗದ ಆವೇಗ ಮತ್ತು ಇನ್ನೊಂದೆಡೆ ಆರಾಧ್ಯ-ಗೌಡ ಬಣಗಳ ಪರಸ್ಪರ ಘರ್ಷಣೆಗಳಿಗೆ ಬಲಿ ಬೇಕಾಗಿದ್ದ ಬಿಸಿ ವಾತಾವರಣ. ತಮ್ಮೆಲ್ಲ ಸರಳತನ ಮತ್ತು ಬಹುಬಾಂಧವ್ಯಗಳ ಸಾಮರ್ಥ್ಯದಿಂದಲೂ ಇದಕ್ಕೆ ಹೊಂದಿಕೊಳ್ಳಲು ಎಚ್ಚೆನ್ ಅವರಿಗೆ ಸಾಧ್ಯವಾಗಲಿಲ್ಲ. ಆದರೆ ಅದರಿಂದ ಅವರು ಕಂಗೆಡಲೂ ಇಲ್ಲ.

ಒಂದು ಇಡೀ ರೈಲನ್ನು ಅಥವಾ ತಾಜಮಹಲನ್ನು ಕೆಲವು ಕ್ಷಣಗಳ ಕಾಲ ಅದೃಶ್ಯ ಮಾಡಿಬಿಡುವ ಚಾಕಚಕ್ಯತೆಯನ್ನುಳ್ಳ ಸರ್ಕಾರ್ ಅವರಂತಹ ಮ್ಯಾಜಿಕ್ ಪಟುಗಳಿರುವಾಗ ಹೇಗೋ ಒಂದು ಕುಂಬಳಕಾಯಿಯನ್ನು ಸೃಷ್ಟಿಸಿ ಎಚ್ಚೆನ್ ಅವರ ಮುಂದಿಡಲು ಯಾವುದಾದರೂ ಬಾಬಾ ಸಮರ್ಥನಾದಾನು. ಆದರೆ ಅದು ಪ್ರಕೃತಿ ನಿಯಮದ ಜ್ಞಾನವನ್ನೆಲ್ಲಾ ತಲೆಕೆಳಗು ಮಾಡುವುದಿಲ್ಲವೆಂಬ ವೈಜ್ಞಾನಿಕ ಶ್ರದ್ಧೆ ಎಚ್ಚೆನ್ ಅವರಲ್ಲಿತ್ತು. ಆದರೆ ಅತಿ ಸಾಮಾನ್ಯ ಮೌಢ್ಯವನ್ನು ಕೂಡ ಆತುಕೊಳ್ಳುವ ಜನರ ಪ್ರವೃತ್ತಿಯನ್ನು ಕೊನೆಗೊಳಿಸಲು ಎಚ್ಚೆನ್ ಬಾಬಾನ ಮುಚ್ಚಿದ ಪ್ರಜ್ಞಾ ಬಾಗಿಲನ್ನು ಬಲವಾಗಿ ತಟ್ಟಿದರು, ತಮ್ಮದೇ ಆದ ನವಿರು ರೂಪದಲ್ಲಿ ಬಾಗಿಲನ್ನು ಒದ್ದರು ಕೂಡ. ಆ ತಟ್ಟುವಿಕೆಯಿಂದ ಸಮುದಾಯದ ಪ್ರಜ್ಞಾ ಬಾಗಿಲು ಸಂಪೂರ್ಣವಾಗಿ ತೆರೆದುಕೊಳ್ಳದಿರುವುದಕ್ಕೆ ಸಾಮಾಜಿಕ ಕಾರಣಗಳಿವೆ. ''ವೈಜ್ಞಾನಿಕ ಮನೋಭಾವದ ಅನಭಿಷಿಕ್ತ ದೊರೆ'' ಎಚ್ಚೆನ್ ಅವರಿಗೆ ಇದು ತಿಳಿಯದ ವಿಷಯವಲ್ಲ. ಆದರೆ ಅದಕ್ಕೆ ಅವರು ಹೆಚ್ಚು ಒತ್ತುಕೊಡಲಿಲ್ಲ. ಕೇವಲ ಅವೈಜ್ಞಾನಿಕತೆಯಿಂದಾಗಿ ಯಾವುದೋ ಅಜ್ಜಿಯು ಬೇವಿನಸೊಪ್ಪಿನಿಂದ ನೀವಳಿಸಿ ತನ್ನ ಮೊಮ್ಮಗುವಿನ ಜ್ವರ ಹೋಗಲಾಡಿಸಲು ಯತ್ನಿಸುವುದಿಲ್ಲ. ಅವಳಿಗೆ ವೈದ್ಯರ ಬಳಿ ಹೋಗುವ ಚೈತನ್ಯವಿಲ್ಲ ಮತ್ತು ಬರಿಗೈಯಲ್ಲಿ ಬಂದ ಅಜ್ಜಿಯನ್ನು ಸೌಜನ್ಯದಿಂದ ಕಾಣುವ ವೈದ್ಯರು ಬಹಳಷ್ಟಿಲ್ಲ. ಅವಳಿಗೆ ಬೇಕಾದ್ದು ಜ್ಞಾನಬೋಧೆಯಲ್ಲ, ಅವಳ ಅಡಕೆಲೆ ಸಂಚಿಗೆ ತುಂಬಬೇಕಾಗಿದ್ದು ಸ್ವಲ್ಪ ಹಣ. ಹಾಗಾಗಬೇಕೆಂದೇ ಎಚ್ಚೆನ್ ತಮ್ಮ ಸಾಮಾಜಿಕ-ಆರ್ಥಿಕ ತುಡಿತಗಳನ್ನು ಕೆಲವೊಮ್ಮೆ ಉದ್ವೇಗದಿಂದ ತೋಡಿಕೊಳ್ಳುತ್ತಿದ್ದುದು. ೧೯೬೭-೬೮ರಲ್ಲಿ ಅಮೆರಿಕಾದ ಕಾರ್ಬಂಡೇಲ್ ವಿಶ್ವವಿದ್ಯಾನಿಲಯದಲ್ಲಿ ಸಂದರ್ಶಕ ಪ್ರಾಧ್ಯಾಪಕರಾಗಿ ಕೆಲಸ ಮಾಡಿದ ಎಚ್ಚೆನ್, ಭಾರತಕ್ಕೆ ಹಿಂದಿರುಗುವಾಗ ಲಂಡನ್ ಮುಖಾಂತರ ಮಾಸ್ಕೋಗೆ ತೆರಳಿ ಕೆಲಕಾಲ ಅಲ್ಲಿಯ ಶಾಲಾ-ಕಾಲೇಜುಗಳನ್ನು ನೋಡಿ ಅಭ್ಯಾಸ ಮಾಡಿದರು. ಪ್ರತಿಯೊಬ್ಬ ವ್ಯಕ್ತಿಯ ಶಿಕ್ಷಣ, ವೈಜ್ಞಾನಿಕ ಪ್ರಜ್ಞೆಯ ವಿಕಾಸ, ಇವಕ್ಕೆ ಅಡಚಣೆ ಏನು ಮತ್ತು ಪರಿಹಾರ ಮಾರ್ಗ ಯಾವುದು ಎಂಬುದು ಅವರ ಮನಸ್ಸಿನಲ್ಲಿ ಸ್ಥಿರವಾಗಿ ನೆಲೆಯೂರಲು ಮಾಸ್ಕೋ ಭೇಟಿ ಒಂದು ಸಾಂಕೇತಿಕ ಪರ್ಯಾಯದ ಛಾಯೆಯಾಗಿ ಉಳಿಯಿತು.

ತಾವು ಉಪಕುಲಪತಿಗಳಾಗಿ ಹೋದಾಗ ತಮ್ಮದೇ ನ್ಯಾಷನಲ್ ಕಾಲೇಜಿನಲ್ಲಿ ಏನೆಲ್ಲಾ ಪ್ರಸಂಗಗಳು ಜರುಗುತ್ತಿದ್ದುವೆಂಬುದನ್ನು ನೋಡಿ ಎಚ್ಚೆನ್ ಖಿನ್ನರಾದರು ಆದರೆ ಅಧೈರ್ಯ ಅವರನ್ನಾವರಿಸಲಿಲ್ಲ. ''ಅವರಿಗೆ ರಜಾ ಮಂಜೂರು ಮಾಡಿರುವುದನ್ನು ರದ್ದುಗೊಳಿಸಬೇಕು'' ಎಂಬ ಹೀನಾಯ ನಿರ್ಣಯವೊಂದನ್ನು ಎಚ್ಚೆನ್ ಅವರ ಕೆಲವು ಸಹೋದ್ಯೋಗಿ ಮಿತ್ರರು ಒಂದು ಸರ್ವಸದಸ್ಯರ ಸಭೆಯಲ್ಲಿ ಮಂಡಿಸ ಹೊರಟಾಗ ಎಚ್ಚೆನ್ ಕುಪಿತರಾಗುವ ಬದಲು ಸಾಮೂಹಿಕ ನೆಲೆಯಲ್ಲಿ ನಿಂತು ಅವರನ್ನು ಅಧೀರರನ್ನಾಗಿಸಿದರು. ''ಇನ್ನು ನೀವು ಈ ಆವರಣಕ್ಕೆ ಹೇಗೆ ಕಾಲಿಡುತ್ತೀರಿ ನೋಡೋಣ'' ಎಂದು ಸವಾಲೆಸೆದಿದ್ದ ಮಂಕುತಿಮ್ಮರನ್ನೇ ಪಳಗಿಸಿ ನಂತರದ ಕಾಲದಲ್ಲಿ ಅವರಿಗೆ ಜವಾಬ್ದಾರಿ ಸ್ಥಾನಗಳನ್ನು ಕಲ್ಪಿಸಿಕೊಟ್ಟದ್ದು ಎಚ್ಚೆನ್ ಅವರ ವ್ಯಕ್ತಿತ್ವದ ಶ್ರೀಮಂತಿಕೆ. ಎಚ್ಚೆನ್ ಅವರ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಆಶಯಗಳನ್ನು ವಿರೂಪಗೊಳಿಸದಂತೆ, ಅವರು ಯಾವ ಸಂಸ್ಥೆಗಳಿಗಾಗಿ ದುಡಿದರೋ ಅವನ್ನು ಮುನ್ನಡೆಸಬೇಕಾದ ಜವಾಬ್ದಾರಿ ಸಂಸ್ಥೆಯ ಪದಾಧಿಕಾರಿಗಳಿಗಿದೆ, ಸಾರ್ವಜನಿಕರಿಗೂ ಇದೆ. ಸಂಸ್ಥೆಯ ಹಿತವನ್ನು ಕಾಯುವ ಸಲುವಾಗಿ ಎಚ್ಚೆನ್ ಎಷ್ಟೋ ಬಾರಿ ತಮ್ಮನ್ನು ಪ್ರಬಲವಾಗಿ ಕಾಡಿದ ವಿಷಯಗಳಲ್ಲಿ ಕೂಡ ವಿವಾದದ ಸುಳಿಗೆ ಸಿಗಬಾರದೆಂದು ತಮಗರಿವಿದ್ದೋ ಇಲ್ಲದೆಯೋ ಹಲವು

ಪ್ರಕಾರಗಳ ಸಮಜಾಯಿಷಿಗೆ ಸಿಲುಕಿಹಾಕಿಕೊಂಡರು. ಹಾಗೆ ನೋಡಿದರೆ, ಅವರ ಯಾವ ನಿಲುವಿನಿಂದಲೂ ಸಂಸ್ಥೆಗೆ ಸರ್ಕಾರಿ ವಲಯಗಳಿಂದ ಧಕ್ಕೆಯುಂಟಾಗುವ ಸಂಭವವಿರಲಿಲ್ಲ; ಇದ್ದರೆ ಅದನ್ನೆದುರಿಸುವುದು ಎಚ್ಚೆನ್ ಅಂಥವರಿಗೆ ಕಠಿಣವಾದ ಸಮಸ್ಯೆಯಾಗಬೇಕಾಗಿರಲಿಲ್ಲ, ಜೊತೆಗೆ, ಸಾರ್ವಜನಿಕರೂ ಅವರ ಪರವಾಗಿ ನಿಲ್ಲುತ್ತಿದ್ದರೆಂಬುದರಲ್ಲಿ ಸಂಶಯವಿಲ್ಲ. ಆದರೂ ಸಂಸ್ಥೆಯೇ ತಮ್ಮ ಜೀವಾಳವೆಂದು ಅದನ್ನು ಜೋಪಾನವಾಗಿ ಪೋಷಿಸಿದರು, ಬೆಳೆಸಿದರು. ಅಂತಹ ಸಂಸ್ಥೆಯು ಯಾವೊಂದು ಮತೀಯ ಹಿತಾಸಕ್ತಿ ಜಾಲಕ್ಕೂ ಸಿಲುಕಿ ಬಲಿಪಶುವಾಗಕೂಡದು. ಅಂತಹ ಸಾಧ್ಯತೆ ಇದೆಯೆಂಬ ಶಂಕೆಯೇನೂ ಇಲ್ಲ, ಆದರೆ ಹಿಂದೊಮ್ಮೆ ಅಂತಹದೊಂದು ಷಡ್ಯಂತ್ರದ ರಚನೆಯಾಗಿದ್ದುದು ನಿಜ. ಅದರ ಪುನರಾವರ್ತನೆಯಾಗದಂತೆ ನೋಡಿಕೊಳ್ಳುವುದು ಎಚ್ಚೆನ್ ಅವರ ಶ್ರಮಕ್ಕೆ ಗೌರವ ತರುವ ಒಂದು ಕ್ರಮ.

೧೯೭೦ರ ದಶಕದ ಆದಿಭಾಗದಲ್ಲಿ ಬೆಂಗಳೂರಿನಲ್ಲಿ ಒಂದು ತೀರಾ ಖಾಸಗಿ ಸಭೆಗೆ ಎಚ್ಚೆನ್ ಅವರನ್ನು ಆಹ್ವಾನಿಸಲಾಗಿದ್ದಿತು. ಸಭೆ ನಡೆದದ್ದು ಶಂಕರಪುರದಲ್ಲಿ, ಒಂದು ರಾಜಕೀಯ ಪಕ್ಷದ ಹಾಗೂ ಅದಕ್ಕೆ ಮಾತೃಸ್ಥಾನದಲ್ಲಿರುವ 'ಸಾಂಸ್ಕೃತಿಕ ಸಂಘಟನೆ'ಯ ನೇತಾರರು ಸಭೆಯಲ್ಲಿದ್ದರು. ಎಚ್ಚೆನ್ ಅಂದಿನ ಸಭೆಯ ಕೇಂದ್ರಬಿಂದು. ''ಎಲ್ಲ ಮತಧರ್ಮಗಳವರಿಗೂ ತಮ್ಮದೇ ಒಂದು ಲಾಂಛನವಿದೆ, ಸ್ವಕೀಯತೆ ಇದೆ. ಅದು ಆ ಧರ್ಮೀಯರನ್ನು ಒಟ್ಟಾಗಿಸುತ್ತದೆ, ವಿಶಿಷ್ಟ ಶಕ್ತಿಯನ್ನು ನೀಡುತ್ತದೆ. ನಾವು ಆ ರೀತಿ ಸಂಘಟಿತರಾಗಿಲ್ಲ ಮತ್ತು ಆಗುವ ಅವಶ್ಯಕತೆಯನ್ನೂ ಮನಗಂಡಿಲ್ಲ, ಇದು ಬಹಳ ಖೇದದ ಸಂಗತಿ. ಎಚ್ಚೆನ್ ಅಂಥವರು ಈ ದಿಸೆಯಲ್ಲಿ ಅಡ್ಡಗಾಲು ಹಾಕುವ ಬದಲು ಸಹಕಾರ ನೀಡಬೇಕು.'' ಇಂತಹ ಮಾತುಗಳು ಹರಿದುವು, ಚರ್ಚೆಗಳು ನಡೆದುವು, ಮುಂದಿನ ಕಾರ್ಯಕ್ರಮ ರೂಪಿಸುವ ವಿಧಾನದ ರೂಪುರೇಷೆಗಳು ಸಿದ್ಧಗೊಂಡವು. ಎಚ್ಚೆನ್ ನಿರಾಸಕ್ತಿಯಿಂದ ಕೆಲವೇ ಮಾತುಗಳನ್ನು ಹೇಳಿ ನಿರ್ಗಮಿಸಿದರು. ''ಇಡೀ ದಿನದ ಸಭೆಯಲ್ಲಿ ಊಟವೊಂದೇ ಆಪ್ಯಾಯಮಾನವಾಗಿದ್ದುದು'' ಎಂದು ಎಚ್ಚೆನ್ ಸಭೆಯ ತರುವಾಯದ ದಿನಗಳಲ್ಲಿ ಕೆಲವು ಆಪ್ತರೊಂದಿಗೆ ತಮ್ಮ ಅನುಭವವನ್ನು ಹಂಚಿಕೊಳ್ಳುತ್ತಿದ್ದರು. ಮತಧರ್ಮದ ಪಕ್ಷಪಾತಕ್ಕೆ ಸರ್ವಥಾ ಸೊಪ್ಪು ಹಾಕದಿರುವ ಅವರ ಧೀಮಂತತೆ, ನಿಷ್ಠೆ ಮತ್ತು ಕಾರ್ಯಪರಾಯಣತೆ ಶ್ಲಾಘನೀಯವಾದುದು. ಅದನ್ನು ನಮ್ಮ ವೈಯಕ್ತಿಕ ಮತ್ತು ಸಾಮುದಾಯಿಕ ನೆಲೆಗಳಲ್ಲಿ ಜೀವಂತಗೊಳಿಸಿಕೊಳ್ಳುವುದು ಎಚ್ಚೆನ್ ಅವರ ಸ್ಮರಣೆಗೆ ಸದಾ ಒಂದು ಮಹತ್ತರ ಘನತೆಯನ್ನು ತಂದುಕೊಡುತ್ತದೆ.

ಮತ್ತೊಮ್ಮೆ ''ಹೊಸತು'' ಎಚ್ಚೆನ್ ಅವರಿಗೆ ತಲೆಬಾಗಿ ನಮಿಸುತ್ತದೆ, ಅವರ ಸ್ಫೂರ್ತಿಸೆಲೆಯನ್ನು ತನ್ನದಾಗಿಸಿಕೊಳ್ಳುತ್ತದೆ, ಅವರ ಆಕಾಂಕ್ಷೆಗಳು ಫಲಿಸುವ ನಿಟ್ಟಿನಲ್ಲಿ ತನ್ನನ್ನು ಅರ್ಪಿಸಿಕೊಳ್ಳುತ್ತದೆ. ಎಚ್ಚೆನ್ ಇನ್ನಿಲ್ಲವೆಂಬುದು ದೈಹಿಕವಾಗಿ ನಿಜ; ಅವರು ಸದಾ ನಮ್ಮೊಂದಿಗಿದ್ದಾರೆಂಬುದನ್ನು ಬೌದ್ಧಿಕ ಮತ್ತು ನೈತಿಕ ಆಯಾಮಗಳಲ್ಲಿ, ಕ್ರಿಯೆಗಳಲ್ಲಿ, ಸಾಬೀತು ಮಾಡುವುದು ನಮ್ಮ ಕರ್ತವ್ಯ. ವಿಶೇಷತಃ ಶೈಕ್ಷಣಿಕ ಕ್ಷೇತ್ರದಲ್ಲಿ ನೈಜ ಸರ್ವೋದಯದ ಪರಿಕಲ್ಪನೆಯನ್ನು ಸದ್ಯದ ಸನ್ನಿವೇಶದಲ್ಲಿ ಮತ್ತೆ ಮನವರಿಕೆ ಮಾಡಿಕೊಳ್ಳಬೇಕಾಗಿದೆ. ಏಕೆಂದರೆ, ವ್ಯಾಪಾರೀಕರಣದ ಪಿಡುಗು ಬಾಲ್ಯದ ಎಚ್ಚೆನ್ ಅಂಥವರಿಗೆ ಮಾರಕವಾಗಿ ಪರಿಣಮಿಸಿ ''ಡಾ॥ ಎಚ್ಚೆನ್'' ಅಂಥವರ ವಿಕಾಸಕ್ಕೆ ತೊಡಕುಂಟುಮಾಡುತ್ತದೆ. ನಮಗೆ ಎಚ್ಚೆನ್ ಅಂತಹವರು ಬೇಕಾದರೆ ಅವರ ಬೆಳವಣಿಗೆಗೆ ಯಾವ ಸೂಕ್ತ ಸನ್ನಿವೇಶ ರಚಿತವಾಗಿದ್ದಿತೆಂಬುದನ್ನು ಮರೆಯದಿರೋಣ.

## ಆರ್ಥಿಕತೆಯಲ್ಲಿ ಜನವಿರೋಧಿ ನೀತಿ

**ಕಾ**ರ್ಮಿಕರ ಭವಿಷ್ಯ ನಿಧಿಯ ಮೇಲಿನ ಬಡ್ಡಿಯ ದರವನ್ನು ಶೇ. ೯.೫ಕ್ಕೆ ಏರಿಸಲಾಗಿದೆ. ಈ ಬೇಡಿಕೆ ಉದ್ಭವಿಸಿದ್ದು ಮೂರು ವರ್ಷಗಳ ಹಿಂದೆ. ಅದೇ ಕಾಲದಲ್ಲೇ ಮಾರುಕಟ್ಟೆಯಲ್ಲಿ ಸಾಮಾನ್ಯ ಬಡ್ಡಿದರ ತೀರ ಹೆಚ್ಚಿದ್ದರೂ ಬಂಡವಾಳ ಹೂಡಲು ಖಾಸಗಿಯವರಿಗೆ ಕಡಿಮೆ ದರದ ಸಾಲ ದೊರೆಯಲೆಂಬ ಆರ್ಥಿಕ ನೀತಿಯ ಮೇರೆಗೆ, ರಿಸರ್ವ್ ಬ್ಯಾಂಕ್ ಮೇಲೆ ಒತ್ತಡ ತಂದು, ಕೃತಕವಾಗಿ ಸಾಮಾನ್ಯ ಬಡ್ಡಿದರವನ್ನು ಶೇ. ೬ಕ್ಕೂ ಕಡಿಮೆಯಾಗಿ ಇಳಿಸಿದ್ದು, ಈಗಷ್ಟೆ ಬಡ್ಡಿಯ ದರವನ್ನು ಹಂತಹಂತವಾಗಿ ಏರಿಸಲಾಗುತ್ತಿದ್ದು, ಕಾರ್ಮಿಕ ಭವಿಷ್ಯನಿಧಿಗೆ ಶೇ. ೧೨ರಷ್ಟು ಬಡ್ಡಿ ನೀಡಬೇಕೆಂದು ಒತ್ತಾಯಿಸುತ್ತಿರುವಾಗ ಶೇ. ೯.೫ಕ್ಕೆ ಏರಿಸಿರುವುದು ಅಂಥ ದೊಡ್ಡ ವಿಷಯವೇನೂ ಅಲ್ಲ. ಮೂರು ವರ್ಷ ತಡಮಾಡಿದ ಬಡ್ಡಿಗೆ ಮತ್ತೂ ಬಡ್ಡಿಯನ್ನೇನೂ ನೀಡುತ್ತಿಲ್ಲ. ಭವಿಷ್ಯನಿಧಿಯ ಹಣ ಸರ್ಕಾರಿ ಕಾನೂನಿನಂತೆ ಕಟಾವು ಮಾಡಿದ್ದು, ಅದರ ಉದ್ದೇಶವೇ ಕಾರ್ಮಿಕರ ಕಲ್ಯಾಣವನ್ನು ಕಾಪಾಡುವವೆಂಬ ಸರ್ಕಾರಿ ಆಶ್ವಾಸನೆಯಾಗಿದ್ದು, ಈಗ ಬಡ್ಡಿ ಕಡಿತ ಮಾಡಿ, ಕಾರ್ಮಿಕರಿಗೆ ಕಡಿಮೆ ಹಣ ನೀಡುವುದು, ಅವರ ಹಣವನ್ನು ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಉದ್ಯಮಿಗಳಿಗೆ ಕಡಿಮೆ ದರದ ಬಂಡವಾಳವಾಗಿಸುವುದು : ಈ ನೀತಿ ಯಾರ ಕ್ಷೇಮವನ್ನು ಸಾಧಿಸುತ್ತದೆ ಎಂಬುದಕ್ಕೆ ಸಂಶೋಧನೆಯೇನೂ ಬೇಕಿಲ್ಲ. ಆದರೂ ಬಂಡವಳಿಗರು ಇಟ್ಟುಕೊಂಡ ಮಾಧ್ಯಮಗಳು ಎಡಪಂಥೀಯರನ್ನು ಈ ಕಾರಣ ಕಟುವಾಗಿ ಟೀಕಿಸುತ್ತಿರುವುದು, ಹಾಗೂ ವಿದೇಶೀ ಬಂಡವಾಳದ ಹೂಡಿಕೆಗೆ ಅವರು ಗುಟ್ಟಾಗಿ ಒಪ್ಪಿಕೊಂಡು, ಭವಿಷ್ಯನಿಧಿಯ ದರವನ್ನು ಏರಿಸಿಕೊಂಡರು ಎಂದೂ ಆಪಾದನೆ ಮಾಡುತ್ತಿರುವುದು ಮಂದಬುದ್ಧಿ ಇರುವವರಿಗೂ ಅರ್ಥವಾಗುವ ಸೋಗಲಾಡಿತನ. ಇತ್ತೀಚಿನ ವರದಿಯಂತೆ ಖಾಸಗಿ ಉದ್ಯಮದ ಲಾಭ ಈ ವರ್ಷ ಶೇ. ೩೬ರಷ್ಟು ವೃದ್ಧಿಯಾಗಿದ್ದರೆ, ಅವರ ಬಡ್ಡಿಯ ದರ ಶೇ. ೧೩ರಷ್ಟು ಕಮ್ಮಿಯಾಗಿದೆ. ಅಗ್ಗದ ಬಂಡವಾಳ ಸಿಕ್ಕಿದರೂ, ಅವರೇನೂ ಸಮರ್ಥವಾಗಿ ಬಳಸಿಕೊಂಡರೆಂದು ಹೇಳುವಂತಿಲ್ಲ. ವಾಸ್ತವ ವೃದ್ಧಿ ೩೬ ಮೈನಸ್ ೧೩ ಎಂದೇ ಹೇಳಬೇಕು. ವಿಪರೀತ ಲಾಭ ಗಳಿಸುತ್ತಿದ್ದರೂ, ಲಾಭಕ್ಕೆ ತಕ್ಕಂತೆ ತೆರಿಗೆ ನೀಡುತ್ತಿಲ್ಲ. ಹಲವು ಹತ್ತು ರೀತಿಯ ವಿನಾಯಿತಿಗಳನ್ನು ಪಡೆಯುತ್ತಿದ್ದಾರೆ. ಹತ್ತಾರು ಪರೋಕ್ಷ ಮಾರ್ಗಗಳಲ್ಲಿ ಸರ್ಕಾರಿ ಸಬ್ಸಿಡಿ ಪಡೆಯುತ್ತಾರೆ. ಸರ್ಕಾರದ ತೆರಿಗೆ ವಸೂಲಿಯು ರಾಷ್ಟ್ರದ ಒಟ್ಟು ವರಮಾನದ ಶೇಕಡಾವಾರು ಲೆಕ್ಕದಲ್ಲಿ ವರ್ಷದಿಂದ ವರ್ಷಕ್ಕೆ ಕಡಿಮೆಯಾಗುತ್ತಿದ್ದು, ಜಗತ್ತಿನ ಮುಂದುವರಿದ ರಾಷ್ಟ್ರಗಳ ತೆರಿಗೆಯ ದರಕ್ಕಿಂತ, ಭಾರತದ ಉದ್ಯಮಿಗಳು ತೀರ ಕಡಿಮೆ ತೆರಿಗೆ ನೀಡುತ್ತಿದ್ದಾರೆ. ರಾಜಕೀಯವಾಗಿಯೂ ಭವಿಷ್ಯನಿಧಿಗೆ ಬಡ್ಡಿ ಏರಿಸಬೇಕಾದದ್ದು ಯುಪಿಎ ಒಪ್ಪಿಕೊಂಡ ಕನಿಷ್ಠ ಕಾರ್ಯಕ್ರಮದನ್ವಯ ಪೂರೈಸಬೇಕಾಗಿದ್ದ ಹೊಣೆಗಾರಿಕೆ. ಹಾಗೂ ಹೆಚ್ಚಿಸಿದ ಬಡ್ಡಿ ದರದಿಂದಾಗಿ ಈ ನಿಧಿಯ ಮೇಲೆ ನೀಡಬೇಕಾದ ಹೆಚ್ಚುವರಿ ಹಣದ ರಾಶಿ ಒಟ್ಟಾರೆ ೯೦೦ ಕೋಟಿ ರೂಪಾಯಿಗಳಷ್ಟಿದ್ದು, ಅದು ಕಾರ್ಮಿಕರು ನಿವೃತ್ತರಾಗುವಾಗ ಭವಿಷ್ಯದಲ್ಲಿ ಕೊಡಬೇಕಾದದ್ದು. ಆ ಭವಿಷ್ಯದಲ್ಲಿ ಆರ್ಥಿಕ ಪ್ರಗತಿ ಎಷ್ಟು ವಿಸ್ತರಿಸಿರಬಹುದೆಂದರೆ ಈ ಮೊತ್ತ ನಗಣ್ಯವೆನಿಸಬಹುದು. ಹೀಗೆಲ್ಲಾ ಇರುವಾಗ ಉದ್ಯಮಿಗಳ ಛೇಂಬರುಗಳೂ ಮಾಧ್ಯಮಗಳೂ ಏಕೆ ಹೀಗೆ ಬೊಬ್ಬೆ ಇಡುತ್ತಾರೆ? ಕಡಿಮೆ ದರದಲ್ಲಿ ಬಂಡವಾಳ ಪಡೆದ ಉದ್ಯಮಿಗಳು ಈ ದೇಶದಲ್ಲಿ ಏನಾದರೂ ಹೆಚ್ಚು ಉದ್ಯಮ ಸೃಷ್ಟಿಸಿದರೆ? ಅವರ ಕಾರ್ಮಿಕರಿಗೆ ಹೆಚ್ಚು

೭ನೇ ಪುಟಕ್ಕೆ...

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೦೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨




ಜನವರಿ ಸಂಚಿಕೆ

**ಈ** ಸಲದ 'ಹೊಸತು' ವಿಶೇಷಾಂಕದಲ್ಲಿ ನಿಮ್ಮ ಸಂಪಾದಕೀಯ ನೋಡಿ ದುಃಖದ ಕಟ್ಟೆಯೊಡೆಯಿತು. ಸದ್ಯ, ನಿಮ್ಮ ಮನಸ್ಥಿತಿ ಈ ದೇಶದ ನಿಜ ಸ್ಥಿತಿಯಲ್ಲ. ವಿದ್ಯಾವಂತಿಕೆಯೆಂದರೆ ಬಯ್ಯುವುದು ಎಂಬ ಬುದ್ಧಿಜೀವಿ ಪದಕೋಶಕ್ಕೆ ನೀವು ಬಲಿಯಾಗುವುದಿಲ್ಲವೆಂದಿದ್ದೆ. ಆದರೆ, ನಿಮ್ಮಲ್ಲಿ ಕೂಡ ಕಮ್ಯೂ-ನ್ಯೂರೋಸಿಸ್ ಲಕ್ಷಣಗಳು ಕಾಣಿಸಿಕೊಳ್ಳತೊಡಗಿರುವುದು ದೇಶದಲ್ಲಿರುವ ಬುದ್ಧಿವಂತರ ಸ್ಥಿತಿಯ ದ್ಯೋತಕವಾಗಿದೆ.

ಕತ್ತಲಿದೆ, ಬಡತನವಿದೆ ಆದರೆ ಈ ದೇಶದಲ್ಲಿ ಸ್ಫೂರ್ತಿಗೆ ಎಂದೂ ಕೊರತೆಯಿರಲಿಲ್ಲ. ಆಮದು ಮಾಡಿಕೊಂಡ ಬುದ್ಧಿ ಮತ್ತು ಕಲ್ಪನೆಗಳು ಕೆಲಸಕ್ಕೆ ಬಾರದೆ ಅಪ್ರಸ್ತುತವಾಗುತ್ತಿರುವುದು ಸತ್ಯವಾದರೂ, ದೆಹಲಿಯಲ್ಲಿ ಒಂದು ಕಲ್ಕತ್ತದಲ್ಲಿ ಒಂದು ಔದ್ಯೋಗಿಕ ನೀತಿ ಅನುಸರಿಸುವುದರಿಂದ ದೇಶದಲ್ಲಿ ಕತ್ತಲೆ ಹೆಚ್ಚಾಗುವ ಲಕ್ಷಣಗಳೆ ಜಾಸ್ತಿ. ಬಂಗಾಳದ ಸರ್ಕಾರದ ಅಂಕಿಅಂಶಗಳ ಪ್ರಕಾರವೇ, ಶೇಕಡಾ ೪೮ರಷ್ಟು ಹಳ್ಳಿಗಳಿಗೆ ಅವರು ವಿದ್ಯುತ್ ಕೂಡ ಸರಬರಾಜು ಮಾಡಿಲ್ಲ. ಕನಿಷ್ಠ ಅಗತ್ಯದ ಪೂರೈಕೆ ಅಂದರೆ, ಸಾರಾಯಿ ಎಂತಾದರೆ, ದೇಶದಲ್ಲಿ ಅದರಲ್ಲೂ ಬಂಗಾಳ, ಬಿಹಾರಗಳಲ್ಲಿ ಬಡತನವೇ ಇಲ್ಲ. ಸಮಸ್ಯೆ ಸಿದ್ಧಾಂತವೂ ಅಲ್ಲ ಅಥವಾ ನಿಮಗಂಟಿರುವ ಕೋಮುವಾದದ ವ್ಯಾಧಿಯೂ ಅಲ್ಲ. ಸಮಸ್ಯೆ ಬಡತನದಿಂದ ಮತ್ತು ಅದರ ಮೂಲದಿಂದ ದೂರವಿದ್ದು ಬಡತನದ ಬಗ್ಗೆ ಚರ್ಚೆಗಳನ್ನು ಮಾಡುವ ಬುದ್ಧಿಜೀವಿಗಳಿಂದ ಹೆಚ್ಚು.

ದೊಡ್ಡಬಳ್ಳಾಪುರ — **ಟಿ. ಎನ್. ಬಾಲಾಜಿ**

ಕನ್ನಡ ಸಾಹಿತ್ಯಕ್ಕೆ, ಕರ್ನಾಟಕ ರಾಜ್ಯಕ್ಕೆ ಸಂಬಂಧಿಸಿದ ಹಲವಾರು ಉತ್ತಮ ಲೇಖನಗಳ ಈ ವಿಶೇಷಾಂಕ ತುಂಬಾ ವಾಚನೀಯವೂ ಮನನೀಯವೂ ಆಗಿದೆ. ಉತ್ತಮ ಮುದ್ರಣ ಆಕರ್ಷಕವಾಗಿದೆ. ಈ ಬೃಹತ್ ಸಂಚಿಕೆ ಸಂಗ್ರಾಹ್ಯವಿದೆ. 'ಹೊಸತು' ಯಾವಾಗಲೂ ಹೊಸಹೊಸ ಸಂಸ್ಕೃತಿ, ಸಾಹಿತ್ಯದ ಬೆಳಕನ್ನು ಈ ರೀತಿ ನೀಡುತ್ತಾ ಇರಲಿ.

ಕಾಸರಗೋಡು — **ಕಯ್ಯಾರ ಕಿಞ್ಞಣ್ಣರೈ**

'ಹೊಸತು' ವಿಶೇಷ ಸಂಚಿಕೆ ಸಂಗ್ರಾಹ್ಯಯೋಗ್ಯ ಸಂಚಿಕೆ. ಪ್ರಗತಿಪರ ವೈಚಾರಿಕ ಲೇಖನಗಳು ಪತ್ರಿಕೆಯ ಶೋಭೆಗೆ ಗರಿ ಮೂಡಿದಂತಾಗಿವೆ. ''ಕರ್ನಾಟಕ ಸಂದರ್ಭದಲ್ಲಿ ಸಂಸ್ಕೃತಿ ಚಿಂತನೆ''ಯ ಲೇಖನದಲ್ಲಿ ಹೊಸತುವಿನ ಪ್ರಶ್ನಾವಳಿಗೆ ಸಮಂಜಸ ಅಭಿಪ್ರಾಯವನ್ನು ಎಲ್ಲ ಸಾಹಿತಿ ಚಿಂತಕರು ತಮ್ಮ ಭಾವನೆಗಳನ್ನು ಅಭಿವ್ಯಕ್ತಿಗೊಳಿಸಿದ್ದಾರೆ. ಎಲ್ಲಾ ಚಿಂತನಾಶೀಲ ಸಾಹಿತಿ ಗಣ್ಯವರ್ಯರಿಗೆ ಅಭಿನಂದನೆಗಳು.

ವಿಶೇಷ ಸಂಚಿಕೆಯಲ್ಲಿ ವಾಣಿಜ್ಯ ಜಾಹಿರಾತುಗಳಿಗೆ ಮನ್ನಣೆ ಕೊಡದೆ ಪ್ರಸಿದ್ಧ ಪ್ರಕಾಶನ ಸಂಸ್ಥೆಗಳ ಪ್ರಕಟಿತ ಪುಸ್ತಕಗಳ ಮಾಹಿತಿಯೊಂದಿಗೆ ಪ್ರಚಾರ ಮಾಡಿದ್ದು ವಿಶೇಷ! ಇದು ಪತ್ರಿಕಾರಂಗದಲ್ಲಿಯೇ ಉತ್ತಮ ಬೆಳವಣಿಗೆ ಹಾಗೂ ಪುಸ್ತಕ ಪ್ರಿಯರಿಗೆ ಸ್ಫೂರ್ತಿಯಾಗಿದೆ.

ಭಾನಾಪುರ (ಕೊಪ್ಪಳ) — **ಶಂಕರ ಪತ್ತಾರ**

ಎಲ್ಲಾ ಬಗೆಯ, ಎಲ್ಲಾ ವರ್ಗದ ಜನರೂ ಮೆಚ್ಚುವಂತಹ ಕತೆ, ಕವಿತೆ, ಪಾಂಡಿತ್ಯಪೂರ್ಣ ಲೇಖನಗಳಿಂದ ತುಂಬಿ ಹೊರಬಂದ ವಿಶೇಷಾಂಕ ಅತ್ಯಂತ ಸೊಗಸಾಗಿದೆ, ಅದ್ಭುತವಾಗಿದೆ. ''ಹೊಸತು'' ಪತ್ರಿಕಾ ಪ್ರಪಂಚದಲ್ಲೊಂದು ಮೈಲುಗಲ್ಲು.

ಬೆಂಗಳೂರು — **ಎಂ. ವಿ. ಭಟ್ (ಶ್ರೀಮಿತ್ತೂರು)**

ವಿಶೇಷ ಸಂಚಿಕೆ ತುಂಬಾ ಸೊಗಸಾಗಿ ಮೂಡಿಬಂದಿದೆ. ಯಾವುದು ಓದುವುದು, ಯಾವುದು ಬಿಡುವುದು, ಮೊದಲು ಯಾವುದು ಓದಬೇಕು ಅನ್ನಿಸುವಷ್ಟು ಚೆನ್ನಾಗಿವೆ.

ಸಂಪಾದಕೀಯ ಅರ್ಥಗರ್ಭಿತವಾಗಿ ಮೂಡಿಬಂದಿದೆ. ಅದರಲ್ಲೂ ನನಗೆ ತುಂಬಾ ಇಷ್ಟವಾದ ಲೇಖನವೆಂದರೆ, ಎಲ್. ವಿ. ಶಾಂತಕುಮಾರಿಯವರ ಖಾಲಿಸೈಟುಗಳು, ದೀಪದ ಹುಳುಗಳು. ಈ ಶೀರ್ಷಿಕೆ ನೋಡಿ ಇದರಲ್ಲೇನಿದೆ ಅಂತ ಸುಮ್ಮನಾದೆ. ಆದರೆ ಓದಲು start ಮಾಡಿದ ಮೇಲೆ ನನಗೂ ಬೆಳಕನ್ನರಸಿಕೊಂಡು ಹೋಗಬೇಕೆನ್ನಿಸಿತು.

ಖಾಲಿ ಸೈಟಿನ ಗೋಳನ್ನು ಸಿಂಪಲ್ಲಾಗಿ ಚಿತ್ರಿಸಿದ್ದಾರೆ. ನಾವುಗಳು ಬೆಳಕನ್ನರಸುವ ಹುಳುಗಳಾಗಬೇಕಲ್ಲವೆ?

ಮಿಡಗೇಶಿ — **ಎಂ. ಎನ್. ಶಿವರಾಮು**

ಕುವೆಂಪು ಶತಮಾನೋತ್ಸವ ವರ್ಷದ ಅಂತ್ಯದಲ್ಲಿ ಪ್ರಕಟವಾದ ಡಾ|| ರಹಮತ್ ತರೀಕೆರೆ ಅವರ ಕ್ಷೇತ್ರಕಾರ್ಯ ಅನುಭವದ ಪ್ರತಿಫಲದ ಸಂಕೇತವಾಗಿ ಚಿಂತಿಸಿದ ''ಕುವೆಂಪು ಚಿಂತನೆ: ಆಕರ್ಷಣೆ ಹಾಗೂ ವಿಕರ್ಷಣೆಗಳ ನಡುವೆ'' ಎಂಬ ಲೇಖನ ನಿಜಕ್ಕೂ ಬಲು ಆಕರ್ಷಣೀಯವಾಗಿತ್ತು. ರಹಮತ್ ತರೀಕೆರೆ ಅವರಿಗೆ ವಿಶೇಷವಾದ ವಂದನೆಗಳು. ತರೀಕೆರೆ ಅವರ ಭಾಷೆ ಜನಸಾಮಾನ್ಯರಿಗೂ ಅರ್ಥವಾಗುವ ರೀತಿಯಲ್ಲಿದೆ. ಬರಹದಲ್ಲಿ ಗೊಂದಲವಿಲ್ಲ, ಸ್ಪಷ್ಟತೆ ಇದೆ. ಲೇಖನವನ್ನು ಓದುತ್ತಾ ಹೋದಂತೆ ಕುತೂಹಲವನ್ನು ಕೆರಳಿಸುತ್ತದೆ. ಕುವೆಂಪು ಅವರ ಚಿಂತನೆಗಳಿಂದ ಪ್ರೇರಣೆ ಪಡೆದ ಆಧುನಿಕ ಸಾಹಿತ್ಯದ ಲೇಖಕರನ್ನು ಹಾಗೂ ನಾಡಿನ ವಿವಿಧ ಕ್ಷೇತ್ರಗಳಲ್ಲಿ ಹೆಸರು ಮೂಡಿಸಿದ ಚಿಂತಕರ ಸಮುದಾಯವನ್ನು ಉಲ್ಲೇಖಿಸುತ್ತಾ, ಕುವೆಂಪು ಅವರ ಸಾಹಿತ್ಯವನ್ನು ವಿಶ್ಲೇಷಿಸಿ, ಕುವೆಂಪು ಅವರು ಕಳೆದ ಶತಮಾನದ ನಾಡಿನ ಒಬ್ಬ ''ಸಾಂಸ್ಕೃತಿಕ ನಾಯಕ'' ಎಂದು ಹೇಳಿರುವುದು ಅರ್ಥಪೂರ್ಣವಾಗಿದೆ.

ಶಿವಮೊಗ್ಗ — **ಕಂದಗಲ್ ಹನುಮಂತಪ್ಪ**

ಫೆಬ್ರವರಿ ಸಂಚಿಕೆ

''ಈ ತಿಂಗಳು'' ಓದುತ್ತಿದ್ದ ಸಮಯದಲ್ಲಿ ಎಚ್ಚೆನ್‌ರವರ ಮರಣದ ವಾರ್ತೆ ದೂರದರ್ಶನದಲ್ಲಿ ಬಿತ್ತರವಾಗುತ್ತಿದ್ದು ಮನಸ್ಸಿಗೆ ತುಂಬಾ ಬೇಸರವಾಯಿತು. ಸುನಾಮಿಯ ಬಗ್ಗೆ ಟಿ. ಆರ್. ಅನಂತರಾಮು ಅವರು ತಿಳಿಸಿದ ವಿವರಗಳು ಅದ್ಭುತ. ಗುಬ್ಬಚ್ಚಿಗಳು ಮಾನವರ ಕೆಟ್ಟಹವ್ಯಾಸಗಳನ್ನು ನೋಡಿ ದೂರ ಸರಿಯುತ್ತಿವೆ. ಮಾನವ ಅವುಗಳಿಗಿಂತ ಕಡೆಯಾದನಲ್ಲ!

ಪಾಂಡವಪುರ — **ಅ. ಮೃತ್ಯುಂಜಯ**

ಗಾಂಧೀವಾದಿ, ಶಿಕ್ಷಕ, ಶಿಕ್ಷಣ ತಜ್ಞ, ಮೂಢನಂಬಿಕೆಗಳ ಕಟ್ಟಾವಿರೋಧಿ, ಡಾ|| ಎಚ್. ನರಸಿಂಹಯ್ಯನವರನ್ನು ಸ್ಮರಿಸಿ ಅವರಿಗೆ ಆಯುರಾರೋಗ್ಯ ಕರುಣಿಸಲೆಂದು ಆಶಿಸಿರುವ ಪರಿ ಅನನ್ಯ. ಈ ತಿಂಗಳು ಅಡಿಯಲ್ಲಿ, ಸಂಪಾದಕೀಯದಲ್ಲಿನ ಬರಗೂರು ರಾಮಚಂದ್ರಪ್ಪನವರ ''ಕನ್ನಡ ಮನಸ್ಸು'' ಸಕಾರಾತ್ಮಕ ಆತ್ಮ ಚಿಂತನೆಯಾಗಿದೆ. ''ಪ್ರತ್ಯೇಕ ರಾಜ್ಯದ ಬೇಡಿಕೆ''ಯಲ್ಲಿ ಡಾ|| ಬಿ. ಕೃಷ್ಣಮೂರ್ತಿಯವರ ಧೋರಣೆ ಚಿಂತನೆಗೆಡೆಮಾಡಿಕೊಡುವಂತಿದೆ ಎಂದು ನಿಸ್ಸಂದೇಹವಾಗಿ ಹೇಳಬಹುದಾಗಿದೆ.

ಬೆಂಗಳೂರು — **ನೆ. ಲ. ರಾಂ.**

ಹಕ್ಕುಗಳೆಂದಾಕ್ಷಣ ಸರ್ವೋದಯದ ಗಂಡುಗಟ್ಟನ್ನು ಬಿಚ್ಚುತ್ತೇವೆ. ಬಡವರ ಬದುಕಿನಾಗಿನ ಬೆಳಕಿನಲ್ಲಿ ಬೆತ್ತಲಾಗುವ ನಾವು, ಕತ್ತಲೆಯ ಕಲಿಪುರಾಣವನ್ನು ಬೋಧಿಸುತ್ತೇವೆ. ಮೇರು ವ್ಯಕ್ತಿತ್ವದ ಕೊಂಡಿಯೂ ಸಹ ಅಡಕೊತ್ತಿನಲ್ಲಿ ಸಿಕ್ಕ ಅಡಿಕೆಯಂತೆ, ಮಾಲಿಕತ್ವದ ಬಾಲಂಗೋಚಿಯಾಗುತ್ತಿರುವುದರಿಂದಲೆ? ಹೀಗಿರುವಾಗಲೆ ಗಾಂಧಿ, ಮಾವೋರಂಥವರು ಪ್ರಸ್ತುತವೆನಿಸುತ್ತಾರೆ. ಪ್ರಕೃತಿಸಿಂಧುವಾದ ಈ ಭೂಮಿಯ ಮೇಲೆ ಎಷ್ಟು ದಿನ ವಿಚಾರಹೀನರಾಗಿ ಜೀವ ಜಗತ್ತಿನೊಂದಿಗೆ ನಿರಂಕುಶ ಪ್ರಭುತ್ವ ಸ್ಥಾಪಿಸುತ್ತ ಹೊರಟು, ವರ್ಣ ರಹಿತ ನಾಗರಿಕರೊಳಗೊಬ್ಬ ನಾನಾಗುವುದಿಲ್ಲವೋ, ಅಲ್ಲಿಯ ತನಕ ಸರ್ವೋದಯದ ಸಮಕಾಲೀನ ಪೌರತ್ವ ಅರ್ಥಹೀನ, ಅನಗತ್ಯ. ಎಚ್. ಎಸ್. ದೊರೆಸ್ವಾಮಿಯವರ ಲೇಖನ ತಾರ್ಕಿಕ ಮನೋಭಾವವನ್ನು ಸಿದ್ಧಗೊಳಿಸುವಂತಿತ್ತು.

ಬೆಂಗಳೂರು — **ಜವಳಗಿ. ಸೈಬಣ್ಣ**

ಇತಿಹಾಸವೆಂದರೆ ರಾಜರು ಮತ್ತು ಅವರ ಸಮಾಧಿಗಳು, ವಿವರಣೆ ಹಾಗೂ ಕಾಲಕಾಲಕ್ಕೆ ನಾಗರಿಕತೆಗಳ ಏರುಪೇರುಗಳಿಗನುಸಾರವಾಗಿ ಮನ ಬಂದಂತೆ ಬದಲಾಯಿಸಬಹುದಾದ ದಾಖಲೆಗಳು ಎನ್ನುವ ಬುದ್ಧಿವಂತರಿಗೆ ಮತ್ತು ಚರಿತ್ರೆಯ ಬಗ್ಗೆ ಸರಿಯಾದ ಮಾಹಿತಿ ಇಲ್ಲದ ಜನ ಸಮೂಹಕ್ಕೆ ಅತ್ಯಂತ ಉಪಯುಕ್ತ ವಿಚಾರಗಳನ್ನು ಸ್ಪಷ್ಟಪಡಿಸಿದ ವಿರಳ ಎನ್ನಬಹುದಾದ ಲೇಖನವಿದೆ. ಮಾನವ ತನ್ನನ್ನು ಗುರುತಿಸಿಕೊಂಡ ರೀತಿ, ಸಾಂಸ್ಕೃತಿಕ ಬೆಳವಣಿಗೆ, ತಾತ್ವಿಕ ನೆಲೆಗಟ್ಟುಗಳು, ಸಾಮಾಜಿಕ ಬದುಕು, ಧಾರ್ಮಿಕ ಪರಂಪರೆಗಳು, ರಾಜ್ಯಾಡಳಿತ ಪದ್ಧತಿಗಳು, ಜೀವನದ ವಿಕಾಸ ಹಾಗೂ ಸಂಸ್ಕೃತಿಯ ಏಳುಬೀಳುಗಳು ಎಲ್ಲವೂ ಇತಿಹಾಸವೇ ಎಂಬುದು ನಿರ್ವಿವಾದವಾದುದು. ಆದರೆ ಗುಲಾಮತನ, ಮಾನವೀಯ ಅಪಮೌಲ್ಯಗಳು, ಅಧಿಕಾರಶಾಹಿ ತತ್ತ್ವಗಳು, ಆಕ್ರಮಣ, ಹೊಸ ಧರ್ಮಗಳ ಉದಯ, ಅವುಗಳ ಪ್ರಚಾರದಾಯಿಕ ಎಡರುತೊಡರುಗಳು, ಎಲ್ಲವೂ ಇತಿಹಾಸದ ಭಾಗ.

ಬೆಂಗಳೂರು — **ನರೇಂದ್ರ ಸಿರಕಜೆ**

''ಇತಿಹಾಸದ ಅಧ್ಯಯನಕ್ಕೆ ಅಗತ್ಯವಾದ ಬೌದ್ಧಿಕ ಶಿಸ್ತನ್ನು ಮೊದಲು ಕಲಿಯೋಣ'' ಎಂಬ ನಿಮ್ಮ ಮಾತು ಅರ್ಥಪೂರ್ಣವಾಗಿದೆ. ಇತಿಹಾಸದ ಕಹಿ ಘಟನೆಗಳು ಅಪಕ್ವ ಮತ್ತು ಮುಗ್ಧ ಎಳೆಯರ ಮನಸ್ಸಿಗೆ ಘಾಸಿ ಮಾಡಬಲ್ಲುದು ಎಂಬುದನ್ನು ನಾವು ಒಪ್ಪಿಕೊಂಡು ಅದರಿಂದ ಅವರನ್ನು ತಪ್ಪಿಸಬೇಕಾದ ಅವಶ್ಯಕತೆ ಇಂದು ಇದೆ. ಬೌದ್ಧಿಕ ಶಿಸ್ತಿನಿಂದ ರಚಿಸಿದ ಚರಿತ್ರೆಯ ಅಂಶವನ್ನಷ್ಟೇ ಶಾಲಾ ಕಾಲೇಜುಗಳ ಹಂತದಲ್ಲಿ ಮಕ್ಕಳಿಗೆ ಬೋಧನೆಯನ್ನಾಗಿಸಬೇಕು. ಯಥಾವತ್ತಾದ ಚರಿತ್ರೆಯ ಮುಕ್ತ ಅಧ್ಯಯನ ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ಬಿಟ್ಟುಬಿಡಬೇಕು ಎಂಬುದು ನನ್ನ ಅಂಬೋಣ.

ಸುರತ್ಕಲ್ — **ಟಿ. ಸಿ. ಶ್ರೀಯಾನ್**

ಕರ್ನಾಟಕ 'ಸ್ವಾತಂತ್ರ್ಯ ಸಂಗ್ರಾಮ'ದ ಇಲ್ಲದೇ ಇದ್ದ ಪ್ರಶ್ನೆಯನ್ನು ಡಾ|| ದೊಡ್ಡಮೇಟಿ ಅಶೋಕರು ಎತ್ತಿದ್ದು ಶುದ್ಧ ಕುಚೋದ್ಯತನ. ಇಂದು ಜಗತ್ತಿನ ಪರಿಸ್ಥಿತಿಯಲ್ಲಿ ಅಮೇರಿಕೆ ಒಂದೇ ಬಲಾಢ್ಯ ರಾಷ್ಟ್ರವಾಗಿ ಇಡೀ ಜಗತ್ತನ್ನು ಆಳುವ ಅಪಾಯವಿದ್ದಾಗ, ಚೀನ ಮತ್ತು ಭಾರತಗಳು ಬಲಾಢ್ಯ ರಾಷ್ಟ್ರಗಳಾಗಿ ಜಗತ್ತಿನ ರಾಜಕೀಯ ಶಕ್ತಿ ವಿಕೇಂದ್ರಿತವಾಗುವಂತೆ ನೋಡಿಕೊಳ್ಳಬೇಕಾಗಿದೆಯೇ ಹೊರತು ಭಾರತವನ್ನು ಒಡೆದು ದುರ್ಬಲಗೊಳಿಸುವ ಮಾತನ್ನು ತೆಗೆಯಬಾರದು. ಕರ್ನಾಟಕ ಭಾರತದ ಇತರ ರಾಜ್ಯಗಳಿಗಿಂತ ಹಿಂದೆ ಇದೆಯೆಂದು ಹೇಳಲಾಗದು. ಭಾರತದ ಸರಾಸರಿ ಪ್ರಗತಿಗಿಂತ ಹೆಚ್ಚಿನ ಪ್ರಗತಿ ನಮ್ಮ ರಾಜ್ಯದಲ್ಲಿ ಆಗಿದೆ. ಬಡತನದ ಮಟ್ಟವೂ ಸಹ ಭಾರತದ ಸರಾಸರಿಗಿಂತ ನಮ್ಮ ರಾಜ್ಯದಲ್ಲಿ ಕೆಳಗೆ ಇದೆ. ಎನ್ಎಸ್ಎಸ್ ೫೫ನೆಯ ರೌಂಡ್ (೧೯೯೯-೨೦೦೦) ಪ್ರಕಾರ, ರಾಷ್ಟ್ರೀಯ ಬಡತನದ ರೇಖೆಯನ್ನು ತೆಗೆದುಕೊಂಡಾಗ, ಭಾರತದ ಗ್ರಾಮೀಣ ಭಾಗಗಳಲ್ಲಿ ೨೭.೧ ಪ್ರತಿಶತ ಬಡವರಿದ್ದರೆ, ಕರ್ನಾಟಕದಲ್ಲಿ ೨೧.೪ ಪ್ರತಿಶತ ಬಡವರಿದ್ದರು. ನಗರ ಪ್ರದೇಶಗಳಲ್ಲಿ, ಭಾರತದ ಸರಾಸರಿಯಲ್ಲಿ ೨೩.೬ ಪ್ರತಿಶತ ಬಡವರಿದ್ದರೆ, ಕರ್ನಾಟಕದಲ್ಲಿ ೧೮.೩ ಪ್ರತಿಶತ ಬಡವರಿದ್ದರು. ಪ್ರಾದೇಶಿಕ ಬೇರೆಬೇರೆ ಬಡತನದ ರೇಖೆಗಳನ್ನು ತೆಗೆದುಕೊಂಡರೆ, ಕರ್ನಾಟಕದಲ್ಲಿಯ ಬಡತನ ಇನ್ನೂ ಕಡಿಮೆಯಿದ್ದದ್ದು ಕಂಡು

ಬಂತು (ನೋಡಿ : Economic and Political Weekly, September 18, 2004, ಪುಟ ೪೨೫೩). ಆರ್ಥಿಕ ಬೆಳವಣಿಗೆಯೂ ಕರ್ನಾಟಕದಲ್ಲಿ ಭಾರತದ ಸರಾಸರಿಗಿಂತ ಸ್ವಲ್ಪ ಹೆಚ್ಚೇ ಇದೆ. ಕರ್ನಾಟಕದ ಒಳಗಣ ವೈಷಮ್ಯಗಳಿಗೆ ಕೇಂದ್ರವೇ ಕಾರಣವೆಂದು ಹೇಗೆ ಹೇಳುವುದು ? ಇಂಗ್ಲಿಷಿನ ಬದಲಾಗಿ ಹಿಂದಿ ಸಾಮ್ರಾಜ್ಯ ಕರ್ನಾಟಕದ ಮೇಲೆ ಹೇರಲಾಗಿದೆಯೆಂದು ಹೇಳುವುದರಲ್ಲಿ ತಥ್ಯವಿಲ್ಲ. ಸ್ವಾತಂತ್ರ್ಯದ ನಂತರ ಇಂಗ್ಲಿಷ್ ಇನ್ನೂ ಪ್ರಬಲವಾಗಿದೆ. ಇದಕ್ಕೆ ಕೇಂದ್ರ ಸರಕಾರ ಕಾರಣವಲ್ಲ. ನಗರಗಳಲ್ಲಿ ಎಷ್ಟು ಕನ್ನಡಿಗರು ತಮ್ಮ ಮಕ್ಕಳನ್ನು ಕನ್ನಡ ಮಾಧ್ಯಮದ ಶಾಲೆಗಳಿಗೆ ಕಳಿಸುತ್ತಾರೆ ? ಭೂ-ಸುಧಾರಣೆಗಳು ವಿಫಲವಾಗಿ ದಲಿತರ ಸಮಸ್ಯೆ ಉಲ್ಬಣವಾಗುವುದಕ್ಕೆ ಗ್ರಾಮಗಳ ಮೇಲೆ ಹಿಡಿತವಿದ್ದ ಪ್ರಧಾನಜಾತಿಗಳೇ ಕಾರಣವಾದರು, ಕೇಂದ್ರವಲ್ಲ. 'ಸೋವಿಯತ್ ಒಕ್ಕೂಟ ಒಡೆದು ಹಲವು ರಾಷ್ಟ್ರಗಳು ಆಗಲಿಲ್ಲವೆ ?' ಎಂದು ಬೇರೆ ಲೇಖಕರು ಕೇಳುತ್ತಾರೆ. ಇದೇ ಮಾದರಿಯಲ್ಲಿ ಚೀನ ಏಕೆ ಒಡೆಯಲಿಲ್ಲ? ಅಲ್ಲಿಯ ಆಂತರಿಕ ವೈಷಮ್ಯಗಳು ಭಾರತಕ್ಕಿಂತ ಕಡಿಮೆಯೇನಿಲ್ಲ! ಮೇಲಾಗಿ ಸೋವಿಯತ್ ಒಕ್ಕೂಟ ಒಡೆದು ಅಲ್ಲಿಯ ಜನರಿಗೆ ಹಿತವಾಯಿತೆ ? ನಿರುದ್ಯೋಗ, ಅಪರಾಧ ಮತ್ತು ಬಡತನ ಅಲ್ಲಿ ಪರಮಾವಧಿಗೆ ಏರಿದವು. ಬಡಜನರ ಹಿತರಕ್ಷಣೆಗೆ, ಆಂತರಿಕ ವೈಷಮ್ಯಗಳನ್ನು ಹೋಗಲಾಡಿಸಲಿಕ್ಕೆಂದೇ ಹೋರಾಟ ಮಾಡಬಹುದು. ದೇಶವನ್ನು ಒಡೆದು ಅರಾಜಕತೆ ನಿರ್ಮಿಸಿ ಯಾವ ಹಿತವೂ ಆಗುವುದಿಲ್ಲ.

ಇನ್ನೊಂದು ಲೇಖನ ಶಂಕರರ ಅದ್ವೈತ ಸಿದ್ಧಾಂತದ ಮೇಲೆ ಡಾ॥ ಕೆ. ಮೋಹನ ಕೃಷ್ಣ ರೈ ಬರೆದುದು. ಶಂಕರರ ಮಾಯಾವಾದದ ಬಗ್ಗೆ ಮ್ಯಾಕ್ಸ್ ವೀಬರ್ ಎಪ್ಪತ್ತೈದು ವರ್ಷಗಳ ಹಿಂದೆಯೇ ಈ ಪ್ರಶ್ನೆ ಎತ್ತಿದ್ದರು. ಅದನ್ನು ಡಾ॥ ರಾಧಾಕೃಷ್ಣನ್ ಅವರು ಖಂಡಿಸಿ ಬರೆದುದು ಕೂಡ ಅರವತ್ತೈದು ವರ್ಷಗಳ ಹಿಂದೆ. ಮಾಯಾ ಎಂದರೆ ಜಗತ್ತಿಗೆ ಅಸ್ತಿತ್ವವಿಲ್ಲವೆಂದಲ್ಲ, ಬ್ರಹ್ಮ ಸತ್ಯದ ಹೋಲಿಕೆಯಲ್ಲಿ ಅದು ಅರೆ ಸತ್ಯವೆಂದರ್ಥ. ಯಾವ ಅರ್ಥದಲ್ಲಿ ಮಾಯಾವಾದವನ್ನು ಮಂಡಿಸಲಾಗಿದೆಯೆಂದು ತತ್ವವೇತ್ತ ಶ್ರೀ ಮುಮತಾಜ ಅಲಿ ಅವರು ತಮ್ಮ ಅತ್ಯಂತ ಮೌಲಿಕ ಪುಸ್ತಕದಲ್ಲಿ (*Jewel in the Lotus - Deeper Aspects of Hinduism, New Delhi : Sterling, 1997,* ಪುಟ ೫೭-೬೪) ಮನದಟ್ಟಾಗಿ ವಿವರಿಸಿದ್ದಾರೆ. ಡಾ॥ ರೈ ಅವರು ಈ ಪುಸ್ತಕವನ್ನು, ಸಾಧ್ಯವಾದರೆ ಇಡಿಯಾಗಿ, ಇಲ್ಲವೇ ನಮೂದಿಸಿದ ಪುಟಗಳನ್ನಾದರೂ ಮುಕ್ತ ಮನಸ್ಸಿನಿಂದ ಓದಬೇಕು. ಶಂಕರರ ಅದ್ವೈತ ಸಿದ್ಧಾಂತ ಕೆಳವರ್ಗದ ಜನರಿಗೆ ವಿರುದ್ಧವಾಗಿದೆಯೆಂದು ಅರ್ಥೈಸುವುದು ವಿತಂಡವಾದ. ಸ್ವಾಮಿ ವಿವೇಕಾನಂದರು ಹೇಳಿದಂತೆ ಅದ್ವೈತ ಪ್ರತಿಯೊಬ್ಬನಲ್ಲೂ ಆತ್ಮವಿಶ್ವಾಸ ತುಂಬುತ್ತದೆ ಮತ್ತು ಅಸಮಾನತೆಗೆ ವಿರುದ್ಧವಾಗಿದೆ.

ಬೆಂಗಳೂರು

***ಡಾ॥ ಎಂ. ವಿ. ನಾಡಕರ್ಣಿ***

---

***೫ನೇ ಪುಟದಿಂದ... ಸಂಪಾದಕೀಯ***

ಬೋನಸ್ ಹಂಚಿದರೆ ? ಇದಕ್ಕೆ ಹೊಂದಿಕೊಂಡ ವಿಚಾರವೆಂದರೆ, ಪೆನ್ಷನ್ ಹಣವೂ ಸೇರಿದಂತೆ ಸಾರ್ವಜನಿಕರ ಎಲ್ಲ ಉಳಿತಾಯದ ಹಣವನ್ನು ಸರ್ಕಾರ ಕೆಲವು ಕಲ್ಯಾಣ ನೀತಿಗಳಿಗನುಸಾರ ರಕ್ಷಿಸುತ್ತಿದ್ದು, ಈಗ ಅವನ್ನು ಸಡಿಲಗೊಳಿಸಿ, ಈ ಹಣವನ್ನು ಷೇರುಪೇಟೆಯ ವ್ಯವಹಾರದಲ್ಲಿ ತೊಡಗಿಸಲು ಒತ್ತಾಯ ಉಂಟುಮಾಡುತ್ತಿರುವುದು. ಈ ಉಳಿತಾಯ ಸಂಸ್ಥೆಗಳು ಈಗ ಸರ್ಕಾರದ ಹಿಡಿತದಲ್ಲಿ ಇದ್ದು, ಅವುಗಳ ಅಸಮರ್ಪಕತೆ ಏನಿದ್ದರೂ ಅದು ಸರ್ಕಾರದ ಜವಾಬ್ದಾರಿ. ಯುಟಿಐ ಹಣವನ್ನು ರಿಲೈಯನ್ಸ್ ಕಬಳಿಸಿದ ವಿಚಾರಣೆಯ ಗತಿ ಏನಾಯ್ತು? ಉಳಿತಾಯ ಸಂಸ್ಥೆಗಳಿಗೆ ಸಾಕಷ್ಟು ಸ್ವಾಯತ್ತತೆ ನೀಡಿ, ಉಳಿತಾಯದಾರರ ಪ್ರತಿನಿಧಿಗಳನ್ನು ತೀರ್ಮಾನ ತೆಗೆದುಕೊಳ್ಳುವ ಪ್ರಕ್ರಿಯೆಯಲ್ಲಿ ಸೇರಿಸಿ, ಪಾರದರ್ಶಕತೆ ತಂದರೆ, ಆಗ ಅವೂ ಲಾಭಕರ ಹೂಡಿಕೆ ಮಾಡಬಲ್ಲವು. ಆಗ ಬಹುಶಃ ಸರ್ಕಾರದ ಸ್ವಂತ ಬಳಕೆಗೆ ಸುಲಭ ದರದ ಸಾಲ ದೊರೆಯದೆಯೂ ಹೋಗಬಹುದು. ಅದಕ್ಕೆ ಅವರು ಸಿದ್ಧರೆ ? ವಾಸ್ತವದಲ್ಲಿ ಅದು ಸಾಧ್ಯ. ಸರ್ಕಾರ ಸಾರ್ವಜನಿಕ ಸಾಲ ತೆಗೆಯುವುದನ್ನು ಕಡಿಮೆ ಮಾಡಿ, ಲಾಭ ಪಡೆಯುತ್ತಿರುವ ಉದ್ಯಮಿಗಳಿಂದ ಪ್ರಗತಿಪರ ರಾಷ್ಟ್ರಗಳಲ್ಲಿರುವ ಮಟ್ಟದಲ್ಲಾದರೂ ತೆರಿಗೆ ವಸೂಲಿ ಮಾಡಿದರೆ ಅದು ಸಾಧ್ಯ. ಭವಿಷ್ಯನಿಧಿಗೆ ಏಕೆ ಶೇ. ೧೨ ಬಡ್ಡಿ ಬರಬೇಕು ? ವಾಸ್ತವ ಬಡ್ಡಿ ಎಂದರೆ ಮೇಲ್ನೋಟದ ಬಡ್ಡಿಗೆ ಆರ್ಥಿಕತೆಯ ಪ್ರಗತಿಯ ದರ ಸೇರಿಸಿ, ಅದರಲ್ಲಿ ಹಣದುಬ್ಬರದ ದರವನ್ನು ಕಳೆಯಬೇಕು. ಉಳಿತಾಯಕಾರರ ಹಣ ಸರ್ಕಾರದವರಲ್ಲೇ ಇರುವುದರಿಂದ, ಈ ವಾಸ್ತವ ದರ ಸುಮಾರು ಶೇ. ೧೨ಅನ್ನು ನೀಡುವುದು ಅವರ ಜವಾಬ್ದಾರಿ. ಈಗಾಗಲೇ ಗಮನಿಸಿದಂತೆ ಉದ್ಯಮಿಗಳ ಬಡ್ಡಿಯ ದರ ಶೇ. ೧೩ರಷ್ಟು ಕಡಿಮೆ ಆಗಿದೆ ಎಂಬುದೇ ಇದರ ಸಮರ್ಥನೆ. ಚಿದಂಬರಂ ಪರದೇಶದ ಮಾಧ್ಯಮದ ಮುಂದೆ ಚೀನಾದಲ್ಲಿ ಶೇ. ೪೧ ಹಣದ ಉಳಿತಾಯ ಇದೆ, ನಮ್ಮದು ಕಮ್ಮಿ ಎಂದು ಉದ್ಗಾರವಿಡುತ್ತಾರೆ. ನಮ್ಮಲ್ಲಿ ಒಮ್ಮೆ ಇದು ಶೇ. ೩೬ ಇತ್ತು. ಇಂದು ಉಳಿತಾಯದ ವಿರುದ್ಧ ಎಲ್ಲ ನೀತಿಯನ್ನು ಬಳಸಿ, ನಮ್ಮ ಉಳಿತಾಯ ಬರೇ ಶೇ. ೨೩ ಎಂದು ಪ್ರಲಾಪ ಮಾಡುವುದು ಯಾವ ಜಾಣತನ ?

ವಿದೇಶೀ ಸಂಸ್ಥೆಗಳು ನಮ್ಮ ಬ್ಯಾಂಕಿಂಗ್, ಮಾಹಿತಿ ತಂತ್ರಜ್ಞಾನ, ವಿಮಾನಯಾನ ಕ್ಷೇತ್ರಗಳಲ್ಲಿ ಬಂಡವಾಳವನ್ನು ಹೆಚ್ಚಾಗಿ ಹೂಡುವುದನ್ನು ಎಡಪಂಥೀಯರು ವಿರೋಧಿಸುತ್ತಾರೆ ಎಂಬುದು ಮತ್ತೊಂದು ಆಪಾದನೆ. ಭಾರತದ ಪ್ರಜಾತಂತ್ರವಾದಿ ಪ್ರಗತಿಪರರೆಲ್ಲಾ (ಅವರೆಲ್ಲಾ ಕೇವಲ ಎಡಪಂಥೀಯರಲ್ಲ) ಈ ನೀತಿಯನ್ನು ವಿರೋಧಿಸಿದ್ದಾರೆ. ಉತ್ತಮ ಮಟ್ಟದ ತಾಂತ್ರಿಕತೆಯ ಅಗತ್ಯವಿರುವೆಡೆ, ಆದ್ಯತೆಯ ಆಧಾರದ ಮೇಲೆ, ಉದ್ಯಮದ ಮೇಲೆ ನಮ್ಮ ಹತೋಟಿಯನ್ನು ಉಳಿಸಿಕೊಳ್ಳುತ್ತಾ, ಅಂಥ ಬಂಡವಾಳ ಬಂದರೆ ಅದಕ್ಕೆ ಪ್ರಗತಿಪರರ ವಿರೋಧವಿಲ್ಲ. ಅಂಥ ಹೂಡಿಕೆಗಳು ಬೇಕಾದಷ್ಟು ಆಗಿವೆ. ಒಳಗೆ ಬರುವ ಬಂಡವಾಳಕ್ಕೆ ಲಾಭ ಪಡೆಯುವುದೊಂದೇ ಉದ್ದೇಶವಾದರೆ ಅವಕಾಶಗಳಿಗೇನೂ ಕೊರತೆಯಿಲ್ಲ. ಆದರೆ ದೇಶದ ಸ್ವಾವಲಂಬನೆಯನ್ನು ಕಾಪಾಡುವ ಸೂಕ್ಷ್ಮ ಕ್ಷೇತ್ರಗಳಲ್ಲಿ ಶೇ. ೭೫ರಷ್ಟು ಬಂಡವಾಳ ಹೂಡಲು ಅವಕಾಶ ಕೊಟ್ಟು, ನಮ್ಮ ಹಿಡಿತ ಕಳೆದುಕೊಳ್ಳುವುದನ್ನು ನಾವು ವಿರೋಧಿಸುತ್ತೇವೆ. ವಾಸ್ತವವೆಂದರೆ ನಮ್ಮ ಹಲವಾರು ಪ್ರಮುಖ ಸಾರ್ವಜನಿಕ ಉದ್ಯಮಗಳನ್ನು ಖಾಸಗೀಕರಣಗೊಳಿಸುವುದು ಸುಲಭವಲ್ಲವೆಂದು ಬಂಡವಳಿಗರು ಮನಗಂಡಿದ್ದಾರೆ. ಖಾಸಗೀಕ್ಷೇತ್ರದಲ್ಲಿ ವಿದೇಶಿ ಬಂಡವಾಳದ ಬಲ ಪ್ರಯೋಗಿಸಿ, ಪೈಪೋಟಿ ಒಡ್ಡಿ ಈ ಸಾರ್ವಜನಿಕ ಉದ್ದಿಮೆಗಳನ್ನು ರೋಗಗ್ರಸ್ತವಾಗಿಸಿದರೆ ಅವರ ಎಣಿಕೆ ಕೈಗೂಡಬಹುದು ಎಂಬ ಹುನ್ನಾರವಿದೆ. ಬಿಎಸ್‌ಎನ್‌ಎಲ್‌ಅನ್ನು ಆರ್ಥಿಕವಾಗಿ ಸಮರ್ಥನೀಯವಲ್ಲದ ಬೆಲೆ ಇಳಿಸುವ ಪೈಪೋಟಿಯ ಸಮರದಲ್ಲಿ ತೊಡಗಿಸಿ ಅದನ್ನು ಕೃಶಮಾಡುತ್ತಿರುವುದನ್ನು ಯಾರಾದರೂ ಗಮನಿಸಬಹುದು. ಖಾಸಗೀ ಬ್ಯಾಂಕುಗಳಲ್ಲಿ ಶೇ. ೭೫ ವಿದೇಶೀ ಬಂಡವಾಳ ತೊಡಗಿಸಿ ಹಲವು ಸಣ್ಣ ಬ್ಯಾಂಕುಗಳನ್ನು ವಿಲೀನ ಮಾಡಬೇಕೆಂಬ ನೀತಿಯಿಂದ ಹೀಗೇ ಆಗುತ್ತದೆ. ಪ್ರಾರಂಭದಲ್ಲಿ, ವಿದೇಶಿ ಬಂಡವಳಿಗರು, ನಷ್ಟವಾಗುವುದನ್ನು ಸಹಿಸಿಕೊಳ್ಳಬಲ್ಲಷ್ಟು ಬಲಿಷ್ಠರಾಗಿರುತ್ತಾರೆ. ಹರ್ಷದ್ ಮೆಹ್ತಾ ಪ್ರಕರಣದಲ್ಲಿ ನಾವು ಇದನ್ನು ಕಂಡಿದ್ದೇವೆ. ನಮ್ಮ ಆಂತರಿಕ ಆರ್ಥಿಕ ವ್ಯವಸ್ಥೆಯ ಸ್ವಾಯತ್ತತೆಯನ್ನು (ಅದು ಖಾಸಗೀಕ್ಷೇತ್ರದ ಸ್ವಾಯತ್ತತೆಯ ಪ್ರಶ್ನೆಯೂ ಹೌದು) ಉಳಿಸಿಕೊಳ್ಳಬಯಸುವ ಎಲ್ಲರೂ ವಿದೇಶೀ ಬಂಡವಾಳವನ್ನು ಆದ್ಯತೆಯ ಆಯ್ಕೆಯ ಮೇಲೆ, ಒಳಬಿಡಬೇಕೆಂದೇ ಸಮರ್ಥಿಸುತ್ತಾರೆ. ಇದರಲ್ಲಿ ಎಡ-ಬಲ ಪಂಥಗಳ ಸೈದ್ಧಾಂತಿಕತೆಯ ಚರ್ಚೆ ಅನಗತ್ಯ. ಇದು ಕೇವಲ ವಾಸ್ತವತೆಯ ಗಟ್ಟಿ ನೆಲದ ನಿಲುವು. ಚೀನಾ ದೇಶದಲ್ಲಿ ಅವರ ಎಲ್ಲ ಷರತ್ತುಗಳಿಗೂ ಒಪ್ಪಿಕೊಂಡು, ವಿದೇಶೀ ಬಂಡವಾಳ ಪ್ರವೇಶಿಸುತ್ತಿರುವಾಗ, ನಮ್ಮ ಖಾಸಗೀ ಉದ್ಯಮಿಗಳೇಕೆ ಅದಕ್ಕೆ ಮುಕ್ತ ಪ್ರವೇಶ ಕೊಡಬೇಕೆನ್ನುತ್ತಾರೆ ? ಈ ಪ್ರಶ್ನೆಗೆ ಉತ್ತರದಲ್ಲಿ ವಿದೇಶೀ ಬಂಡವಾಳದ ಪರವಾದ ಆಂತರಿಕ ಲಾಬಿಯ ಕುತಂತ್ರ ಸ್ಪಷ್ಟವಾಗುತ್ತದೆ.

***೩ನೇ ಪುಟದಿಂದ... ಈ ತಿಂಗಳು***

ಆಗ್ರಹಿಸುವುದು ಅಪರಾಧವೆನಿಸುವುದಿಲ್ಲ. ಕೊಲ್ಲುವಿಕೆಯನ್ನೂ ಖಂಡಿಸುವಾಗ ಪೊಲೀಸರ ಹತ್ಯೆಯನ್ನೂ ಉಗ್ರವಾಗಿ ಖಂಡಿಸಿಯೇ ಮಾತುಕತೆಗೆ ಆಗ್ರಹಿಸುವುದು ಸಮಂಜಸ ವಾಗಿದೆ. ಗೋಧ್ರಾ ದುರಂತವು ಹತ್ಯೆಯೇ ಅಥವಾ ಆಕಸ್ಮಿಕವೇ ಎಂಬ ವಿಷಯ ಇತ್ಯರ್ಥವಾಗದಿದ್ದರೂ ಗುಜರಾತಿನ ಹತ್ಯಾ ಕಾಂಡವನ್ನು ನೈತಿಕವಾಗಿ ಹೇಗೆ ತಾನೆ ಬೆಂಬಲಿಸಲಾದೀತು ? ಆದರೂ ಬಹಿರಂಗವಾಗಿ ಅದನ್ನು ಸಮರ್ಥಿಸುತ್ತಿರುವ ರಾಜಕೀಯ ಮುತ್ಸದ್ದಿಗಳು ನಮ್ಮಲ್ಲಿದ್ದಾರೆ. ಅದೊಂದು ಅಪರಾಧವೆಂದು ಅವರಿಗೆ ತೋರದಿರುವುದು ಏಕೆಂಬುದು ಎಲ್ಲರಿಗೂ ತಿಳಿದಿದೆ. ಆದರೆ ನಕ್ಸಲೀಯರೊಡನೆ ಮಾತುಕತೆ ನಡೆಸಬೇಕೆಂದು ಆಗ್ರಹಿಸಿದರೆ ಹಾಗೆ ಆಗ್ರಹಿಸುವವರೂ ನಕ್ಸಲೀಯರೇ ಆಗಿರುತ್ತಾರೆ ಮತ್ತು ಅವರನ್ನು ಅಪರಾಧಿಗಳೆಂದು ಪರಿಗಣಿಸಬೇಕೆಂಬ ವಾದ ನಮ್ಮ ರಾಜ್ಯದಲ್ಲಿ ಕೋಮುವಾದಿ ಶಕ್ತಿಗಳ ಮೂಲಕ ಪ್ರಕಟವಾಗಿದೆ. ಇದು ಸಮಸ್ಯೆಗೆ ಪರಿಹಾರ ವಲ್ಲ. ಶಾಂತಿಯುತ ಮಾತುಕತೆಗಾಗಿ ಆಗ್ರಹಿಸುವವರು ಸಹ ಪ್ರತಿಹತ್ಯೆಯ ಪ್ರತೀಕಾರ ಧೋರಣೆಯನ್ನು ಇನ್ನಾದರೂ ನಿಲ್ಲಿಸಿ ಸರ್ಕಾರದೊಡನೆ ಚರ್ಚೆಗೆ ಹೋಗಬೇಕೆಂದು ಸ್ಪಷ್ಟವಾಗಿ ನಕ್ಸಲೀಯರಿಗೆ ಕರೆ ಕೊಡಬೇಕಾಗಿದೆ. ವಿಶ್ವವಿದ್ಯಾನಿಲಯಗಳಲ್ಲಿ ನಕ್ಸಲೀಯರನ್ನು ತಯಾರು ಮಾಡಲಾಗುತ್ತಿದೆಯೆಂಬ ಕೂಗೆಬ್ಬಿಸಿ ತಲೆಬೇಟೆಯ ಕಾರ್ಯಕ್ರಮವನ್ನು ಹಮ್ಮಿಕೊಳ್ಳುವುದು ಫ್ಯಾಸಿಸ್ಟರಿಗೆ ಪ್ರಿಯವಾಗಬಹುದು; ಆದರೆ ಅದು ತರ್ಕಶೂನ್ಯವಾದ್ದು, ಮತಿಹೀನವಾದ್ದು. ಶಿಕ್ಷಣ ವ್ಯವಸ್ಥೆ ಇರುವುದು ನಕ್ಸಲೀಯರನ್ನಾಗಲಿ ಬಜರಂಗದಳದವರನ್ನಾಗಲಿ ತಯಾರು ಮಾಡಲು ಅಲ್ಲ; ವಿದ್ಯಾರ್ಥಿಗಳಿಗೆ ಸರ್ವಾಂಗೀಣ ವಿಮರ್ಶಾತ್ಮಕ ದೃಷ್ಟಿಯನ್ನು ನೀಡಿ ಮಾನವತೆಯ ಮೌಲ್ಯಗಳ ತಿಳುವಳಿಕೆ ಮೂಡಿಸುವುದು ಅದರ ಉದ್ದೇಶ. ಜನಸಾಮಾನ್ಯರ ಜೀವನಸ್ಥಿತಿಯತ್ತ ಜಾಣಕುರುಡು ತೋರಿ ಎಲ್ಲ ಜನಪರ ಚಳುವಳಿಗಳನ್ನೂ ಮೂದಲಿಸುವ ಪದ್ಧತಿಯು ಫ್ಯಾಸಿಸ್ಟ್ ಬೆಳವಣಿಗೆಯಲ್ಲಿ ಮೊದಲ ಹಂತವೆಂಬುದನ್ನು ಮರೆಯದಿರೋಣ. ಕರ್ನಾಟಕದ ಸರ್ಕಾರ ಈ ಎಲ್ಲ ಅಂಶ ಗಳನ್ನೂ ಗಮನಕ್ಕೆ ತೆಗೆದುಕೊಂಡು ಜನರ ಸಮಸ್ಯೆಗಳನ್ನು ಇತ್ಯರ್ಥಗೊಳಿಸಲು ತುರ್ತಾಗಿ ಮುಂದಾಗಬೇಕು, ಅವರೊಡನೆ ನೇರವಾಗಿ ಸಂವಾದ ನಡೆಸಬೇಕು. ನಕ್ಸಲೀಯರನ್ನು ಎದುರಿಸಲು ಇರುವ ಪ್ರಬಲ ಮಾರ್ಗ ಅದು. ಹತ್ಯೆ - ಪ್ರತಿಹತ್ಯೆಗಳ ಸರಣಿಯನ್ನು ಇಲ್ಲವಾಗಿಸಲು ಇದು ಪರಿಣಾಮಕಾರಿಯಾಗುವುದರಲ್ಲಿ ಸಂದೇಹವಿಲ್ಲ.



# ಎಚ್. ಎನ್. ನೆನಪುಗಳು

ಸರಳ ಜೀವನ ಶೈಲಿ, ಸಜ್ಜನಿಕೆ, ಹಾಸ್ಯ ಪ್ರಜ್ಞೆ, ವೈಚಾರಿಕ ಒಳನೋಟ, ವಿಜ್ಞಾನಿ, ಸಾಯಿಬಾಬಾನಂಥ ಡೋಂಗಿ ಬಾಬಾಗಳನ್ನು ಬಯಲಿಗೆಳೆದ ಧೀಮಂತ, ಉತ್ತಮ ಉಪನ್ಯಾಸಕ, ಕಟ್ಟಾ ಗಾಂಧೀವಾದಿ, ನ್ಯಾಷನಲ್ ಕಾಲೇಜಿನ ರಂಗಚಟುವಟಿಕೆಗಳ ರೂವಾರಿ, ಬೆಂಗಳೂರು ವಿ.ವಿ. ದ ವೈಸ್ ಚಾನ್ಸಲರ್... ಎಂಬೆಲ್ಲಾ ಹೆಗ್ಗಳಿಕೆಗೆ ಪಾತ್ರರಾಗಿದ್ದ ಎಚ್. ನರಸಿಂಹಯ್ಯನವರು ಹಠಮಾರಿ, ವ್ಯವಸ್ಥೆಯ ಪರವಾಗಿದ್ದವರು, ರಾಜಕಾರಣಿಗಳನ್ನು ಮೀರಿಸುವ ಚಾಣಾಕ್ಷತೆ ಉಳ್ಳವರು ಎಂಬ ಟೀಕೆಗಳಿಗೂ ಒಳಗಾಗಿದ್ದ ಅಪರೂಪದ ಜನಪ್ರಿಯ ವ್ಯಕ್ತಿ. ಎಚ್. ಎನ್. ಇಂದು ನಮ್ಮೊಂದಿಗಿಲ್ಲ. ಇಲ್ಲಿ, ಅವರ ಸಹೋದ್ಯೋಗಿಗಳು, ಓರಗೆಯವರು, ವಿದ್ಯಾರ್ಥಿಗಳು, ಅಭಿಮಾನಿಗಳು ತಮ್ಮದೇ ಮಾತುಗಳಲ್ಲಿ ಅವರ ವ್ಯಕ್ತಿತ್ವದ ವಿವಿಧ ಮುಖಗಳನ್ನು ಪರಿಚಯಿಸಿದ್ದಾರೆ, ಸಂತಾಪ ಸೂಚಿಸಿದ್ದಾರೆ.

## ಡಾ|| ಎಚ್ಚೆನ್ : ಹೋರಾಟದ ಒಂಟಿಜೀವಿ

**ಡಾ||** ಎಚ್ಚೆನ್ ಬಗ್ಗೆ ಬರೆಯುವುದು ಸುಲಭವಲ್ಲ. ಅವರು ಸುಲಭದ ವ್ಯಕ್ತಿಯೂ ಆಗಿರಲಿಲ್ಲ. ಸರಳ ನಡವಳಿಕೆಯ ಅಪರೂಪದ ಉದಾಹರಣೆಯಾಗಿ ಬೆಳೆದು ನಿಂತವರಾದರೂ ಹೊರಗೆ ಕಾಣುವಷ್ಟು ಸರಳ ವ್ಯಕ್ತಿತ್ವ ಅವರದಾಗಿರಲಿಲ್ಲ. ಇದು ಅವರಿಗೂ ಗೊತ್ತಿತ್ತೆಂಬುದೇ ವಿಶೇಷ. ಡಾ|| ಎಚ್ಚೆನ್ ಅವರು ಬರೆದ 'ತೆರೆದ ಮನ' ಪುಸ್ತಕ ಬಿಡುಗಡೆ ಸಮಾರಂಭದಲ್ಲಿ ನಾನು ಇದೇ ಮಾತನ್ನು ಹೇಳಿದ್ದೆ. 'ತೆರೆದ ಮನ' – ಎಂಬುದು ಪುಸ್ತಕದ ಹೆಸರಾದರೂ ಡಾ|| ಎಚ್ಚೆನ್ ಅವರು ಏನೆಂದು ಸುಲಭವಾಗಿ ಅರ್ಥವಾಗುವುದಿಲ್ಲ. ಕಮ್ಯುನಿಸ್ಟರೆಂದರೆ ಕಮ್ಯುನಿಸ್ಟರಲ್ಲ; ಹಾಗೆಂದು ಕಮ್ಯುನಿಸ್ಟ್ ವಿರೋಧಿಗಳಲ್ವೇ ಅಲ್ಲ; ಲೋಹಿಯಾವಾದಕ್ಕೆ ಬದ್ಧರೆ ಎಂದರೆ ಹಾಗೂ ಇಲ್ಲ; ಹಾಗೆಂದು ಲೋಹಿಯಾ ಅವರು ದೂರವಲ್ಲ. ಅಂಬೇಡ್ಕರ್ ಹತ್ತಿರವಾದರೂ ಗಾಂಧಿ ಆತ್ಮೀಯರು. ಒಬ್ಬರ ಕಾರಣಕ್ಕಾಗಿ ಇನ್ನೊಬ್ಬರನ್ನು ಎಚ್ಚೆನ್ ದೂರಮಾಡುವುದಿಲ್ಲ. ಅಷ್ಟೇ ಅಲ್ಲ ಕೆಲವೊಮ್ಮೆ ಎಚ್ಚೆನ್ ಕಾಣುವಷ್ಟು ಸರಳರಲ್ಲ. – ಇದು ನನ್ನ ಭಾಷಣದ ಒಂದು ಭಾಗ. ಮಾರನೇ ದಿನ ಸಿಕ್ಕಿದ ಎಚ್ಚೆನ್ ''ಅಲ್ಲಪ್ಪ ಎಚ್ಚೆನ್ ಏನು ಅಂತ ಅರ್ಥವಾಗಲ್ಲ, ಕಾಣೋವಷ್ಟು ಸರಳರಲ್ಲ– ಅಂತ ಹೇಳಿದೆಯಲ್ಲ, ಅದು ಹೇಗಪ್ಪ ಗೊತ್ತಾಯ್ತು ನಿಂಗೆ ?'' ಎಂದು ನಗುತ್ತ ಕೇಳಿದರು. ಇದು ಎಚ್ಚೆನ್ ಅವರ 'ತೆರೆದ ಮನ'.

ನನ್ನ ಮತ್ತು ಎಚ್ಚೆನ್ ಅವರ ಸಂಬಂಧ ಕಾಲುಶತಮಾನಕ್ಕೂ ಹೆಚ್ಚಿನ ಅವಧಿಯದು. ಅವಧಿ ಹೆಚ್ಚು ಎನ್ನುವುದು ಮಾನದಂಡವಲ್ಲ. ಈ ಅವಧಿಯಲ್ಲಿ ನಿಧಾನವಾಗಿ ಅರ್ಥ ಮಾಡಿಕೊಳ್ಳುತ್ತ ಬಂದದ್ದರಿಂದ ಸಂಬಂಧ ಗಾಢವಾಯಿತು. ಅದು ಎಷ್ಟರಮಟ್ಟಿಗೆ ವಿಸ್ತಾರಗೊಂಡಿತೆಂದರೆ ಯಾವುದಾದರೂ ಸಾರ್ವಜನಿಕ ವಿವಾದ ಎದ್ದಾಗಲೆಲ್ಲ ನನಗೆ ದೂರವಾಣಿ ಮಾಡಿ ಅಥವಾ ಬರಲು ಹೇಳಿ ಚರ್ಚಿಸುತ್ತಿದ್ದರು ಅಥವಾ ಅವರ ಅಭಿಪ್ರಾಯವನ್ನು ಹೇಳಿ 'ಸರಿ' ಎಂದು ಸಮಾಧಾನ ಮಾಡಿಕೊಳ್ಳುತ್ತಿದ್ದರು. ಸಾಯುವುದಕ್ಕೆ ಸರಿಯಾಗಿ ಮೂರು ತಿಂಗಳು ಮೂರು ದಿನಗಳಿಗೆ ಮುಂಚೆ ಫೋನ್ ಮಾಡಿದ ಎಚ್ಚೆನ್ ''ಮೆತ್ತಗಾಗಿದ್ದೀನಪ್ಪ, ಬಂದು ಹೋಗು'' ಎಂದರು. ಅವರ ದನಿ ಕುಗ್ಗಿತ್ತು. ಸಂಬಂಧದ ಸೆಳೆತ ತೀವ್ರವಾಗಿತ್ತು. ನಾನು ಮತ್ತು ನನ್ನ ಪತ್ನಿ ರಾಜಲಕ್ಷ್ಮಿ ಇಬ್ಬರು ನವೆಂಬರ್ ಒಂದನೇ ತಾರೀಕು (೨೦೦೪) ಅವರನ್ನು ನೋಡಲು ಹೋದೆವು. ಅಂದೇ ಹಲಸೂರಿನ (ಕಂಟೋನ್‌ಮೆಂಟ್) ಕನ್ನಡ ಸಂಘಟನೆಯ ವತಿಯಿಂದ ಎಚ್ಚೆನ್ ಅವರನ್ನು ಅವರಿದ್ದ ಜಾಗದಲ್ಲಿಯೇ ಸನ್ಮಾನಿಸುವ ಸರಳ ಕಾರ್ಯಕ್ರಮವಿತ್ತು. ಇದ್ದವರು ಹತ್ತು-ಹದಿನೈದು ಜನ. ನನ್ನಿಂದಲೇ ಸನ್ಮಾನ. ಹತ್ತು ನಿಮಿಷದಲ್ಲಿ ಈ ಕಾರ್ಯಕ್ರಮ ಮುಗಿದ ಮೇಲೆ ನ್ಯಾಷನಲ್ ಕಾಲೇಜಿನ ಒಳಾವರಣದಲ್ಲಿ ಮೂರು ಕುರ್ಚಿ ತರಿಸಿ ಹಾಕಿಸಿ ನನ್ನನ್ನೂ ನನ್ನ ಪತ್ನಿಯನ್ನು ಕೂಡಿಸಿಕೊಂಡು ಮುಕ್ಕಾಲು ಗಂಟೆಗೂ ಹೆಚ್ಚು ಕಾಲ ಮಾತಾಡಿದರು. ಅದೇ ಸಮಾಜ ಬದಲಾವಣೆಯ ಮಾತು. ತಮ್ಮ ನಿಲುವು-ನಡವಳಿಕೆಗಳನ್ನು ನಿರ್ದಿಷ್ಟ ಸನ್ನಿವೇಶದಲ್ಲಿಟ್ಟು ಪರೀಕ್ಷಿಸಿಕೊಳ್ಳುತ್ತಲೇ ಸಮರ್ಥಿಸಿಕೊಳ್ಳುವ ಮಾತು. ನನಗೆ ಕೆಲವು ಸಲಹೆ-ಸೂಚನೆಗಳು; ನಡುನಡುವೆ ಜೋಕುಗಳು. ಹಿಗ್ಗನ್ನು ನಿಯಂತ್ರಿಸಲೆಂದೇ ನುಗ್ಗಿಬರುತ್ತಿರುವಂತೆ ಕಂಡ ಕೆಮ್ಮು. ಹಮ್ಮು-ಬಿಮ್ಮುಗಳಿಲ್ಲದ 'ಸರಳ' ಜೀವಿಗೆ ಯಾಕಪ್ಪ ಈ ಕೆಮ್ಮಿನ ಕಾಟ ಎಂದುಕೊಳ್ಳುತ್ತ 'ಆಯಾಸ ಆಗ್ತಿದೆ ನಿಮ್ಗೆ ಬರ್ತೀವಿ ಸಾರ್' ಎಂದು ಎದ್ದಾಗ ''ನನ್ ಕ್ಲಾಸಿನ್ನೂ ಮುಗ್ದೇ ಇಲ್ಲ, ಆಗ್ಲೆ ಹೊರಟೆಲ್ಲಪ್ಪ'', ಎಂದು ಛೇಡಿಸಿ ನನ್ನ ಹೆಂಡತಿಗೆ ''ನೋಡಮ್ಮ ಇವತ್ತಿನ್ನೂ ನನ್ ಪೀರಿಯಡ್ ಪೂರ್ತಿ ಮಾಡಿಲ್ಲ. ಆಮೇಲೆ ಕಳಿಸ್ಕೊಡಮ್ಮ. ಉಳಿದಿದ್ ಕ್ಲಾಸ್‌ನ ಪೂರ್ತಿ ಮಾಡ್ತೀನಿ'' ಎಂದು ನಗುತ್ತಾ ಹೇಳಿದರು. ಬೇಡವೆಂದರೂ ಕೇಳದೆ ಎತ್ತಿಡಲಾಗದ ಹೆಜ್ಜೆಗಳನ್ನು ಇಡುತ್ತ ಗೇಟಿನ ಬಳಿಗೆ ಬಂದು ಬೀಳ್ಕೊಟ್ಟರು.

ಕಡೆಗೆ ೩೧-೧-೨೦೦೫ರಂದು ಡಾ|| ಎಚ್ಚೆನ್ ಅವರನ್ನು ಪೂರ್ತಿ ಬೀಳ್ಕೊಡುವ ಸಂಕಟ ನಮ್ಮದಾಗಿತ್ತು. ನೆನೆಪಿಸಿಕೊಂಡೆ : ಕಿತ್ತು ಕಿತ್ತು ಇಡುತ್ತಿದ್ದ ಆ ಕಡೆಯ ಹೆಜ್ಜೆಗಳು ! ಭೂಮಿ ಅವರನ್ನು ಒಳಗೆ ಎಳೆದುಕೊಳ್ಳಲು ಪ್ರಯತ್ನಿಸುತ್ತಿದೆ. ನಿನ್ನೊಳಗೆ ಬರುವುದಿಲ್ಲ, ಮೇಲೆಯೇ ಹಾದಿಗುಂಟ ಹೋಗುತ್ತೇನೆಂದು, ಕಾಲನ್ನು ಕಿತ್ತುಕೊಳ್ಳುತ್ತಿರುವಂತೆ ಕಾಣುತ್ತಾರೆ ನಮ್ಮ ಎಚ್ಚೆನ್ ! ಆದರೆ ಭೂಮಿಯೊಳಗೆ ಕೂತು ಕಾಲನ್ನು ಎಳೆಯುತ್ತಿದ್ದ 'ಕಾಲ' ಕೆರಳಿ ಮೇಲೆ ಬಂದು ಜೀವದ ಕತ್ತು ಹಿಚುಕಿದ; 'ಹೋರಾಟದ ಹಾದಿ'ಯನ್ನು ಚಿತಾಗಾರ ಮಾಡಿದ. ನಾನು ಗಳಗಳನೆ ಅತ್ತಾಗ ಗೆಳೆಯ ಎಚ್. ಎಸ್. ರಾಘವೇಂದ್ರ ರಾವ್ ಭುಜಹಿಡಿದು ಸಾಂತ್ವನ ಮಾಡಿದರು.

ಎಚ್ಚೆನ್ ಅವರ ಹುಟ್ಟೂರಾದ ಹೊಸೂರಿನಲ್ಲಿ ಸುರಿಯುವ ಮಳೆಯಲ್ಲಿ ನಾನು, ನನ್ನ ಹೆಂಡತಿ, ಸ್ನೇಹಿತರು – ಹೀಗೆ ಅನೇಕರು ತೊಯ್ದು ನಿಂತಿದ್ದಾಗ ಚಿತೆಯ ಮೇಲೆ ಮಲಗಿದ ಈ ಮನುಷ್ಯ ಉರಿಯುತ್ತಿದ್ದಾರೆ ! ಹೊರಬರದೆ ಒಳಗೇ ಕಾಡಿದ ಉರಿಗಳು ಒಟ್ಟಾಗಿ ಚಿತೆಯಲ್ಲಿ ಜೀವಂತವಾದವೆ ? ಹೇಳಲಾಗದ ಮೌನಸತ್ಯಗಳು ಸ್ಫೋಟಗೊಂಡವೆ ? ಬಿಳಿಯ ಬಟ್ಟೆಯೊಳಗಿನ ಕಪ್ಪು ದೇಹದೊಳಗೆ ಕಾದು ಬಿಸಿಯಾದ ಕೆಂಪು ನುಡಿಗಳು ಚಿತೆಯೊಳಗಿಂದ ಉಕ್ಕಿಬಂದವೆ ? ವೈರುಧ್ಯಗಳೆಲ್ಲ ಸುಟ್ಟು ಒಂದೇ ರೂಪವಾದವೆ ?

ಸುರಿಯುವ ಮಳೆಯಲ್ಲಿ ಉರಿಯುವ ಚಿತೆಗೆ ಬೆಂಕಿ ಹತ್ತಿಸಿದ ಮೊದಲಿಗರಲ್ಲಿ ನಾನೂ ಒಬ್ಬ. ಎಚ್ಚೆನ್ ಬದುಕಿದ್ದಾಗ ಎಷ್ಟೋ ಸಾರಿ ನಾನು ಕೆದಕಿದ್ದು ಉಂಟು; ಒಳಗನ್ನು ಹೊರ ತೆಗೆಯಲು ಮೆದುಮಾತಿನಲ್ಲೇ ಕಿಡಿಹಚ್ಚಿದಾಗ, ಅವರು ಒಳಗಿನ ಉರಿ ಚಿಂತನೆಗಳನ್ನು ಹೊರಹಾಕುತ್ತಲೆ ಮತ್ತೆ ನಿಯಂತ್ರಿಸಿಕೊಳ್ಳುತ್ತ ನಿಟ್ಟುಸಿರು ಬಿಟ್ಟದ್ದು ಉಂಟು. ಈಗ ಸುರಿಯುವ ಮಳೆಯೆದುರು ಉರಿಯುತ್ತಿರುವ ಎಚ್ಚೆನ್ ! ಬದುಕಿನ ವ್ಯಂಗ್ಯವೆಂದರೆ ಇದೇ ಇರಬಹುದೆ ?

ನಾನೊಮ್ಮೆ ಎಚ್ಚೆನ್ ಅವರನ್ನು ಕೆಣಕಿದ್ದೆ ''ಸರ್, ನೀವು ಜೀವನದುದ್ದಕ್ಕೂ ಕನ್ಸಿಸ್ಟೆಂಟಾಗಿ ಇರೋದು ಒಂದು ವಿಷಯ ಇದೆ. ಅದೇ ಸಾಯಿಬಾಬ ವಿಷಯ'' ಎಂದಿದ್ದೆ. ''ಯಾಕಪ್ಪ ಹಂಗಂತೀಯ ? ನಾನ್ ಹೇಳೊ ಎಲ್ಲಾ ವಿಷಯದಲ್ಲೂ ಹಾಗೇ ಇರ್ತೀನಿ'' ಎಂದರು. ''ಹಾಗಾದ್ರೆ ಮಠಾಧಿಪತಿಗಳನ್ನ ಯಾಕ್ ಸಾರ್ ಬಹಿರಂಗವಾಗ್ ಟೀಕೆ ಮಾಡಲ್ಲ? ಸಾಯಿಬಾಬಾಗಿಂತ ಮಠಾಧಿಪತಿಗಳು ಹೇಗೆ ಉತ್ತಮರು ಅಂತೀರ ?'' ಎಂದು ಪ್ರಶ್ನಿಸಿದಾಗ ''ಉತ್ತಮರು ಅಂತ ನಾನ್ ಹೇಳಿದ್ದೀನ ?'' ಎಂದು ಮರುಪ್ರಶ್ನೆ ಹಾಕಿದ್ದಲ್ಲದೆ ''ಮಠಾಧೀಶರು ತಮ್ಮನ್ನ ತಾವು ದೇವರು ಅಂತ ಕರ್‍ಕೊಂಡಿಲ್ಲ, ಪವಾಡ ಪುರುಷರು ಅಂತ ಮೋಸ ಮಾಡ್ತಿಲ್ಲ'' ಎಂದು ಸಮಜಾಯಿಷಿ ನೀಡಿದರು. ನಾನು ಹೇಳಿದೆ – ''ನೀವು ಹೇಳೋದು ನಿಜ ಸರ್. ಆದರೆ ಇದೊಂದು ವಿಷಯ ಬಿಟ್ಟರೆ ಬಾಬಾಗಳಿಗಿಂತ ಮಠಾಧೀಶರೇ ಹೆಚ್ಚು ಅಪಾಯಕಾರಿ ಅನ್ಸುತ್ತೆ ನನಗೆ. ಯಾಕೇಂದ್ರೆ, ಮಠಾಧೀಶರೆಲ್ಲ ಧರ್ಮದ ಮಾತಾಡ್ತಾರೆ. ಆದರೆ ಜಾತೀನ ಆಚರಿಸ್ತಾರೆ. ಇವತ್ತು ಎಲ್ಲ ಮಠಗಳು ಜಾತಿಕೇಂದ್ರಗಳಾಗಿವೆ. ನೀವು ಯಾವ ಜಾತಿ ಪದ್ಧತೀನ ವಿರೋಧಿಸ್ತೀರೊ ಅದೇ ಜಾತಿಪದ್ಧತೀನ ಮಠಮಾನ್ಯಗಳು ಗಟ್ಟಿಯಾಗಿ ಬೆಳುಸ್ತಾ ಇವೆ. ಜೊತೆಗೆ ಮಠಗಳು ರಾಜಕೀಯವನ್ನು ನಿಯಂತ್ರಿಸ್ತಾ ಇವೆ. ಸಂಪತ್ತನ್ನೂ ಹೆಚ್ಚಿಸ್ಕೊಳ್ತಾ ಇವೆ. ನಿಜ, ಮಠಾಧೀಶರು ಶಿಕ್ಷಣ ಸಂಸ್ಥೆ ನಡೆಸ್ತಾ ಇದಾರೆ, ವಿದ್ಯಾರ್ಥಿನಿಲಯಗಳನ್ನ ನಡೆಸ್ತಾ ಇದಾರೆ. ಅದೇ ರೀತಿ ಕೆಲವು ಬಾಬಾಗಳು ಉತ್ತಮವಾದ ಆಸ್ಪತ್ರೆ ನಡುಸ್ತಾ ಇದಾರೆ. ಬಡವರಿಗೆ ಒಳ್ಳೆ ಚಿಕಿತ್ಸೆಗೆ ನೆರವಾಗಿದಾರೆ. ನೀರಿಲ್ಲದ ಊರುಗಳಿಗೆ ನೀರು ಸರಬರಾಜಿಗೆ ವ್ಯವಸ್ಥೆ ಮಾಡ್ತಿದಾರೆ. ಆದ್ದರಿಂದ ಸೇವೆ ವಿಷಯದಲ್ಲಿ, ಮೌಢ್ಯ ಪ್ರಚಾರದ ವಿಷಯದಲ್ಲಿ ಮಠಾಧೀಶರೂ ಬಾಬಾಗಳೂ ಒಂದೇ-ಸಮಾನ. ಸಂಪತ್ತಿನ ವಿಷಯದಲ್ಲೂ ಅವ್ರಲ್ಲಿ 'ಸಮಾನತೆ' ಇದೆ. ಆದ್ರೆ ಮಠಾಧೀಶರು ಪವಾಡ ಪ್ರದರ್ಶನ ಪ್ರವೀಣರಲ್ಲ. ಬಾಬಾಗಳು ಜಾತಿಪದ್ಧತಿಯ ಪೋಷಕರಲ್ಲ. ಈಗ ಹೇಳಿ ಯಾರು ಹೆಚ್ಚು ಅಪಾಯಕಾರಿ ? ಜಾತಿ ಮೂಲಕ ಸಮಾಜವನ್ನು ಒಡೆಯೋ ಮಠಾಧೀಶರೊ ? ಜಾತಿ ಪ್ರಚೋದನೆ ಮಾಡದೆ ಇರುವ ಬಾಬಾಗಳೊ ? ನನಗೇನೊ ಈ ವಿಷಯದಲ್ಲಿ ಮಠಾಧೀಶರೇ ಬಾಬಾಗಳಿಗಿಂತ ಹೆಚ್ಚು ಅಪಾಯಕಾರಿ'' – ಹೀಗೆ ದೀರ್ಘವಾಗಿ ನಾನು ವಿವರಿಸಿದಾಗ – ಅಲ್ಲ – ವಾದಿಸಿದಾಗ, ಎಚ್ಚೆನ್ ಮೌನವಾದರು. ಮೌನದೊಳಗೆ ವಿಚಾರದ ಉರಿ ಎದ್ದಿತ್ತು. ತಕ್ಷಣವೇ ಉರಿಯನ್ನು ಹೊರ ಹಾಕಲಿಲ್ಲ. ಕೆಲವು ದಿನಗಳ ನಂತರ ಅವರು ಏನೇನೊ ಮಾತನಾಡುತ್ತ ನಡುವೆ ಹೇಳಿದರು – ''ನೋಡಪ್ಪ, ಎಷ್ಟೋ ವಿಷಯಗಳಲ್ಲಿ ನಾನು ನಿಮ್ಮಷ್ಟು ಓಪನ್ ಆಗಿ ಬರೋಕಾಗೊಲ್ಲ. ನಾನು ಬೆಳೆದುಬಂದ ರೀತಿ, ಈಗಿರೊ ಸನ್ನಿವೇಶಾನ ನೀವು ಅರ್ಥಮಾಡ್ಕೊಬೇಕು. ಈಗ ನಿನ್‌ಹತ್ರ ಎಷ್ಟೋ ವಿಷ್ಯ ಹೇಳ್ತೀನಿ; ಮಾತಾಡ್ತೀನಿ. ಅದನ್ನೆಲ್ಲ ಹೊರಗಡೆ ಹೇಳೋಕಾಗುತ್ತ? ನಾನು ಈ ಸಂಸ್ಥೆ ಕಟ್ಟೋಕೆ (ನ್ಯಾಷನಲ್ ಶಿಕ್ಷಣ ಸಂಸ್ಥೆ) ಕಂಡ್‌ಕಂಡೋರ್ ಹತ್ರ ಕೈಒಡ್ಡಿ ಸಹಾಯ ತಗೊಂಡಿದ್ದೀನಿ. ಇಂಥ ಎಷ್ಟೋ ಕಾರಣಕ್ಕೆ ಅನ್ನಿಸಿದ್ದೆಲ್ಲ ಹೇಳೋಕ್ಕಾಗೊಲ್ಲಪ್ಪ. ನನ್ನ ನಡವಳಿಕೆಯಿಂದ ಸಂಸ್ಥೆಗೆ ಕೆಟ್ಟ ಹೆಸರು ಬರಬಾರದು. ನನ್ ವಿಚಾರ ನೋಡಪ್ಪ – ಇಷ್ಟೆ: ದೇವರಿದಾನೊ ಇಲ್ವೊ ಆ ವಿಷ್ಯ ನಂಗೆ ಬೇಡ, ದೇವರ ಬಗ್ಗೆ ನಿಷ್ಠುರವಾಗಿ ಮಾತಾಡಿದ್ರೆ ಜನಗಳ ಹತ್ರ ಹೋಗೋದಕ್ಕೇ ಆಗೊಲ್ಲಪ್ಪ...'' ಎಂದು ಅವರು ಹೇಳುತ್ತಿರುವಾಗಲೇ ನಾನು ಮಧ್ಯೆ ಬಾಯಿ ಹಾಕಿದೆ: ''ನೋಡಿ ಸಾರ್, ನಾನು ದೇವರ ಅಸ್ತಿತ್ವಾನ ನಂಬೊಲ್ಲ. ಹಾಗಂತ ನಾಸ್ತಿಕನಾಗುವುದರಿಂದಲೇ ಸಮಾಜ ಬದಲಾವಣೆ ಆಗುತ್ತೆ ಅಂತಲೂ ನಂಬಿಲ್ಲ. ನಾಸ್ತಿಕನಾಗಿಯೂ ಸಮಾಜ ಬದಲಾವಣೆಗೆ ಬೇಕಾದ ಸರಿಯಾದ ಸೈದ್ಧಾಂತಿಕ ತಿಳುವಳಿಕೆ ಇಲ್ದೇ ಇರೋರು ಕೇವಲ ಹೀರೊ ಥರಾ ವಿಜೃಂಭಿಸಿರೊ ಅನೇಕರಿದ್ದಾರೆ. ಮಾವೊ, ಲೆನಿನ್ ಅವರಂಥ ಕ್ರಾಂತಿಕಾರಿಗಳು ಜನಗಳ ಒಲವನ್ನು ಗಳಿಸಿ ಹೇಗೆ ಕ್ರಿಯಾಶೀಲರಾಗಬೇಕು ಅಂತ ಲೇಖನಗಳನ್ನು ಬರ್ದಿದಾರೆ. ಆಸ್ತಿಕತೆ ನಾಸ್ತಿಕತೆಗಳನ್ನು ಮೀರಿದ ಪ್ರಶ್ನೆಗಳೂ ಅನೇಕವಿವೆ. ಆದ್ರೆ ದೇವರು-ಧರ್ಮದ ಹೆಸರಲ್ಲಿ ಈ ದೇಶಾನ ಹೊಲಸು ಮಾಡಿದಾರೆ ಅಲ್ವ ಸಾರ್'' ಎಂದು ಹೇಳುತ್ತಿರುವಾಗ ಎಚ್ಚೆನ್ ನಡುವೆ ಬಾಯಿಹಾಕಿ ''ನಾಸ್ತಿಕತೆ ಬಗ್ಗೆ ಸರ್‍ಯಾಗ್ ಹೇಳ್ದೆ ನೋಡಪ್ಪ, ಆಮೇಲೆ ಮಾವೋ, ಲೆನಿನ್ ಬರ್ದಿರೋ ವಿಷ್ಯ ನಂಗೊತ್ತಿಲ್ಲ. ಅಂಥ ಮಹಾನ್ ಕ್ರಾಂತಿಕಾರಿಗಳಿಗೆ ಔಚಿತ್ಯ ಇತ್ತಪ್ಪ. ನಮ್ಮಲ್ಲಿ ಅರ್ಥಂಬರ್ಥ ಜನಗಳೇ ಜಾಸ್ತಿ. ಅದ್ಕೇ ನಾನ್ ಹೇಳೋದು, ದೇವರ ವಿಷ್ಯ ಬಿಟ್‌ಬಿಡೋಣ ಅಂತ'' ಎಂದು ತಮಗೆ ಪ್ರಿಯವಾದ ನನ್ನ ಮಾತುಗಳನ್ನು ಮಾತ್ರ ಎತ್ತಿಕೊಂಡು ಮತ್ತೆ ಮುಂದುವರೆಸಿದರು : ''ನಾನು ದೇವರು, ಧರ್ಮಗಳನ್ನ ನಂಬಬೇಡಿ ಅನ್ನೊಲ್ಲ. ನಂಬೋರ್ ನಂಬ್ಲಿ. ಆದರೆ ದೇವರು - ಧರ್ಮದ ದುರುಪಯೋಗಾನ ನಾನು ವಿರೋಧಿಸ್ತೇನೆ. ಪವಾಡ ವಿರೋಧಿಸ್ತೇನೆ. ಶೂನ್ಯದಲ್ಲಿ ಸೃಷ್ಟಿ ಮಾಡ್ತೀನಿ ಅನ್ನೋದನ್ನ ವಿರೋಧಿಸ್ತೇನೆ. ನನ್ನ ವೈಜ್ಞಾನಿಕ ಮನೋಧರ್ಮ ಅಂದ್ರೆ ಹೀಗೆ ನೋಡಪ್ಪ. ಸುಮ್‌ಸುಮ್ನೆ ಹುತ್ತಕ್ಕೆ ಕೈಹಾಕಿದ್ರೆ ಏನಾಗುತ್ತಪ್ಪ? ಹುಷಾರಾಗಿರ್ಬೇಕು. ರಚನಾತ್ಮಕವಾಗಿರಬೇಕು. ಏನಾದ್ರು ಫಲಕೊಡ್ಬೇಕು. ಅದುಬಿಟ್ಟು ಸುಮ್ನೆ ಮಾತಾಡ್ತಾ ಹೋದ್ರೆ ಏನ್‌ಬಂತು ?'' – ಡಾ॥ ಎಚ್ಚೆನ್ ಅವರ ತಾತ್ವಿಕ ತಿಳುವಳಿಕೆಯ ಸಾರ ಇದೇ ಆಗಿತ್ತು. ಇದಕ್ಕನುಗುಣವಾಗಿ ಅವರು ಮಾತಾಡುತ್ತ ಬಂದರು. ಕೆಲಸ ಮಾಡುತ್ತ ಬಂದರು. ಎಚ್ಚೆನ್ ಅವರ ನುಡಿಗಳಿಗೊಂದು ಗಡಿಯಿತ್ತು. ಕೆಲಸಗಳಿಗೆ ಗಡಿಯಿರಲಿಲ್ಲ; ಗಡಿಬಿಡಿಯಿರಲಿಲ್ಲ. ಕನಸುಗಾರಿಕೆಯಿತ್ತು.

ಡಾ॥ ಎಚ್ಚೆನ್ ಅವರ ಅಂತರಾಳದಲ್ಲಿ ಹೋರಾಟದ ಹಾದಿಯಿತ್ತು ; ಅಭಿಪ್ರಾಯಗಳ ಹಟವೂ ಇತ್ತು. ಆದರೆ ಅವರು ಬಹಿರಂಗ ಪ್ರತಿಭಟನೆಗಳಲ್ಲಿ ಭಾಗಿಯಾಗದೆ ಪ್ರತಿಭಟನೆಯ ಅಂಗವಾಗುವ ಮನಸ್ಸಾಗಿದ್ದರು. ವ್ಯವಸ್ಥೆ ವಿರೋಧಿ ಹೋರಾಟಗಳಲ್ಲಿ ಹೊರಗೆ ಕಾಣಿಸಿಕೊಳ್ಳದೆ ಅವುಗಳ ಅಂತರಂಗವಾಗಿದ್ದರು. ಅಂತರಂಗ-ಬಹಿರಂಗಗಳ ನಡುವೆ ಪ್ರಜ್ಞಾಪೂರ್ವಕ ಗೆರೆಯನ್ನು ಗುರುತಿಸಿಕೊಂಡು ಆತ್ಮವಂಚನೆ ಮಾಡಿಕೊಳ್ಳದ ಒಂಟಿಜೀವಿಯಾಗಿ ಬದುಕಿದರು. ಹೀಗಾಗಿ ಎಚ್ಚೆನ್ ಅವರನ್ನು ಬದುಕು ಮತ್ತು ಹೋರಾಟಗಳ ಒಂಟಿ ಜೀವಿಯಾಗಿ ಅರ್ಥಮಾಡಿಕೊಳ್ಳುವುದು ಹೆಚ್ಚು ಅರ್ಥಪೂರ್ಣವಾದೀತು. ಅಂತಃಕರಣಕ್ಕೂ ಹತ್ತಿರವಾದೀತು.

ನಿಜ, ಡಾ॥ ಎಚ್ಚೆನ್ ಅವರ ಕೆಲವು ವಿಚಾರಗಳ ಬಗ್ಗೆ ಕೆಲ ಪ್ರಗತಿಪರರು ಭಿನ್ನಾಭಿಪ್ರಾಯ ಹೊಂದಿದ್ದರು. ಕೆಲವರಂತೂ ಔಚಿತ್ಯದ ಎಲ್ಲೆ ಮೀರಿ ಮಾತಾಡುತ್ತಿದ್ದರು. ನಾನು ಒಂದೆರಡು ಮುಖ್ಯ ವಿಷಯಗಳ ಬಗ್ಗೆ ಭಿನ್ನಮತ ವ್ಯಕ್ತಪಡಿಸಿ ಅವರೊಂದಿಗೆ ಮಾತಾಡಿದ್ದುಂಟು. ಹಾಗೆಂದು ಅವರನ್ನು ವಿರೋಧಿಸಿವುದು ಪ್ರಗತಿಪರ ಕೆಲಸವಂತೂ ಅಲ್ಲ. ಎಚ್ಚೆನ್ ಅವರು ಹಾಗೆ ಆಗಬೇಕಿತ್ತು ಹೀಗೆ ಆಗಬೇಕಿತ್ತು ಎಂದು ಪ್ರತಿವಾದಿಸುವ ಬದಲು 'ಎಚ್ಚೆನ್ ಅವರು ಎಚ್ಚೆನ್ ಅವರಂತೆ ಇದ್ದಾರೆಯೆ' ಎಂಬದನ್ನು ನೋಡಬೇಕು. ಎಚ್ಚೆನ್ ಅವರ ಸಾಮಾಜಿಕ ಹಿನ್ನೆಲೆ, ಗಾಂಧಿಯುಗದ ಪ್ರಭಾವ, ನಿರ್ದಿಷ್ಟ ಚಾರಿತ್ರಿಕ ಹಾಗೂ ಸಮಕಾಲೀನ ಸಂದರ್ಭಗಳ ಮೂಲಕ ಅವರ ವ್ಯಕ್ತಿತ್ವವನ್ನು ಪರಿಗಣಿಸಬೇಕು. ಎಚ್ಚೆನ್ ಎಂದೂ ಮುಖವಾಡದ ಮನುಷ್ಯರಾಗಿರಲಿಲ್ಲ. ವೈಚಾರಿಕ ವೈರುಧ್ಯಗಳನ್ನೂ ಒಳಗೊಂಡಂತೆ ಅಂತರಂಗದ ಭಾವ-ಬುದ್ಧಿಗಳಿಗೆ ಬದ್ಧವಾಗಿ ಬದುಕಿದರು. ವ್ಯಕ್ತಿಯೊಬ್ಬರ ಒಟ್ಟು ಸಂದರ್ಭವನ್ನು ಗಮನದಲ್ಲಿಟ್ಟುಕೊಂಡು ನೋಡಿದರೆ – ಎಚ್ಚೆನ್ ಅವರು ಅದ್ಭುತ ವ್ಯಕ್ತಿತ್ವದ ವಿಸ್ಮಯ ಜೀವಿ.

ಹೌದು, ಇವರ ವಿಸ್ಮಯಗಳಲ್ಲಿ ಹಾಸ್ಯಪ್ರಜ್ಞೆಯೂ ಒಂದು. ಅವರು ಮಾಡುತ್ತಿದ್ದ ಜೋಕ್‌ಗಳು ಕೇವಲ ನಗೆ



### 'ಶಾಂತಿ – ಚಿತ್ರಯಾತ್ರೆ'
### ಸಮುದಾಯದತ್ತ ಸಿನಿಮಾ

**ತಾ॥ ೩-೩-೨೦೦೫ ರಿಂದ ೩-೪-೨೦೦೫ರವರೆಗೆ**

**ನಿಮ್ಮೂರಿನಲ್ಲಿ ಎಂದು ಇರುತ್ತದೆಂಬುದನ್ನು ಗಮನಿಸಿ ಚಿತ್ರವನ್ನು ನೋಡಿ**

ಪ್ರೊ॥ ಬರಗೂರು ರಾಮಚಂದ್ರಪ್ಪನವರ ನಿರ್ದೇಶನದ ಈ ಚಲನಚಿತ್ರವನ್ನು ಜನ ಸಮುದಾಯದ ಬಳಿಗೆ ನೇರವಾಗಿ ಕೊಂಡೊಯ್ಯುವ 'ಚಿತ್ರಯಾತ್ರೆ'ಯನ್ನು ನಡೆಸುವ ಮೂಲಕ ಅಭಿರುಚಿ ನಿರ್ಮಾಣದ ಮತ್ತೊಂದು ಹೊಸ ಪ್ರಯೋಗಕ್ಕೆ 'ಶಾಂತಿ' ಚಿತ್ರ ತಂಡ ಸಜ್ಜಾಗಿದೆ. 'ಶಾಂತಿ' ಚಿತ್ರವು ಏಕ ವ್ಯಕ್ತಿ ಚಿತ್ರ; ಒಬ್ಬರೇ ಒಬ್ಬರು ಕಲಾವಿದರನ್ನೊಳಗೊಂಡ ವಿಶಿಷ್ಟ ಪ್ರಯೋಗ. ಈ ಚಿತ್ರದ ವಸ್ತುವಿನಲ್ಲಿ 'ಶಾಂತಿ' ಪರಿಕಲ್ಪನೆಯನ್ನು ಚಿಂತನೆಗೆ ಒಳಪಡಿಸಲಾಗಿದೆ. ಭಯೋತ್ಪಾದಕತೆ ಮತ್ತು ಯುದ್ಧ ಭೀತಿಗಳ ನಡುವೆ ಶಾಂತಿ ಮತ್ತು ಸಮಾನತೆಯ ಮಹತ್ವವನ್ನು ಸೃಜನಾತ್ಮಕವಾಗಿ ಸಾದರಪಡಿಸಲಾಗಿದೆ.

ಬೆಂಗಳೂರಿನಿಂದ ಬೆಳಗಾವಿಯವರೆಗೆ ಚಲಿಸುವ 'ಶಾಂತಿ - ಚಿತ್ರಯಾತ್ರೆ'ಯು ಆಯ್ದ ಸ್ಥಳಗಳಲ್ಲಿ ಒಂದೊಂದು ದಿನ ತಂಗುತ್ತದೆ. ಆಯಾ ಊರಿನ ಆಯ್ದ ಚಿತ್ರಮಂದಿರಗಳಲ್ಲಿ ಪ್ರದರ್ಶನವನ್ನು ವ್ಯವಸ್ಥೆಗೊಳಿಸಲಾಗುತ್ತದೆ. ಚಿತ್ರ ಪ್ರದರ್ಶನಕ್ಕೆ ಮುಂಚೆ ಅದೇ ಚಿತ್ರಮಂದಿರದಲ್ಲಿ ಆಹ್ವಾನಿತ ಲೇಖಕರು - ಚಿಂತಕರು, ಭಯೋತ್ಪಾದನೆ ಮತ್ತು ಯುದ್ಧ ವಿರೋಧಿ ವಿಚಾರಗಳ ಬಗ್ಗೆ ಮಾತಾಡುತ್ತಾರೆ. ಶಾಂತಿ ಮತ್ತು ಸಮಾನತೆಯ ಆಶಯಗಳನ್ನು ಪ್ರತಿಪಾದಿಸುತ್ತಾರೆ. 'ಶಾಂತಿ' ಚಿತ್ರದ ಆಶಯಗಳ ಬಗ್ಗೆ ಚಿಂತನೆ ನಡೆಸಲು ನಿಮಗೆ ಇದೊಂದು ಆಹ್ವಾನ.

ಚಟಾಕಿಗಳಾಗಿರಲಿಲ್ಲ, ಸಾಮಾಜಿಕ-ರಾಜಕೀಯ ಅಭಿಪ್ರಾಯದ ರೂಪಕಗಳಾಗಿರುತ್ತಿದ್ದವು; ಮತ್ತೆ ಕೆಲವು ಜೋಕುಗಳು ಒಂಟಿ ಜೀವಿಯೊಬ್ಬರ ಸ್ವಯಂ ಸಾಂತ್ವನದ ಸಂಗಾತಿಗಳಾಗಿರುತ್ತಿದ್ದವು. ವೈಚಾರಿಕ ನೆಲೆಯಲ್ಲಿ ದೃಢವಾಗಿ ಪ್ರತಿಪಾದಿಸದೆ ಬಿಟ್ಟುಹೋದ ಅಥವಾ ಒಳಗೇ ನುಂಗಿಕೊಂಡ ಎಷ್ಟೋ ಸಂಗತಿಗಳು ಜೋಕಿನ ರೂಪದಲ್ಲಿ ಹೊರಬರುತ್ತಿದ್ದವು. ಒಮ್ಮೊಮ್ಮೆ ವಿಚಾರ ಪ್ರತಿಪಾದನೆ ಮತ್ತು ಜೋಕು – ಎರಡೂ ಒಟ್ಟಿಗೇ ಪ್ರಕಟಗೊಳ್ಳುತ್ತಿದ್ದವು.

ಅಮೆರಿಕದ ಸಾಮ್ರಾಜ್ಯಶಾಹಿ-ಯುದ್ಧಪಿಪಾಸುತನದ ಬಗ್ಗೆ ಎಚ್ಚೆನ್ ಅವರಿಗೆ ವಿರೋಧವಿತ್ತು. ಅಮೇರಿಕಾದ ಅಧ್ಯಕ್ಷ ಜಾರ್ಜ್ ಬುಷ್ ಬಗ್ಗೆ ಅವರು ಜೋಕೊಂದನ್ನು ಹೇಳುತ್ತಿದ್ದರು – ''ಬುಷ್ ಸ್ವರ್ಗಕ್ಕೆ ಹೋದಾಗ ಕಾವಲುಗಾರ ತಡೆದು ನಿಲ್ಲಿಸಿದ. ಅಮೆರಿಕಾದ ಅಧ್ಯಕ್ಷನನ್ನೆ ತಡೆಯುವುದೆಂದರೆ ಏನು? ಬುಷ್ ತನ್ನನ್ನ ಪರಿಚಯಿಸಿಕೊಂಡ, – ತಾನು ಇಂಥವನು ಅಂಥವನು ಅಂತೆಲ್ಲ ಹೇಳಿಕೊಂಡ. ಕಾವಲುಗಾರ ಕೇಳಿದ – 'ನೀನೇ ಬುಷ್ ಅನ್ನೋಕೆ ಗುರುತೇನಿದೆ?' ಬುಷ್ ಸಿಟ್ಟಿಗೆದ್ದ. 'ನನಗಿಂತ ಮುಂಚೆ ಅದ್ಯಾವನೊ ಒಬ್ಬನನ್ನ ಸಲೀಸಾಗಿ ಬಿಟ್ಟುಬಿಟ್ಟೆಯಲ್ಲ? ನನ್ನನ್ನ ಮಾತ್ರ ಯಾಕೆ ಬಿಡೊಲ್ಲ? ಅವನನ್ನ ಗುರುತಿಗಾಗಿ ಯಾಕೆ ಪ್ರಶ್ನಿಸಲಿಲ್ಲ?' ಎಂದು ಅಬ್ಬರಿಸಿದ. ಕಾವಲುಗಾರ ಹೇಳಿದ – 'ಈಗ ನಾನು ಬಿಟ್ಟಿದ್ದು ಐನ್‌ಸ್ಟಿನ್ ಅವರನ್ನ'. ಬುಷ್ ಪ್ರಶ್ನಿಸಿದ 'ಐನ್‌ಸ್ಟಿನ್? ಯಾರಾತ?' ತಕ್ಷಣ ಕಾವಲುಗಾರ ಹೇಳಿದ : ''ಐನ್‌ಸ್ಟಿನ್ ಹೆಸರೇ ಗೊತ್ತಿಲ್ಲ ಅಂದ್ಮೇಲೆ ನೀನೇ ಬುಷ್ ಅಂತ ಖಾತ್ರಿಯಾಯ್ತು?''

ಈ ಜೋಕು ಐನ್‌ಸ್ಟಿನ್ನನ ಔನ್ನತ್ಯವನ್ನು ಮಾತ್ರ ಹೇಳುವುದಿಲ್ಲ, ವಿಜ್ಞಾನಿ, ಸಮಾನತೆಯ ಚಿಂತಕನಾದ ಐನ್‌ಸ್ಟಿನ್ ವಿಷಯವನ್ನೇ ಕೇಳದ 'ಬುಷ್‌ಬುದ್ಧಿ'ಗೆ ಒಂದು ವ್ಯಂಗ್ಯವಾಗಿ ಕೆಲಸಮಾಡುತ್ತದೆ. ಅಮೆರಿಕದ ಸಮಾನತಾ ವಿರೋಧಿ ನೀತಿಯನ್ನು ವಿಡಂಬಿಸುತ್ತದೆ. ಇಂತಹ ನೂರೆಂಟು ಜೋಕುಗಳ ಕಣಜವಾಗಿದ್ದರು – ನಮ್ಮ ಎಚ್ಚೆನ್.

ಎಚ್ಚೆನ್ ಅವರ ಮಹತ್ವಗಳಲ್ಲಿ ಮುಖ್ಯವಾದ ಒಂದು ಅಂಶ – ಅವರ ಬದುಕಿನ ರೀತಿ ಮತ್ತು ಶಿಕ್ಷಣ ನೀತಿ. ನ್ಯಾಷನಲ್ ಹೈಸ್ಕೂಲಿನ ಹಾಸ್ಟೆಲ್‌ನಲ್ಲಿ ಚಿಕ್ಕರೂಮಿನಲ್ಲಿ, ಮಂಚವಿಲ್ಲದ ನೆಲಹಾಸಿನಲ್ಲಿ ಮತ್ತು ಮರದ ಕುರ್ಚಿಯ ಮೇಲೆ ಇಡೀ ಬದುಕನ್ನು ಕಳೆದ ಎಚ್ಚೆನ್ ಅವರ ಕಠೋರನಿಷ್ಠೆ ಎಷ್ಟು ಜನಕ್ಕೆ ಸಾಧ್ಯವಾದೀತು? ಈ ಪ್ರಶ್ನೆಯನ್ನು ಎದುರಿಸದೆ ಇದ್ದರೆ ನಮ್ಮ ಮಾತುಗಳು ಅರ್ಥಪೂರ್ಣವಾಗುವುದಿಲ್ಲ. ಗೌರಿಬಿದನೂರು ತಾಲ್ಲೂಕಿನ ಹೊಸೂರು ಎಂಬ ಪುಟ್ಟ ಹಳ್ಳಿಯಲ್ಲಿ ಹಿಂದುಳಿದ ವರ್ಗದಲ್ಲಿ ಹುಟ್ಟಿ ೩೧-೧-೨೦೦೫ರ ಆರಂಭದ ದಿನದವರೆಗೆ 'ಹೋರಾಟದ ಹಾದಿ' ಸವೆಸಿದ ಎಚ್ಚೆನ್ ಅವರ ಬದುಕು ಎಂದೂ ಬಹಿರಾಡಂಬರಕ್ಕೆ ಬಲಿಯಾಗಲಿಲ್ಲ. ಇನ್ನು, ಶಿಕ್ಷಣದ ವಿಷಯಕ್ಕೆ ಬಂದರೆ – ತಮ್ಮ ಸಂಸ್ಥೆಯಿಂದ ಲಾಭದಾಯಕವಾದ ಇಂಜಿನಿಯರಿಂಗ್, ವೈದ್ಯಕೀಯ ಕಾಲೇಜುಗಳನ್ನಾಗಲಿ, ಬಿ.ಇಡಿ ಅಥವಾ ಡಿ.ಇಡಿ(ಟಿ.ಸಿ.ಎಚ್.)ಯಂತಹ ಕೋರ್ಸುಗಳನ್ನಾಗಲಿ ಆರಂಭಿಸಲಿಲ್ಲ. ಎಚ್ಚೆನ್ ಅವರು ಕೇಳಿದ್ದರೆ ಯಾವುದೇ ಪಕ್ಷದ ಸರ್ಕಾರವಿದ್ದರೂ ಅನುಮತಿ ಸಿಗುತ್ತಿತ್ತು. ಆದರೆ ಎಚ್ಚೆನ್ ಇಂತಹ ಯಾವ ಕಾಲೇಜುಗಳಿಗಾಗಿ ಕೇಳಿಕೊಳ್ಳಲಿಲ್ಲ. ಬದಲಾಗಿ ಸಾಮಾನ್ಯ ಶಿಕ್ಷಣಕ್ಕೆ ಮಹತ್ವ ನೀಡಿದರು. ವೃತ್ತಿಶಿಕ್ಷಣದ ಭರಾಟೆಯಲ್ಲಿ ಶಿಕ್ಷಣೋದ್ಯಮಿಗಳು ವಿಜೃಂಭಿಸುತ್ತಿರುವ ಇಂದಿನ ಸನ್ನಿವೇಶದಲ್ಲಿ ಎಚ್ಚೆನ್ ಶಿಕ್ಷಣತಜ್ಞರಾಗಿ ಉಳಿದುಕೊಂಡರು.

ಕರ್ನಾಟಕದ ಧೀಮಂತ ರಾಜಕೀಯ ನಾಯಕರೆನಿಸಿಕೊಂಡಿದ್ದ ದೇವರಾಜ ಅರಸು ಅವರನ್ನು ಕಂಡರೆ ಎಚ್ಚೆನ್ ಅವರಿಗೆ ನಿಜವಾದ ಗೌರವ. 'ನಿಜವಾದ ಗೌರವ'ವೆಂದು ಯಾಕೆ ಹೇಳುತ್ತೇನೆಂದರೆ – ಎಚ್ಚೆನ್ ಅನೇಕ ರಾಜಕಾರಣಿಗಳ ಬಗ್ಗೆ ಮೆದುಭಾವನೆಯಿಂದ ವರ್ತಿಸುತ್ತಿದ್ದರಾದರೂ ಎಲ್ಲರ ಬಗ್ಗೆ ಅದೇ ರೀತಿಯ ಗೌರವವನ್ನು ಇಟ್ಟುಕೊಂಡಿದ್ದರೆಂದು ನನಗನ್ನಿಸುವುದಿಲ್ಲ. 'ಅನಿವಾರ್ಯ ಗೌರವ'ಕ್ಕೂ 'ನಿಜವಾದ ಗೌರವ'ಕ್ಕೂ ವ್ಯತ್ಯಾಸವಿದೆ. ದೇವರಾಜ ಅರಸು ಅವರು ಮುಖ್ಯಮಂತ್ರಿಗಳಾಗಿದ್ದಾಗಲೇ ಎಚ್ಚೆನ್ ಅವರು ಬೆಂಗಳೂರು ವಿಶ್ವವಿದ್ಯಾಲಯದ ಕುಲಪತಿಗಳಾದದ್ದು. ಈ ಒಂದು ಕಾರಣಕ್ಕಾಗಿಯೇ ಅರಸರ ಬಗ್ಗೆ ಗೌರವವಿತ್ತೆಂದು ನಾನು ಹೇಳುತ್ತಿಲ್ಲ. ಅರಸು ಅವರು ಹಿಂದುಳಿದ ವರ್ಗಗಳ ಏಳಿಗೆಗಾಗಿ ದುಡಿದದ್ದು, ಮೀಸಲಾತಿ ತಂದದ್ದು, ಭೂ ಸುಧಾರಣೆಯ ಅನುಷ್ಠಾನಕ್ಕೆ ಮುಂದಾದದ್ದು – ಇಂತಹ ಹತ್ತಾರು ಕಾರಣಗಳಿಗಾಗಿ ಎಚ್ಚೆನ್ ಅವರು ನಿಜವಾದ ಗೌರವವನ್ನು ತೋರಿಸುತ್ತಿದ್ದರು. ಈಗ್ಗೆ ಕೆಲವೇ ತಿಂಗಳ ಹಿಂದೆ ದೇವರಾಜ ಅರಸರ ಹುಟ್ಟೂರಿಗೆ ಹೋಗಿ ಅವರ ಸಮಾಧಿಯನ್ನು ಕಣ್ಣಾರೆ ಕಂಡು ಗೌರವ ಸೂಚಿಸಿದ್ದರು. ಅರಸು ಅವರ ಸಮಾಧಿಯನ್ನು ಸರಿಯಾಗಿ ಸಂರಕ್ಷಿಸಿಲ್ಲವೆಂದು ವ್ಯಥೆಪಟ್ಟಿದ್ದರು. ಅರಸು ಅವರ ಬಗ್ಗೆ ಎಚ್ಚೆನ್ ಅವರಿಗಿದ್ದ ಗೌರವದ ಹಿಂದೆ ಸಾಮಾಜಿಕ-ರಾಜಕೀಯ ಸಿದ್ಧಾಂತದ ಸೆಳೆತವಿತ್ತು. ಹೀಗೆ ಎಚ್ಚೆನ್ ಅವರ ವಿಚಾರಗಳು ಪ್ರಕಟಗೊಳ್ಳುತ್ತಿದ್ದ ರೀತಿಗಳಲ್ಲಿ ಹಲವು ವಿಧಗಳು. ಅರಸು ಅವರ ಬಗೆಗಿನ ಗೌರವವೂ ಇವುಗಳಲ್ಲಿ ಒಂದು.

ನನ್ನದೇ ಒಂದು ಉದಾಹರಣೆ ಹೇಳುವುದಾದರೆ ನಾನು ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರಕ್ಕೆ ಅಧ್ಯಾಪಕನಾಗಿ ಆಯ್ಕೆಯಾಗಲು ಮೊದಲ ಒತ್ತಾಸೆಯಾದವರು, ಕಾರಣೀಕರ್ತರಾದವರು – ಎಚ್ಚೆನ್. ಹಾಗೆ ನೋಡಿದರೆ, ಆಗ ನನಗೆ-ಅವರಿಗೆ ಆತ್ಮೀಯ ಸಂಬಂಧ ಇರಲಿಲ್ಲ. ಒಂದೆರಡು ಸಾರಿ ಮಾತ್ರ ಮಾತನಾಡುವ ಅವಕಾಶ ಲಭ್ಯವಾಗಿತ್ತು ಅಷ್ಟೆ. ಹಾಗಾದರೆ ನನ್ನ ಬಗ್ಗೆ ಅವರು ತೋರಿದ ಒಲವಿಗೆ ಏನು ಕಾರಣ? ನಾನು ಸಂದರ್ಶನದಲ್ಲಿ ಚೆನ್ನಾಗಿ ಮಾಡಿದ್ದೆ ನಿಜ. ಸಂದರ್ಶನಕ್ಕೆ ಪರಿಣತರಾಗಿ ಬಂದಿದ್ದ ಡಾ॥ ಎಚ್. ಎಸ್. ಬಿಳಿಗಿರಿಯವರಿಗೆ ನನ್ನ 'ಸಂದರ್ಶನ' ತೃಪ್ತಿಕರವಾಗಿದ್ದುದೂ ನಿಜ. ಅಷ್ಟೇ ಆಗಿದ್ದರೆ ಎಚ್ಚೆನ್ ಅವರ ಮಾತಿನ ಅಗತ್ಯ ಬೀಳುತ್ತಿರಲಿಲ್ಲ. ಎಚ್ಚೆನ್ ನನ್ನ ಆಯ್ಕೆಯ ಪರವಾಗಿ ಮಾತಾಡಿದ ವಿಷಯ ಆನಂತರ ತಿಳಿಯಿತು. ಈ ಆಯ್ಕೆಯ ಹಿಂದೆ ಒಂದು ವಿಚಾರಧಾರೆಯೂ ಇತ್ತೆಂದು ನನ್ನ ತಿಳುವಳಿಕೆ.

ಡಾ॥ ಎಚ್ಚೆನ್ ಅವರು ಕುಲಪತಿ ಹುದ್ದೆಯನ್ನು ಬಿಟ್ಟಮೇಲೆ ನಾನು ಅವರಿಗೆ ಹತ್ತಿರವಾಗುತ್ತ ಬಂದೆ. ಅವರ ಅಂತರಂಗದಲ್ಲಿ ಹುದುಗಿಹೋಗುತ್ತಿದ್ದ ಅನೇಕ ವಿಚಾರಗಳನ್ನು ಹಂಚಿಕೊಳ್ಳುವ ಒಬ್ಬ ಕಿರಿಯ ಗೆಳೆಯನಾದೆ. ಕೆಲಮಿತ್ರರು ನನ್ನನ್ನು 'ಎಚ್ಚೆನ್ ಅವರ ಮಾನಸಪುತ್ರ' ಎಂದು ಕರೆಯುತ್ತಿದ್ದರು. ಎಚ್ಚೆನ್ ನನ್ನನ್ನು ತಂದೆಯಂತೆ


**Statement about ownership and other particulars about newspaper**

**FORM IV**

| | | |
|---|---|---|
| 1. Place of publication | : | Bangalore |
| 2. Periodicity of its publication | : | Monthly |
| 3. Printer's Name | : | R. S. Rajaram |
| Nationality | : | Indian |
| Address | : | Navakarnataka Publications (P) Ltd. Embassy Centre Crescent Road, P. B. No. 5159 Bangalore - 560 001 |
| 4. Publisher's Name | : | R. S. Rajaram |
| Nationality | : | Indian |
| Address | : | Navakarnataka Publications (P) Ltd. Embassy Centre Crescent Road, P. B. No. 5159 Bangalore - 560 001 |
| 5. Editor's Name | : | G. Ramakrishna |
| Nationality | : | Indian |
| Address | : | Navakarnataka Publications (P) Ltd. Embassy Centre Crescent Road, P. B. No. 5159 Bangalore - 560 001 |
| 6. Name and address of individuals who own the newspaper and partners and shareholders holding more than one percent of the total capital | : | Navakarnataka Publications (P) Ltd., Embassy Centre Crescent Road P. B. No. 5159 Bangalore - 560 001 (Sole Proprietors) |

I, R. S. Rajaram, hereby declare that the particulars given above are true to the best of my knowledge and belief.

Date : 28-2-2005

Sd/-
R. S. Rajaram
Publisher

ದಂಡಿಸಲಿಲ್ಲ. ಕೋಪಮಾಡಿಕೊಳ್ಳಲಿಲ್ಲ. ಆದರೆ ನಾನು ಮಗನಂತೆ ಮುನಿಸಿಕೊಂಡದ್ದು ಉಂಟು. ಅವರ ಒಂದೆರಡು ಅಭಿಪ್ರಾಯಗಳನ್ನು ಒಪ್ಪಲು ಸಾಧ್ಯವಿಲ್ಲವೆನ್ನಿಸಿದಾಗ ತಿಂಗಳುಗಟ್ಟಲೆ ಅವರ ರೂಮಿನ ಹತ್ತಿರ ಸುಳಿಯದೆ ನಾನು ನನ್ನಲ್ಲೇ ಸಂಕಟ ಪಟ್ಟದ್ದುಂಟು. ಅವರೇ ಫೋನ್‌ಮಾಡಿ ಮಾತಾಡಿಸಿ, ಕರೆದು ಮತ್ತದೇ ಹಾದಿಯಲ್ಲಿ ನಡೆದದ್ದುಂಟು. ಇದಕ್ಕೆ ತಂದೆಯ ವಾತ್ಸಲ್ಯವಲ್ಲದೆ ಬೇರೇನೆಂದು ಕರೆಯಲಿ ?

ಹೌದು, ನಾನು ಭಾವುಕನಾಗುತ್ತಿದ್ದೇನೆ. ಸಾವು ಎಂಥ ಶಕ್ತಿಶಾಲಿ ? ಜೀವವನ್ನು ಕರಗಿಸುವುದಲ್ಲದೆ, ಬದುಕಿರುವವರ ಮನಸ್ಸನ್ನೂ ಕರಗಿಸುತ್ತದೆ. ಆದರೆ ಎಚ್ಚೆನ್ ಅವರ ಬಗ್ಗೆ ಭಾವುಕವಾಗಲು ಸಾವಿನ ರಿಯಾಯಿತಿ ಬೇಕಿಲ್ಲ.. ಅಂದು ಆಸ್ಪತ್ರೆಗೆ ಹೋಗಿದ್ದೆವು – ನಾನು ಮತ್ತು ನನ್ನ ಪತ್ನಿ ರಾಜಲಕ್ಷ್ಮಿ. ನನ್ನ ಪತ್ನಿ ''ಬೇಗ ವಾಪಸ್ ಬನ್ನಿ ಸಾರ್ ಉಪ್ಪಿಟ್ಟು ಮಾಡಿ ತರ್ತೇನೆ'' ಎಂದಾಗ ಪ್ರಫುಲ್ಲರಾದಂತೆ ಕಂಡರು. ಮಾತು ನನ್ನ ಕಡೆ ಹೊರಳಿತು – ''ನೋಡಪ್ಪ, ನಾನು ವಾಪಸ್ ಬಂದ್‌ಮೇಲೆ ನಿನ್‌ಹತ್ರ ಎರಡು ಗಂಟೇನಾದ್ರು ಮಾತಾಡ್ ಬೇಕು – ಸಮಾಜ ಬದಲಾವಣೆ ಬಗ್ಗೆ ಸುಮ್‌ಸುಮ್ನೆ ಬದಲಾವಣೆ ಆಗಲ್ಲಪ್ಪ. ಅದಕ್ಕೊಂದು ಕ್ರಮ ಬೇಕು...'' ಹೀಗೆ ಮಾತಾಡತೊಡಗಿದಾಗ ನರ್ಸ್ ನನ್ನ ಪತ್ನಿಯನ್ನು ಕರೆದು ''ಹೆಚ್ಚು ಮಾತಾಡ್ತಾರೆ ಇವರು, ಆಯಾಸ ಆಗುತ್ತೆ'' ಎಂದರು. ಆಗ ನಾನು ಎಚ್ಚೆನ್ ಅವರಿಗೆ ''ನೀವು ಬೇಗ ವಾಪಸ್ ಬನ್ನಿ ಸಾರ್. ಆಮೇಲ್ ಮಾತಾಡ್ತಾನೇ ಇರೋಣ'' ಎಂದೆ.

ಡಾ॥ ಎಚ್ಚೆನ್ ಬಂದರು – ನಿರಂತರ ಮೌನದಲ್ಲಿ. ಆಡಿದ ಮಾತುಗಳೆಲ್ಲ ನೆನಪಲ್ಲಿ ನೆಂದು ನಿಂತುಕೊಂಡಿವೆ – ಜೀವ ತುಂಬಿದ ಎಚ್ಚರದಲ್ಲಿ, ಪ್ರಶ್ನೆಯಾಕಾರದಲ್ಲಿ!

ಎಚ್ಚೆನ್ ಲಾಂಛನ, ಪ್ರಶ್ನೆ ತಾನೆ ?

**ಪ್ರೊ॥ ಬರಗೂರು ರಾಮಚಂದ್ರಪ್ಪ**, ''ಸಂವೇದನೆ'', ೨೭೫, ೧೧ನೇ 'ಬಿ' ಕ್ರಾಸ್ ೧೪ನೇ ಮುಖ್ಯರಸ್ತೆ, ಜೆ. ಪಿ. ನಗರ ೨ನೇ ಹಂತ, ಬೆಂಗಳೂರು - ೫೬೦ ೦೭೮

# ತಂತಿಯ ಮೇಲಿನ ನಡಿಗೆ

**ಎಂ**ಬತ್ನಾಲ್ಕು ವರ್ಷಗಳ ಕಾಲ, ಡಾ॥ ಎಚ್.ಎನ್. ಅವರು ನಡೆಸಿದ ಜೀವನ ತಂತಿಯ ಮೇಲಿನ ನಡಿಗೆ. ಅವರ ಜೀವನದ ಬಗ್ಗೆ ಬರೆಯುವುದು ಕೂಡ ಅಂತಹುದೇ ಅಗ್ನಿದಿವ್ಯ. ಅವರ ಸರಳಜೀವನ, ವೈಚಾರಿಕ ಮನೋಧರ್ಮ, ಹಾಸ್ಯಪ್ರಜ್ಞೆ, ಸಂಸ್ಥೆಗಳನ್ನು ಕಟ್ಟುವ ಕೆಲಸದಲ್ಲಿ ಅವರು ತೋರಿಸಿದ ಅಪಾರ ನಿಷ್ಠೆ ಮುಂತಾದ ಸಂಗತಿಗಳ ಬಗ್ಗೆ ಅನೇಕರು ವಿವರವಾಗಿ ಬರೆದಿದ್ದಾರೆ. ಸ್ವತಃ ನನಗೂ ಅವರ ಮಾನವೀಯ ಗುಣಗಳ ನಿಕಟ ಪರಿಚಯ ಇದೆ. ಅವುಗಳನ್ನು ಹತ್ತು ಹಲವು ಘಟನೆಗಳ ಮೂಲಕ ವಿವರಿಸುವುದು ಬೆಟ್ಟಕ್ಕೆ ಕಲ್ಲುಹೊತ್ತಂತೆ. ತಮ್ಮ ಸುದೀರ್ಘ ಬದುಕಿನಲ್ಲಿ ಅವರು ಎದುರಿಸಬೇಕಾದ ಹಲವು ಬಿಕ್ಕಟ್ಟುಗಳನ್ನು ಕುರಿತು ಮತ್ತು ಅವರು ಕಂಡುಕೊಂಡ ಪರಿಹಾರಗಳನ್ನು ಕುರಿತು ಬರೆಯುವುದು ನನ್ನ ಉದ್ದೇಶ.

ಇಪ್ಪತ್ತನೆಯ ಶತಮಾನದ ಮೊದಲ ದಶಕಗಳಲ್ಲಿ ಅ-ವೈದಿಕ ಶೂದ್ರ ಸಮುದಾಯಗಳು ಎದುರಿಸಿದ ಸಮಸ್ಯೆಗಳ ಹಾಗೂ ಕಂಡುಕೊಂಡ ಪರಿಹಾರಗಳ ಒಂದು ವಿನ್ಯಾಸವನ್ನು ಎಚ್.ಎನ್. ಅವರ ಬದುಕಿನಲ್ಲಿ ಕಾಣಬಹುದು. ಅವರಿಗಿಂತ ಸುಮಾರು ಹದಿನೈದು ವರ್ಷಗಳ ಹಿಂದೆ ಹುಟ್ಟಿದ ಕುವೆಂಪುರವರು, ಅದೇ ಸನ್ನಿವೇಶದಲ್ಲಿ ಒಡಮೂಡಿದ ಇನ್ನೊಂದು ಮಾದರಿಯನ್ನು ಪ್ರತಿನಿಧಿಸುತ್ತಾರೆ. ಎಚ್.ಎನ್. ಅವರು ಭೂಮಾಲಿಕ ವರ್ಗಗಳಿಗಾಗಲೀ, ಜಾತಿಗಳಿಗಾಗಲೀ ಸೇರಿರಲಿಲ್ಲ. ರಾಮಕೃಷ್ಣಾಶ್ರಮವು ಇವರಿಬ್ಬರಿಗೂ ಆಶ್ರಯವನ್ನು ಒದಗಿಸಿತು. ಆದರೆ ಇವರುಗಳ ಮನಸ್ಸಿನ ಮೇಲೆ ಹೆಚ್ಚು ಆಳವಾದ ಪ್ರಭಾವವನ್ನು ಬೀರಿದ್ದು ಸ್ವಾಮಿ ವಿವೇಕಾನಂದರ ಸಾಮಾಜಿಕ ವ್ಯಕ್ತಿತ್ವವೇ ವಿನಾ ಪರಮಹಂಸರ ಅನುಭಾವಿಕ ಆಧ್ಯಾತ್ಮವಲ್ಲ. ಗಾಂಧಿಯವರು ನಡೆಸಿದ ಸ್ವಾತಂತ್ರ್ಯ ಚಳುವಳಿಯಲ್ಲಿ ನೇರವಾಗಿ ಭಾಗವಹಿಸಿದ ಎಚ್.ಎನ್. ಅವರು, ಗಾಂಧೀವಾದವು ನೀಡಿದ ಬಾಹ್ಯಜೀವನದ ನೆಲೆಗಳನ್ನು ನಿಷ್ಠೆಯಿಂದ ಸ್ವಾಗತಿಸಿದರು. ಆದರೆ, ಸ್ವಾತಂತ್ರ್ಯೋತ್ತರ ರಾಜಕೀಯದಲ್ಲಿ ಸಕ್ರಿಯವಾಗಿ ಭಾಗವಹಿಸುವ ಸಾಧ್ಯತೆಯ ಕಡೆಗೆ ಅವರು ಕಣ್ಣೆತ್ತಿಯೂ ನೋಡಲಿಲ್ಲ. ಒಂದು ವೇಳೆ ಪ್ರಯತ್ನಿಸಿದ್ದರೂ, ಅಂದಿನ ಸಮೀಕರಣಗಳಲ್ಲಿ ಅವರು ಯಶಸ್ವಿಯಾಗುತ್ತಿದ್ದರೆಂದು ಹೇಳಬರುವುದಿಲ್ಲ. ಇಷ್ಟಾಗಿಯೂ, ಅವರು ತಮ್ಮ ಬದುಕಿನ ಕೊನೆಯ ದಿನಗಳವರೆಗೂ, ಸ್ಥೂಲವಾಗಿ ಕಾಂಗ್ರೆಸ್‌ನ ತಾತ್ವಿಕತೆಯ ಪರವಾಗಿಯೇ ಉಳಿದರು. ಆ ಪಕ್ಷದಲ್ಲಿ ಮತ್ತು ಇತರ ಕಡೆ ಕಾಣಿಸಿಕೊಂಡ ಭ್ರಷ್ಟತೆಯನ್ನು ಕುರಿತು ಅವರಿಗೆ ವಿಷಾದ ಇತ್ತು. ಆದರೆ ಆ ಪಕ್ಷದ ಅಜೆಂಡಾಗಳ ಬಗ್ಗೆ ಅವರಿಗೆ ಸಹಮತ ಇತ್ತು. ಹಾಗೆಯೇ ಎಪ್ಪತ್ತರ ದಶಕದಲ್ಲಿ ಆ ಪಕ್ಷದ ನಿಲುವುಗಳು ಮೂಡಿಸಿದ ಹೊಸ ಎಚ್ಚರಗಳು ಅವರಿಗೆ ಆಪ್ಯಾಯಮಾನವೇ ಆಗಿದ್ದವು. ನೆಹರೂರವರ ಕಾಲದಲ್ಲಿಯೇ ಗಾಂಧೀವಾದದ ತಾತ್ವಿಕತೆಗೆ ವಿದಾಯ ಹೇಳಿದ ಕಾಂಗ್ರೆಸ್‌ಗೆ, ಇಂದಿಗೂ ಕೂಡ ವರ್ಗ, ವರ್ಣ ಮತ್ತು ಜಾತಿಪದ್ಧತಿಗಳನ್ನು ಕುರಿತ ಒಂದು ಖಚಿತವಾದ ನೆಲೆ ಇಲ್ಲವೆನ್ನುವುದನ್ನು ನಾವು ಮರೆಯಬಾರದು. ಎಚ್.ಎನ್. ಅವರು ಯಾವುದೇ ರಾಜಕೀಯ ಸಿದ್ಧಾಂತದ ಕಡೆಗೆ ಒಲದೆಯೂ, ಸಾಮಾಜಿಕ ಸನ್ನಿವೇಶಗಳ ಬಗ್ಗೆ ಸ್ಪಷ್ಟವಾಗಿದ್ದರು. ಸಾಮಾಜಿಕ ನ್ಯಾಯ ಮತ್ತು ಸೆಕ್ಯುಲರಿಸಂಗಳ ನಡುವೆ ಅಗತ್ಯವಾದ ಸಮತೋಲನವನ್ನು ಅವರು ಹೊಂದಿದ್ದರು. ಆದರೆ, ಮೆರಿಟ್ ಬಗ್ಗೆ ಅವರಿಗೆ ಬಲವಾದ ಇಲ್ಯೂಷನ್ ಇತ್ತೆಂಬುದನ್ನು ಮರೆಯಲಾಗುವುದಿಲ್ಲ. ಕಾಂಗ್ರೆಸ್‌ನ 'ತಾತ್ವಿಕತೆ'ಗೆ ಪರ್ಯಾಯವಾದ ಮಾರ್ಕ್ಸ್‌ವಾದ, ಲೋಹಿಯಾವಾದ ಮತ್ತು ಅಂಬೇಡ್ಕರ್ ವಾದಗಳ ಪರವಾದ ಖಚಿತ ನಿಲುವನ್ನು ಅವರು ತಳೆದಿದ್ದಕ್ಕೆ ನಮಗೆ ಯಾವುದೇ ಪುರಾವೆ ಸಿಗುವುದಿಲ್ಲ. ಆದರೆ ಅವರು ಬಲಪಂಥೀಯ ವಿಚಾರಧಾರೆಯನ್ನು ಅತ್ಯಂತ ಖಚಿತವಾಗಿ ವಿರೋಧಿಸಿದರು. ಹಾಗಾದರೆ, ಅವರ ರಾಜಕೀಯ ನೆಲೆಗಟ್ಟು ಯಾವುದು? ಈ ಪ್ರಶ್ನೆಗೆ ಉತ್ತರವನ್ನು ನಾವು ಇನ್ನೂ ಹುಡುಕಬೇಕಾಗಿದೆ.

ಅಂದಿನ ಶೋಷಿತ-ದಲಿತ ಸಮುದಾಯಗಳಿಗೆ ಇದ್ದ ಬಿಡುಗಡೆಯ ಬಾಗಿಲೆಂದರೆ, ಶಿಕ್ಷಣವೇ ಆಗಿತ್ತು. ಈ ಸತ್ಯವನ್ನು ಅವರು ಹೇಗೋ ಮನಗಂಡಿದ್ದರು. ಆದ್ದರಿಂದಲೇ ಅವರು ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ ನಂತರ ವಿದ್ಯಾಭ್ಯಾಸಕ್ಕೆ ಹಿಂದಿರುಗಿದರು. ಅದರಲ್ಲಿ ಅಸಾಧಾರಣವಾದ ಯಶಸ್ಸನ್ನು ಪಡೆದರು. ಅನಂತರ, ಅವರು ಸಂಶೋಧಕ ವೃತ್ತಿಯ ಬದಲಾಗಿ ಶಿಕ್ಷಕವೃತ್ತಿಯನ್ನು ಆರಿಸಿಕೊಂಡರು. ಅಲ್ಲಿ ಅವರು ವಿದ್ಯಾರ್ಥಿಗಳಿಗೆ ನೀಡಿದ್ದು ಮತ್ತು ನೀಡಬಯಸಿದ್ದು ಜೀವನಶಿಕ್ಷಣವೇ ಹೊರತು ಕೇವಲ ಭೌತಶಾಸ್ತ್ರದ ಪ್ರಮೇಯಗಳ ನೀರಸ ನಿರೂಪಣೆಯಲ್ಲ. ಜೀವನವನ್ನು ಕುರಿತಾದ ನಿಷ್ಠೆ ಮತ್ತು ಸಮಾಜವನ್ನು ಕುರಿತಾದ ತಿಳಿವಳಿಕೆ ಎರಡನ್ನೂ ಅವರು ಕಲಿಸಿದರು. ಜೀವನದ ಅನುಭವವನ್ನು ಶ್ರೀಮಂತಗೊಳಿಸುವ ಪ್ರವಾಸ, ಸಾಹಿತ್ಯ, ಕಲೆ, ಸಂಗೀತ ಮುಂತಾದ ಸಂಗತಿಗಳ ಬಗ್ಗೆ ಅವರ ನಿಲುವು ನಿಷ್ಠಾವಂತ ಗಾಂಧೀವಾದಿಯ ಹಾಗೆ, ನಿರಾಸಕ್ತವಾಗಿತ್ತು. ಆದರೆ, ಅವರು ಹಿಂದುಳಿದ ವರ್ಗಗಳಿಂದ ಬಂದ ಅನೇಕರಂತೆ ಮಾನವಿಕಗಳ ಅಥವಾ ಸಮಾಜವಿಜ್ಞಾನಗಳ ದಿಕ್ಕಿನಲ್ಲಿ ಚಲಿಸಲಿಲ್ಲ. ಬದಲಾಗಿ, ಅವರಿಗೆ ವಿಜ್ಞಾನವು ಅಪವರ್ಗೀಕರಣದ ಹಾಗೂ ಉನ್ನತೀಕರಣದ ದಾರಿಯಾಗಿ ಕಂಡಿತು. ಇದು ನೆಹರೂರವರು ಅಪಾರವಾಗಿ ಪ್ರೀತಿಸಿದ ಮಾದರಿಯಾಗಿತ್ತು. ಅಂದಿನ ಸನ್ನಿವೇಶದಲ್ಲಿ, ವಿದ್ಯಾವಂತರಾದವರಿಗೆ, ವರ್ಗಗಳ ಶ್ರೇಣಿಯಲ್ಲಿ ಮೇಲುಮುಖವಾದ ಚಲನೆಯೆಂದರೆ ಮಧ್ಯಮವರ್ಗಗಳ ಕಡೆಗೆ ಚಲಿಸುವುದೇ ಆಗಿತ್ತು. ಗಾಂಧೀವಾದವು ಪ್ರತಿಪಾದಿಸಿದ ಜೀವನಕ್ರಮವು, ಜಾತಿಯ ನಿರ್ಮೂಲನಕ್ಕೆ ಅವಕಾಶ ಮಾಡಿಕೊಡುವಂತೆಯೇ ಬ್ರಾಹ್ಮಣೀಕರಣದ ಕಡೆಗಿನ ಚಲನೆಯನ್ನೂ ಪ್ರೇರಿಸುತ್ತಿತ್ತು. ಹೀಗೆ, ಅಂತರಂಗದಲ್ಲಿ ದಲಿತರಾಗಿ, ಬಹಿರಂಗದಲ್ಲಿ ಬ್ರಾಹ್ಮಣರಾಗಿ, ವೃತ್ತಿಯಲ್ಲಿ ಶಿಕ್ಷಕರಾಗಿ ಬದುಕುವುದು ಅವರಿಗೆ ಮಾತ್ರವಲ್ಲ ಅಂಥ ಅನೇಕರಿಗೆ ಅನಿವಾರ್ಯವಾಯಿತು. ಅಂದಿನ ಸರ್ಕಾರೀ ಕಾಲೇಜುಗಳಲ್ಲಿ ಓದುತ್ತಿದ್ದ ಶೋಷಿತ ಸಮುದಾಯಗಳಲ್ಲಿ ಅವರ ನಿಜವಾದ ವಿದ್ಯಾರ್ಥಿಗಳಿದ್ದರು. ಆದರೆ, ಅವರು ಕಲಿಸಬೇಕಾಗಿದ್ದು ಮಧ್ಯಮವರ್ಗ ಮತ್ತು ಉನ್ನತ ಮಧ್ಯಮವರ್ಗಗಳ, 'ನಿಯೋರಿಚ್' ಆಗಬಯಸಿದ, ಆದ ತರುಣ ತರುಣಿಯರಿಗೆ. ಪರಿಣಾಮವಾಗಿ, ತಮ್ಮ ಸಾವಿರಾರು ವಿದ್ಯಾರ್ಥಿಗಳ ಮೇಲೆ ಅವರು ಬೀರಿದ ಪ್ರಭಾವವು ನೈತಿಕ ನೆಲೆಯದೋ, ಮಾನವೀಯ ಸಂಬಂಧಗಳ ನೆಲೆಯದೋ ಆಗಿರುತ್ತಿತ್ತೇ ವಿನಾ ಸಾಮಾಜಿಕ-ರಾಜಕೀಯ ಆಯಾಮಗಳನ್ನು ಪಡೆದುಕೊಳ್ಳಲಿಲ್ಲ. ಬೇರೆ ಮಾತುಗಳಲ್ಲಿ ಹೇಳುವುದಾದರೆ, ಆ ವಿದ್ಯಾರ್ಥಿಗಳಲ್ಲಿ ನೂರಕ್ಕೆ ತೊಂಬತ್ತು ಜನ ಕ್ರಿಸ್ತನ ಅಸ್ತಿತ್ವವನ್ನೇ ನಿರಾಕರಿಸಿದ ಕ್ರಿಸ್ತಶಿಷ್ಯರಂತೆ ಮುಖಹೀನರಾಗಿದ್ದರು. ರ್‍ಯಾಂಕ್ ವಿಜೇತರನ್ನೋ ನಟರನ್ನೋ ಗಾಯಕರನ್ನೋ ಕ್ರೀಡಾಪಟುಗಳನ್ನೋ ಒಳ್ಳೆಯ ಅಧ್ಯಾಪಕರನ್ನೋ ಸೃಷ್ಟಿಸುವ ಮಾತು ಬೇರೆ. ಅದಕ್ಕೆ ಬೇಕಾದದ್ದು ಮಾನವೀಯ ಸಂಬಂಧಗಳನ್ನು ಬೆಳೆಸಿಕೊಳ್ಳುವ ತಾಯಿತನ. ಆ ಗುಣ ಅವರಲ್ಲಿ ಹೇರಳವಾಗಿ ಇತ್ತು. ಹಾಗೆ ನೋಡಿದರೆ, ಎಚ್.ಎನ್. ಅವರ ಜೀವನ-ಸಾಧನೆಗಳಿಂದ ಸ್ಫೂರ್ತಿ ಪಡೆದವರಲ್ಲಿ, ಏಕಲವ್ಯ ಶಿಷ್ಯರೇ ಜಾಸ್ತಿ. ಅಂಥವರಿಗೆ, ಎಚ್.ಎನ್.

***ಪತ್ರಗಳು...***

ಫೆಬ್ರವರಿ ೨೦೦೫ರ ಸಂಚಿಕೆಯಲ್ಲಿ ಪ್ರಕಟವಾಗಿದ್ದ ''ಕೋಲಾರದ ಚಿನ್ನದ ಗಣಿಗಳು'' ಲೇಖನವನ್ನು ಬರೆದಿರುವ ಶ್ರೀ. ಎಂ. ವೆಂಕಟಸ್ವಾಮಿಯವರ ವಿಳಾಸವು ತಪ್ಪಾಗಿ ಅಚ್ಚಾಗಿರುವುದಕ್ಕೆ ವಿಷಾದಿಸುತ್ತೇವೆ. ಅವರ ಸರಿಯಾದ ವಿಳಾಸ ೫೭ ಎ, ಸಾಯಿ ಲೋಟಸ್ ಲೇಔಟ್, ಬೆಂಗಳೂರು - ೫೬೦ ೦೬೧.

*– ಸಂಪಾದಕ*

ಡಾ॥ ಅನಿಲ ಕಮತಿಯವರ ಲೇಖನ ''ಗಡಿಭಾಗದ ಸಮಸ್ಯೆಗಳು ಮತ್ತು ಪರಿಹಾರ'' ಚಿಂತನಾರ್ಹವಾಗಿದೆ. ಕಮತಿಯವರು ಗಡಿಭಾಗದ ದ್ವಂದ್ವ, ತಳಮಳ, ನೋವುಗಳನ್ನು ಸಶಕ್ತವಾಗಿ ಮೂಡಿಸಿದ್ದಾರೆ. ಗಡಿಭಾಗದ ಉದ್ದಕ್ಕೂ ಆರ್ಥಿಕನೀತಿಯನ್ನು ಅವಲಂಬಿಸಿ ನಡೆಯುವ 'ಭಾಷಾಂತರ' ಆತಂಕಕಾರಿಯಾದದ್ದು. ಕಮತಿಯವರಂಥ ನಿಷ್ಠಾವಂತ ಕನ್ನಡಿಗರಿಂದ ಗಡಿಯಲ್ಲಿನ ಕನ್ನಡ ಬದುಕಿದೆ ಎಂದರೆ ಅತಿಶಯೋಕ್ತಿಯಾಗಲಾರದು. ಲೇಖನದಲ್ಲಿ ಆಶಿಸಿರುವಂತೆ ಸಾಂಸ್ಕೃತಿಕ ಎಳೆಗಳು ಗಟ್ಟಿಯಾಗಿ ರಾಜಕೀಯ ಗೋಡೆಗಳು ಕುಸಿಯುವ ಕಾಲ ಬೇಗ ಬರಲಿ.

*ಗಾಯತ್ರೀನಂದನ, ಗಳತಗಾ*

ಅವರು ಹಳ್ಳಿಗಳಿಂದ ಮೂಡಿಬಂದ ಅನಾಥ ತರುಣ ತರುಣಿಯರು ಏರಬಹುದಾದ ಎತ್ತರಗಳ ಜೀವಂತ ನಿದರ್ಶನವಾಗಿದ್ದರು. ಈ ವಿಷಯವು ಎಚ್.ಎನ್. ಅವರಿಗೂ ತಿಳಿದಿತ್ತು. ಆದ್ದರಿಂದಲೇ, ಅವರು ಬೆಂಗಳೂರಿನ ಸಾಫ್ಟ್‌ವೇರ್ ವಾಸ್ತವಗಳ ಸಂಗಡ ಬದುಕುತ್ತಲೇ ಹೊಸೂರು, ಗೌರಿಬಿದನೂರುಗಳಲ್ಲಿ ತಮ್ಮ ಕನಸಿನ ಸಸಿಗಳನ್ನು ನೆಡುತ್ತಿದ್ದರು. ಇಂದಿರಾ ಗಾಂಧಿ ಮತ್ತು ದೇವರಾಜ ಅರಸು ಅವರು ರಾಜಕೀಯ ಅನಿವಾರ್ಯತೆಯಿಂದಲೇ ಕೈಗೊಂಡಿರ ಬಹುದಾದ ಕಾರ್ಯಕ್ರಮಗಳ ದೂರಗಾಮೀ ಪರಿಣಾಮಗಳನ್ನು ಅವರು ಸರಿಯಾಗಿ ಗ್ರಹಿಸಿದ್ದರು.



ವಿಜ್ಞಾನವನ್ನು ಅದರ ಸ್ಥೂಲಾರ್ಥದಲ್ಲಿ ಗ್ರಹಿಸಿದ, ಸಮರ್ಥಿಸಿದ ಎಚ್.ಎನ್. ಅವರಿಗೆ ಅದೇ ಜ್ಞಾನವು ರೂಪಿಸಿದ ಕುರುಡೋಣಿಗಳ ಪರಿಚಯ ಅಷ್ಟಾಗಿ ಇರಲಿಲ್ಲ. ಅದೇ ರೀತಿಯಲ್ಲಿ ವೈಜ್ಞಾನಿಕ ಮನೋಧರ್ಮವು ಇಪ್ಪತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಎದುರಿಸಿದ ಬೇರೆ ಬಗೆಯ ಕ್ರೈಸಿಸ್‌ಗಳನ್ನು ಅವರು ಗಂಭೀರವಾಗಿ ಪರಿಗಣಿಸಲಿಲ್ಲ. ಉದಾರವಾದೀ ಮಾನವತಾವಾದವು ಯಾವುದೇ ಸಮಸ್ಯೆಯನ್ನು ದಿಟವಾಗಿ ಪರಿಹರಿಸಲಾರದೆಂದು ಅವರಿಗೆ ತಿಳಿದಿದ್ದರೂ ಅದನ್ನು ಗಟ್ಟಿಯಾಗಿ ಹೇಳಲಿಲ್ಲ. ಕೊನೆಗೂ ಪಾಶ್ಚಾತ್ಯರಿಂದ ಪ್ರಣೀತವಾದ ಜ್ಞಾನ-ತಂತ್ರಜ್ಞಾನಗಳು ಆರ್ಥಿಕತೆ-ರಾಜಕೀಯಗಳ ಸಂಗಡವೇ ಒದಗಿ ಬರುವ ಪ್ಯಾಕೇಜ್ ಆಗಿರುತ್ತದೆ. ಇಂಥ ಸನ್ನಿವೇಶದಲ್ಲಿ ಖಾದಿಯು ಸರಳ ಉಡುಪಾಗಿ ಉಳಿಯದೆ ಸಂಕೇತವಾಗುತ್ತದೆ. ಆ ಸಂಕೇತಕ್ಕೂ ನೆಹರೂ ಕನಸಿದ ಆಧುನಿಕ ಭಾರತಕ್ಕೂ ಗಾವುದ ದೂರ. ಅಷ್ಟೇ ಅಲ್ಲ, ಅದು ಹೊಂದಾಣಿಕೆಯ ಸಂಕೇತವೇ ವಿನಾ ಬದಲಾವಣೆಯ ಸಂಕೇತವಲ್ಲ. ಸಹಜವಾಗಿಯೇ ಎಚ್.ಎನ್. ಅವರು ಪ್ರತಿಪಾದಿಸಿದ ವೈಜ್ಞಾನಿಕ ಮನೋಧರ್ಮ ಮತ್ತು ಗಾಂಧೀವಾದಗಳ ನಡುವೆ ಅಂತಹ ಪರಸ್ಪರ ಪೂರಕತೆ ಇರಲಿಲ್ಲ. ಆದರೆ ಜ್ಞಾನ ತಂತ್ರಜ್ಞಾನಗಳನ್ನು ಸಂಪೂರ್ಣವಾಗಿ ತಿರಸ್ಕರಿಸಿ ಹಿಂದೆ ಸರಿಯಬಯಸುವ 'ದೇಶೀ ಆಶಾಚಿಂತನ'ಕ್ಕೆ ಅವರು ಮರುಳಾಗಿರಲಿಲ್ಲ. ಆ ನೆಲೆಯಲ್ಲಿ ಅವರಿಗೆ ಅಪರಿವರ್ತನೀಯ ವಾಸ್ತವದ ಅರಿವಿತ್ತು.

ಇದೆಲ್ಲವೂ ಎಚ್.ಎನ್. ಅವರ ಮೇಲಿದ್ದ ಒತ್ತಡಗಳು ಮತ್ತು ಅವರು ಪಡೆದಿದ್ದ ಪೂರ್ವಸಿದ್ಧತೆಗಳ ಮಾತಾಯಿತು. ಆದರೆ, ಈ ಮನುಷ್ಯ ಅವೆಲ್ಲವನ್ನೂ ಮೀರಿನಿಂತು ಅರ್ಥಪೂರ್ಣವಾಗಿ ಬದುಕಿದ ಬಗೆ ಅನ್ಯಾದೃಶವಾದುದು. ಮೊದಲನೆಯದಾಗಿ ಅವರು ಅದಮ್ಯ ಆಶಾವಾದಿ. ತಮ್ಮ ಅಂತರಂಗವನ್ನು ತುಂಬಿಕೊಂಡಿದ್ದ ವಿಷಾದವು ಅವರಲ್ಲಿ ಎಂದೆಂದಿಗೂ ಸಿನಿಕತೆಯನ್ನು ಬೆಳೆಸಲಿಲ್ಲ. ಹೊಸ ಕಿವಿಗಳಲ್ಲಿ ತಮ್ಮ ವಿಚಾರಗಳನ್ನು ತುಂಬುವುದರಲ್ಲಿ ಅವರು ನಂಬಿಕೆಯನ್ನು ಕಳೆದುಕೊಳ್ಳಲಿಲ್ಲ. ಒಬ್ಬ ಮನುಷ್ಯನು ಹೇಳುವ ಮಾತುಗಳಿಗಿಂತ ಪ್ರಬಲವಾಗಿ, ಅವನು ಬದುಕುವ ರೀತಿಯೇ ಪ್ರಭಾವ ಬೀರುತ್ತದೆ. ಅವರು ಸಂಸ್ಥೆಗಳೆಂಬ ಕಾಡುಗಳನ್ನು ಕಟ್ಟುವ ಕೆಲಸದಲ್ಲಿ ನಿರತರಾದಾಗಲೂ ವ್ಯಕ್ತಿಗಳೆಂಬ ಮರಗಳ ಆರೈಕೆಯನ್ನು ಮರೆಯಲಿಲ್ಲ. ಮನುಷ್ಯಸಂಬಂಧಗಳನ್ನು ಪೋಷಿಸುವ ಕೆಲಸದಲ್ಲಿ ಆಲಸಿಯಾಗಲಿಲ್ಲ. ಅವರು ಬೆಳೆಸಿದ ಗಿಡಗಳು ಬರಡಾದರೂ ಮುಳ್ಳಾದರೂ ಹೊಸ ಸಸಿಗಳ ಬಗ್ಗೆ ಉದಾಸರಾಗಲಿಲ್ಲ. ಅವರು ತಮ್ಮ ಪಡಿಯಚ್ಚುಗಳನ್ನು ನಿರ್ಮಿಸುವುದರಲ್ಲಿ ಆಸಕ್ತರಾಗಿರಲಿಲ್ಲ. ಬದಲಾಗಿ ಪ್ರತಿಯೊಬ್ಬರೂ ತಮ್ಮ ತಮ್ಮ ಕ್ಷೇತ್ರಗಳಲ್ಲಿ ಪ್ರಾಮಾಣಿಕವಾಗಿ ಮಾಡುವ ಸಾಧನೆಯನ್ನು ಗುರುತಿಸುವ ಘನತೆ ಅವರಲ್ಲಿ ಇತ್ತು.

ಎಚ್.ಎನ್. ಅವರ ಸಾಧನೆಯನ್ನು ಅವರ ಬದುಕಿನ ಕೊನೆಯ ಕಾಲು ಶತಮಾನದ ಹಿನ್ನೆಲೆಯಲ್ಲಿ ನೋಡುವುದು ಸರಿಯಲ್ಲ. ಏಕೆಂದರೆ ಅರವತ್ತರ ನಂತರದ ಆ ಕಾಲವು ಅವರ ಹಿನ್ನಡೆತದ ಅವಧಿ. ಅದು ಅವರ ಪ್ರಸಿದ್ಧಿಯ ಏರುಗಾಲ, ಆದರೆ ಕ್ರಿಯಾಶೀಲತೆಯ ಇಳಿಗಾಲ. ಏಕೆಂದರೆ, ಆ ಕಾಲದಲ್ಲಿ ಅವರು ನೀತಿ ನಿರೂಪಣೆಯ ನಂತರ, ಇಂಪ್ಲಿಮೆಂಟೇಶನ್‌ಗಾಗಿ ಅನ್ಯ ಸಹೋದ್ಯೋಗಿಗಳ ಕೈಕಾಯುವುದು ಅನಿವಾರ್ಯವಾಯಿತು. ಅವರ ವ್ಯಕ್ತಿತ್ವಕ್ಕೆ ಸಹಜವಾದುದು ಅನ್ಯರಿಗೆ ಕಷ್ಟಸಾಧ್ಯವೂ ಆಗಿರಲಿಲ್ಲ. ತುರ್ತುಪರಿಸ್ಥಿತಿಯ ನಂತರದ, ಸಂಪೂರ್ಣವಾಗಿ ಬದಲಾದ ವಾತಾವರಣದಲ್ಲಿ ಅವರ ಆಯ್ಕೆಗಳಿಗೂ ಅವರ ಸಂಗಡಿಗರಾದ ಕ್ರಿಯಾಶೀಲರ ಆಯ್ಕೆಗಳಿಗೂ ಸಾಕಷ್ಟು ಅಂತರವಿತ್ತು.

ಅದಕ್ಕೆ ಬದಲಾಗಿ, ೧೯೬೫ರಿಂದ ೧೯೭೫ರವರೆಗಿನ ಅವಧಿಯಲ್ಲಿ, ಅವರ ಜೀವನದ ಕರ್ಮನಿರತ ಉತ್ಕರ್ಷದ ಕ್ಷಣಗಳನ್ನು ನೋಡಬಹುದು. ಆಗ ಅವರಿಗೆ ತಾವು ನಡೆಸುತ್ತಿದ್ದ ಸಂಸ್ಥೆಗಳಲ್ಲಿ ಸಂಪೂರ್ಣ ಸ್ವಾತಂತ್ರ್ಯವಿತ್ತು. ಬೆಂಗಳೂರು ವಿಶ್ವವಿದ್ಯಾಲಯವೂ ಈ ಮಾತಿಗೆ ಅಪವಾದವಾಗಿರಲಿಲ್ಲ. ಶಿಕ್ಷಣಸಂಸ್ಥೆಗಳು ಪ್ರತಿಭೆಗಳ ವಿಕಾಸದ ಗರಡಿಮನೆಯಾಗುವಂತೆಯೇ ಸಾಮಾಜಿಕ ಎಚ್ಚರದ ಪ್ರೇರಕಶಕ್ತಿಯೂ ಆಗಬೇಕೆಂಬ ಅವರ ಅಪೇಕ್ಷೆಯು ಆ ಅವಧಿಯಲ್ಲಿ ನಿಜವಾಯಿತು. ಸೇವಾಸಂಘ, ಆರೋಗ್ಯ-ನೀತಿ ಶಿಕ್ಷಣ, ಸಮಗಿಂತ ದುರದೃಷ್ಟಶಾಲಿಗಳನ್ನು ಭೇಟಿಯಾಗುವ ಅವಕಾಶ, ಮೇಲ್ವಿಚಾರಕರಿಲ್ಲದ ಪರೀಕ್ಷೆಗಳು, ನಾಟಕಸ್ಪರ್ಧೆ ಮುಂತಾದ ಹತ್ತು ಹಲವು ಚಟುವಟಿಕೆಗಳು ಪುಸ್ತಕವಿದ್ಯೆಯ ಸೀಮಿತಗಳನ್ನು ಮೀರುವ ಹಂಬಲವನ್ನು ಅನೇಕರಲ್ಲಿ ಬೆಳೆಸಿದವು. ಸಾವಿರಾರು ವಿದ್ಯಾರ್ಥಿಗಳ ವ್ಯಕ್ತಿತ್ವ ರೂಪಣದಲ್ಲಿ, ಎಚ್.ಎನ್. ಅವರ ಅನುಕರಣೆಯಲ್ಲದಿದ್ದರೂ ಪ್ರೇರಣೆಯ ಅಂಶವಂತೂ ಇದ್ದೇ ಇತ್ತು. ಇಷ್ಟೇ ಮುಖ್ಯವಾಗಿ, ಅವರ ವ್ಯಕ್ತಿತ್ವವು ಈ ಅವಧಿಯ ಕೊನೆ ಹಂತದಲ್ಲಿ ಅನೇಕ ಹೊರ ಚಾಚುಗಳನ್ನು ಪಡೆದುಕೊಂಡಿತು. ಅವರು ಬೆಂಗಳೂರು ವಿಶ್ವವಿದ್ಯಾಲಯದ ಉಪಕುಲಪತಿಗಳಾದಾಗ ಜನರು, ತೆಂಡೂಲ್ಕರ್ ಅವರ ಇನ್ನಿಂಗ್ಸ್ ಅನ್ನು ಎದುರುನೋಡುವ ಅಭಿಮಾನಿಗಳಂತೆ ಉತ್ಸುಕರಾಗಿದ್ದರು. ಅದಕ್ಕೆ ಸರಿಯಾಗಿ, ಎಚ್.ಎನ್. ನ್ಯೂಸ್‌ವರ್ದಿ ಎನ್ನಬಹುದಾದ ಅನೇಕ ಕ್ರಮಗಳನ್ನು ಕೈಗೊಂಡರು. ವೈಚಾರಿಕತೆ, ಮೂಢನಂಬಿಕೆ, ಸಾಯಿಬಾಬಾ, ಶಿವಬಾಲಯೋಗಿ ಮುಂತಾದ, ಸಾಮಾನ್ಯವಾಗಿ ನಾನ್-ಅಕಡೆಮಿಕ್ ಎಂದು ಪರಿಗಣಿಸಲಾಗುವ ಚಟುವಟಿಕೆಗಳು ಹೊಸ ಅಲೆಯ ಸೃಷ್ಟಿಗೆ ಕಾರಣವಾದವು. ಅವರು ಕಟ್ಟಿದ್ದು ಕಟ್ಟಡಗಳನ್ನು ಮಾತ್ರವಲ್ಲ, ಕ್ರಿಯಾಕೇಂದ್ರಗಳನ್ನು ಕೂಡ. ಆ ಅವಧಿಯಲ್ಲಿ ಕನ್ನಡ ಅಧ್ಯಯನ ಕೇಂದ್ರವು ಮಾಡಿಕೊಂಡ ಶಕ್ತಿಸಂಚಯನ ಮತ್ತು ಶಕ್ತಿತರಣವು ಇಂದಿಗೂ ಕರ್ನಾಟಕದಲ್ಲಿ ಮನೆಮಾತಾಗಿದೆ. ಈ ಸಾಧನೆಗೆ ಡಾ|| ಜಿ.ಎಸ್.ಎಸ್. ಮತ್ತು ಡಾ|| ಎಚ್.ಎನ್. ಇಬ್ಬರೂ ಕಾರಣರು. ಇಂಥ ಸಾಧನೆಯು ಕೇವಲ ಇಚ್ಛಾಶಕ್ತಿಯಿಂದ ಬರುವುದಿಲ್ಲ. ಸಂಘಟನೆಯೆನ್ನುವುದನ್ನು ಒಂದು ಕಲೆಯ ಮಟ್ಟಕ್ಕೆ ಏರಿಸುವ ಕೆಲಸದಲ್ಲಿ ಅವರು ಯಶಸ್ವಿಯಾದರು. ಅದಕ್ಕೆ ಬೇಕಾದ ಹತಾರಗಳು ಅವರ ಬಳಿ ಆಗಲೇ ಇದ್ದವು. ಅಂತೆಯೇ ಗುಡ್‌ವಿಲ್ ಕೂಡ. ಇಷ್ಟಾಗಿಯೂ ಆದರ್ಶವಾದಕ್ಕೂ ಸಂದರ್ಭವಾದೀ ರಾಜಕೀಯಕ್ಕೂ ನಡೆದ ಸಂಘರ್ಷದಲ್ಲಿ ಎರಡನೆಯದರದೇ ಮೇಲುಗೈ ಆಯಿತು. ಅವರ ಪುನರಾಗಮನದ ವೇಳೆಗೆ ಅವರು ಕಟ್ಟಿದ ಸಂಸ್ಥೆಗಳೂ ಅವರಿಗೆ ಹಿತವೆನಿಸದ ಆಯಾಮಗಳನ್ನು ಪಡೆದುಕೊಂಡಿದ್ದವು. ಆ ಸಮುದಾಯಕ್ಕೆ ಸಕ್ಸೆಸ್ ಎನ್ನುವ ಸನ್ನಿ ಬಡಿದಿತ್ತು. ಅಲ್ಲಿಯೂ ಸಲ್ಲದ ಇಲ್ಲಿಯೂ ಸಲ್ಲದ ಈ ಸ್ಥಿತಿಯು ಕೊಟ್ಟ ಶಾಕ್‌ನಿಂದ ಹೇಗೋ ಚೇತರಿಸಿಕೊಂಡು ನಗುನಗುತ್ತಲೇ, ಆಗೀಗ ಅಸಹಾಯಕರಾಗಿ ಸಿಡುಕುತ್ತಲೇ, ಕಾಲು ಶತಮಾನವನ್ನು ಕಳೆದಿದ್ದು ಅವರ ಜೀವನದ ಕೊನೆಯ ಪವಾಡವೆಂದೇ ಹೇಳಬೇಕು.

ಇಂಥ ಈ ಎಚ್.ಎನ್., ನನಗೆ ಅನ್ನ, ಅಕ್ಷರ ಮತ್ತು ಆದರ್ಶಗಳನ್ನು ಕೊಟ್ಟವರು. ಕೊನೆಯವರೆಗೂ ನನ್ನನ್ನು ತುಂಬು ಪ್ರೀತಿಯಿಂದ ನಡೆಸಿಕೊಂಡರು. ಪುತ್ರಸಮ ವಾತ್ಸಲ್ಯವನ್ನು ತೋರಿಸಿದವರು. ನಾನು ಮೂರು ವರ್ಷ ಧರಿಸಿದ ಖಾದಿವಸ್ತ್ರಗಳನ್ನು ತ್ಯಜಿಸಿದೆನೆನ್ನುವುದು ಅವರಿಗೆ ಬೇಸರ ತರಲಿಲ್ಲ. ಅವರ ನಿಕಟವರ್ತಿಯಾಗಲಿಲ್ಲವೆನ್ನುವುದೂ ಅಷ್ಟೆ. ಅದಕ್ಕಿಂತ ಹೆಚ್ಚಿನದೇನನ್ನೋ ಅವರಿಂದ ನಾನು ಪಡೆದಿದ್ದೇನೆ. ಅದನ್ನು ತುಂಬಾ ಜತನವಾಗಿ ಕಾಪಾಡಿಕೊಂಡು ಬಂದಿದ್ದೇನೆ. ಇಂಥ ಸತ್ಯಗಳನ್ನು ಗ್ರಹಿಸುವ ಸಾಮರ್ಥ್ಯವೇ ಅವರನ್ನು ಬಹಳ ದೊಡ್ಡವರನ್ನಾಗಿ ಮಾಡಿತ್ತು.

ಅಂತಿಮವಾಗಿ ನರ್ಸಿಂಗ್‌ಹೋಂಗೆ ಸೇರುವುದಕ್ಕೆ ಮೂರು ದಿನಗಳು ಮುಂಚೆ, ಅವರು ನಮ್ಮ ಕಾಲೇಜಿಗೆ ಬಂದಿದ್ದರು. ಎಲ್ಲೋ ಇದ್ದ ನನ್ನನ್ನು ಬಳಿಗೆ ಕರೆಸಿದರು. ನನ್ನ ಮತ್ತು ಗೆಳೆಯರಾದ ಶ್ರೀ ನಗರಗೆರೆ ರಮೇಶ್ ಅವರ ಹೆಗಲುಗಳ ಮೇಲೆ ಕೈಹಾಕಿಕೊಂಡು, ಆಟದ ಮೈದಾನದಿಂದ ಕಾಲೇಜಿನ ಗೇಟಿನವರೆಗೆ ನಿಧಾನಗತಿಯಲ್ಲಿ ನಡೆದುಬಂದರು. ಅವರ ತೋಳು, ಮೂಳೆ-ಚರ್ಮಗಳ ಚೀಲವೆನಿಸಿತು. ಅಲ್ಲಿ ಚಿಮ್ಮುತ್ತಿದ್ದ ರಕ್ತ ಮತ್ತು ಮಾಂಸಖಂಡಗಳು ಎಲ್ಲಿ ಮಾಯವಾದವು? ಅವು ನಮ್ಮಂತಹ ಸಾವಿರಾರು ವಿದ್ಯಾರ್ಥಿಗಳ ಮೈಮನಗಳಲ್ಲಿ ಹಂಚಿಹೋಗಿದ್ದವು. ಗುರುತು ಸಿಗದಹಾಗೆ, ಎಷ್ಟೋ ಸಲ ನೆನಪೂ ಉಳಿಯದ ಹಾಗೆ. ಮೇಷ್ಟ್ರುಗಳ ಬದುಕಿಗೆ ಸಾರ್ಥಕತೆ ಬರುವುದು ಹೀಗೆಯೆ ತಾನೇ. ಬಸವಣ್ಣನವರ ಮಾತು ನಿಜ. ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ. ಈ ಮಹಾಜಂಗಮನಿಗೆ ನನ್ನ ನಮಸ್ಕಾರ.

**ಡಾ|| ಎಚ್.ಎಸ್. ರಾಘವೇಂದ್ರ ರಾವ್**, ನಂ. ೭, 'ಶ್ರೀಮಾತಾ' ೧೫ನೇ ಅಡ್ಡರಸ್ತೆ, ೫ನೇ ಹಂತ, ಜೆ.ಪಿ.ನಗರ, ಬೆಂಗಳೂರು-೭೮

## ಯೋಚನೆ ಮಾಡಬೇಡಿ, ಮೇಷ್ಟ್ರೇ...

ಸುಮಾರು ಐವತ್ತು ವರ್ಷಗಳಿಗೂ ಹಿಂದಿನ ಮಾತು. ಆಗ ನಾನು ನ್ಯಾಷನಲ್

ಮಿಡಲ್ ಸ್ಕೂಲು-ಹೈಸ್ಕೂಲುಗಳಲ್ಲಿ ವಿದ್ಯಾರ್ಥಿಯಾಗಿದ್ದೆ. ಈಗ ಎಚ್.ಎನ್ ಹಾಲ್ ಇರುವ ಬಳಿ ಕೆಲವು ಹಾಸ್ಟಲ್ ಕೊಠಡಿಗಳಿದ್ದವು. ಆ ಕೊಠಡಿಗಳೊಂದರಲ್ಲಿ ಅಸಾಧಾರಣವಾದ ಆಗಂತುಕರೊಬ್ಬರು ಬಂದು ಸೇರಿದರು. ನಮಗೆಲ್ಲ ಇವರ ವಿಷಯದಲ್ಲಿ ಅತ್ಯಂತ ಕುತೂಹಲ. ಯಾವಾಗಲೂ ಖಾದಿ ಉಡುಪು, ಖಾದಿ ಟೋಪಿ ಧರಿಸಿ, ಎಲ್ಲರೊಡನೆ ನಗುನಗುತ್ತ ಮಾತಾಡಿಕೊಂಡು, ಚಟುವಟಿಕೆಯಿಂದ ಓಡಾಡಿಕೊಂಡಿರುವ ಇವರು ಯಾರಿರಬಹುದು ? ನಮ್ಮಲ್ಲಿ ಒಬ್ಬ ಹುಡುಗ ಕಂಡುಹಿಡಿದುಕೊಂಡು ಬಂದು ಹೇಳಿದ, ''ಅವರ ಹೆಸರು ಎಚ್. ನರಸಿಂಹಯ್ಯ ಅಂತೆ ಕಣ್ರೊ. ಎಲ್ಲರೂ ಎಚ್.ಎನ್ ಅಂತ ಕರೀತಾರೆ. ಈಗ ತಾನೇ ಪ್ರಾರಂಭವಾಗಿದೆಯಲ್ಲ ನ್ಯಾಷನಲ್ ಕಾಲೇಜು, ಅದರಲ್ಲಿ ಮೇಷ್ಟ್ರಂತೆ, ಗಾಂಧಿ ಭಕ್ತರಂತೆ. ಸ್ವಾತಂತ್ರ್ಯದ ಹೋರಾಟದಲ್ಲಿ ಜೈಲಿಗೆ ಬೇರೆ ಹೋಗಿ ಬಂದಿದ್ದಾರಂತೆ !'' ಈ ಕಡೆಯ ವಿಷಯ ಕೇಳಿದಾಗಲಂತು ನಮಗೆ ಅಪಾರ ಆಶ್ಚರ್ಯ, ಗೌರವ ಉಂಟಾದವು. ಆಗಾಗ ಕೊಠಡಿಯ ಆಚೆ ಕಟ್ಟೆಯ ಮೇಲೆ ಕುಳಿತು, ತೊಡೆಯ ಮೇಲೆ ತಟ್ಟೆ ಇಟ್ಟುಕೊಂಡು ತಿಂಡಿ ತಿನ್ನುತ್ತಿದ್ದರು ಎಚ್.ಎನ್. ಸಾಯಂಕಾಲ ಕಾಲೇಜು ಮುಗಿಸಿಕೊಂಡು, ವಿದ್ಯಾರ್ಥಿಗಳು ಅವರ ಕೊಠಡಿಯ ಹೊರಗೆ ಸೇರಿ ಅವರೊಡನೆ ಹರಟೆ ಹೊಡೆಯುತ್ತಿದ್ದರು, ಹಾಡು ಹೇಳುತ್ತಿದ್ದರು, ನಾಟಕಾಭ್ಯಾಸ ಮಾಡುತ್ತಿದ್ದರು. ಒಂದು ಸಲ ಅವರು ಸ್ನಾನ ಮಾಡುತ್ತಿದ್ದಾಗ, ಸ್ನೇಹಿತರೊಬ್ಬರು ಸುಮ್ಮನೆ ಕಾಯದೆ ಬಾಗಿಲ ಮೇಲಿನ ಜಾಲರಿಯ ಮೂಲಕ ಸಣ್ಣ ಕಲ್ಲುಗಳನ್ನು ಬೀರತೊಡಗಿದರು. ಇದಕ್ಕೆ ಪ್ರತಿಕ್ರಿಯೆಯಾಗಿ ಒಳಗಿನಿಂದ ಜಾಲರಿಯ ಮೂಲಕ ಎಚ್.ಎನ್. ನೀರನ್ನು ಎರಚಿದರು. ಇದನ್ನೆಲ್ಲ ನೋಡಿ ನಮಗೆ ಖುಷಿಯೋ ಖುಷಿ. ನಮ್ಮನ್ನು ನೋಡಿದಾಗಲೆಲ್ಲ ಎಚ್.ಎನ್. ನಮ್ಮ ಕಡೆ ಕೈಬೀಸಿ ನಸುನಗೆ ನಗುತ್ತಿದ್ದರು. ಆಗ ನಮಗೆ ಆಗುತ್ತಿದ್ದ ಸಂತೋಷ ಅಷ್ಟಿಷ್ಟಲ್ಲ.

* * *

ನಾನು ಹೈಸ್ಕೂಲು ಮುಗಿಸಿ ನ್ಯಾಷನಲ್ ಕಾಲೇಜು ಸೇರಿದೆ. ಕನ್ನಡವನ್ನು ಎರಡನೆಯ ಭಾಷೆಯಾಗಿ ಆಯ್ದುಕೊಂಡ ನಾವೆಲ್ಲ 'ಸಿ' ಸೆಕ್ಷನ್. ಎಚ್.ಎನ್. ಸಂಸ್ಕೃತ ತೆಗೆದುಕೊಂಡಿದ್ದ 'ಬಿ' ಸೆಕ್ಷನ್ ಹುಡುಗರಿಗೆ ಮಾತ್ರ ಪಾಠ ಹೇಳಿಕೊಡುತ್ತಾರೆ ಎನ್ನುವ ಮಾತು ಎಲ್ಲರೂ ಹೇಳುತ್ತಿದ್ದರು. ಆದಾಗೆಲ್ಲ ಈ ವಿಷಯವಾಗಿ ನಾವೆಲ್ಲ ಅವರ ಹತ್ತಿರ ಜಗಳಕ್ಕೆ ನಿಲ್ಲುತ್ತಿದ್ದೆವು.

''ಮೇಷ್ಟ್ರೆ, ಇದು ತುಂಬ ಅನ್ಯಾಯ. ನಮಗೆ ಯಾಕೆ ನೀವು ಪಾಠ ಹೇಳಿಕೊಡಬಾರದು ಸಾರ್ ? ನಿಮಗೆ ಆ 'ಬಿ' ಸೆಕ್ಷನ್ ಕುಡುಮಿಗಳನ್ನ ಕಂಡರೆ ಯಾಕೆ ಈ ವ್ಯಾಮೋಹ ?''

''ಹಾಗೇನೂ ಇಲ್ಲಪ್ಪ ಆದರೆ...''

''ಗೊತ್ತಾಯ್ತು ಬಿಡಿ, ಮೇಷ್ಟ್ರೆ. ನೀವು ಪಾಠ ಹೇಳಿಕೊಡದಿದ್ದರೆ ಆ ಕುಂಠರು ಪಾಸಾಗಬೇಕಲ್ಲ. ನಿಮ್ಮ ಪಾಠ ನಮಗೇನು ಬೇಡ. ನಮ್ಮ ಬುದ್ಧಿವಂತಿಕೆಯಿಂದ ನಮ್ಮ ಪಾಡು ನಾವು ನೋಡಿಕೊಳ್ಳುತ್ತೇವೆ.''

''ಅಬ್ಬಾ, ಅಸಾಧ್ಯ ಪ್ರಚಂಡರು ಕಣಪ್ಪ ನೀವು.''

ಕಾಲೇಜಿನ ಸಮಾರಂಭಗಳಲ್ಲೆಲ್ಲಾ ನಾವು 'ಸಿ' ಸೆಕ್ಷನ್ ಹುಡುಗರೇ ಮುಂದಾಳುಗಳು. ವಾಲಂಟೀರುಗಳಾಗಿ ಎಲ್ಲ ಏರ್ಪಾಟುಗಳನ್ನು ನೋಡಿಕೊಳ್ಳುತ್ತಿದ್ದೆವು. ಎಚ್.ಎನ್.ಗೆ ಯಾವುದರಲ್ಲೂ ಏನೂ ಕುಂದಿಲ್ಲದೆ, ಸುಗಮವಾಗಿ ಆಗಬೇಕು ಅನ್ನುವ ಗೀಳು. ನಮಗೆಲ್ಲ ಹೇಳುತ್ತಿದ್ದರು, ''ಅಪ್ಪ, ಎಲ್ಲ ಸರಿಯಾಗಿ ನೋಡಿಕೊಳ್ಳೀಪ್ಪ. ಸ್ವಲ್ಪ ಹೆಚ್ಚು ಕಡಿಮೆಯಾದರೂ ಆಭಾಸವಾಗುತ್ತೆ.'' ನಾವು ಆಶ್ವಾಸನೆ ಕೊಡುತ್ತಿದ್ದೆವು, ''ಅಯ್ಯೋ ಬಿಡಿ, ಸಾರ್. ನಾವೆಲ್ಲ ಇರೋದು ಯಾಕೆ ? ಯೋಚನೆ ಮಾಡಬೇಡಿ, ಮೇಷ್ಟ್ರೆ.''

ಎಚ್.ಎನ್. ಕಾಲೇಜಿನಲ್ಲಿ ಅನೇಕ ಕಾರ್ಯಕ್ರಮಗಳನ್ನು ಏರ್ಪಡಿಸುತ್ತಿದ್ದರು. ಆದರೆ ಅವರ ನೇತೃತ್ವದಲ್ಲಿ ನಡೆಯುತ್ತಿದ್ದ 'ಪೇಪರ್ ಛೇಸ್' ಮಾತ್ರ ಅಸಾಮಾನ್ಯ. ಒಂದು ಸಲ ನಾನೂ ಸಹ ಈ ಆಟಕ್ಕೆ ಸೇರಿದೆ. ರಾತ್ರಿಯೊ ರಾತ್ರಿ ಊರೆಲ್ಲ ಅಲೆದೆವು. ಅವಿತಿಟ್ಟು ಕೊಂಡಿರುವವರನ್ನು ಹುಡುಕುವ ಪ್ರಯತ್ನದಲ್ಲಿ, ಎಚ್.ಎನ್. ದಾರಿಯ ಪಕ್ಕದಲ್ಲಿ ಮಲಗಿರುವವರ ಮುಸುಕನ್ನು ಎಳೆದು, ಟಾರ್ಚ್ ಬೆಳಕನ್ನು ಅವರ ಮುಖಗಳ ಮೇಲೆ ಬೆಳಗಿಸಿ ಅವರೆಲ್ಲ ಗೊಣಗುವಂತೆ ಮಾಡುತ್ತಿದ್ದರು. ಎಚ್.ಎನ್. ತಮ್ಮ ಉತ್ಸಾಹದಲ್ಲಿ ಜೊತೆಯವರೊಡನೆ ಒಂದು ಫಾರ್ಮ್ ಹೌಸಿಗೆ ನುಗ್ಗಿದರು. ಗಲಾಟೆ ಕೇಳಿ, ಮಾಲೀಕರು ಒಂದು ಬಂದೂಕವನ್ನೆ ಹಿಡಿದು ಮನೆಯಿಂದ ಹೊರಬಂದರು. ಎಚ್.ಎನ್. ಮುಖವನ್ನು ಗುರುತಿಸಿ ಹೇಳಿದರು, ''ಓ, ನೀವೇ ! ಆಟ ಆಡುತ್ತಿದ್ದೀರಾ ? ಕಳ್ಳರು ನುಗ್ಗಿದ್ದಾರೆ ಅಂತ ಅಂದುಕೊಂಡುಬಿಟ್ಟೆ. ಬನ್ನಿ ಸಾರ್, ಒಂದು ಲೋಟ ಹಾಲು ಕುಡಿದುಕೊಂಡು ಹೋಗೋರಂತೆ.'' ''ಇನ್ನೊಂದು ಸಲ, ಇನ್ನೊಂದು ಸಲ'' ಎನ್ನುತ್ತ ಮಾಲೀಕರು ಮನಸ್ಸು ಬದಲಾಯಿಸಿ ಮತ್ತೆ ಬಂದೂಕವನ್ನು ಎತ್ತಿಕೊಳ್ಳುವುದರೊಳಗೆ ಹಿಂಬಾಲಕರೊಡನೆ ಓಡಿದರು ಎಚ್.ಎನ್.

ಕಾಲೇಜಿನಲ್ಲಿ ನಡೆದ ವಿಷಯಗಳು ಅನೇಕವಿವೆ. ಬರೆಯುವುದಕ್ಕೆ ಇಲ್ಲಿ ಅವಕಾಶವಿಲ್ಲ. ಎಚ್.ಎನ್. ಹೇಳಿದ ಹಾಗೆಯೇ ನಾನೂ ಸಹ ಹೇಳಬೇಕಾಗಿದೆ, ''ಇನ್ನೊಂದು ಸಲ, ಇನ್ನೊಂದು ಸಲ.''

* * *

ನ್ಯಾಷನಲ್ ಕಾಲೇಜು ಬಿಟ್ಟು, ಸೆಂಟ್ರಲ್ ಕಾಲೇಜಿಗೆ ಸೇರಿದರೂ ಎಚ್.ಎನ್. ಸಂಪರ್ಕ ಬಿಟ್ಟುಹೋಗಲಿಲ್ಲ. ಭೌತಶಾಸ್ತ್ರದ ಬಗೆಗೆ, ನನ್ನ ಚಟುವಟಿಕೆಗಳ ಬಗೆಗೆ ಅವರ ಜೊತೆ ಮಾತಾಡುತ್ತಿದ್ದೆ. ಈ ಸಮಯದಲ್ಲಿ ಎಚ್.ಎನ್. ಅಮೆರಿಕಾಗೆ ಹೋಗುತ್ತಾರೆ ಎನ್ನುವುದು ತಿಳಿದು ನಮಗೆಲ್ಲ ಸಡಗರ. ಆದರ ನಾನು ಕೇಳಿದೆ, ''ಅಲ್ಲ ಮೇಷ್ಟ್ರೆ, ಕಲಿಯೋದೆಲ್ಲ ಕಲಿತಾಗಿದೆ. ಕಲಿಸೋದೆಲ್ಲ ಕಲಿಸ್ತಿದ್ದೀರಿ. ನೀವು ಯಾಕೆ ಅಮೆರಿಕಾಗೆ ಹೋಗಬೇಕು ?''

''ಅಲ್ಲಪ್ಪ, ಕಲಿಯೋದಕ್ಕೆ ಮಿತಿಯಿದೆಯೆ ? ಅಲ್ಲದೆ ನೋಡು, ಇವನಿಗೆ Ph.D. ಇಲ್ಲ ಅಂತ ಹೇಳಿ ಜನ ನನ್ನ ಮಾತು ಕೇಳದೆ, ಇರಬಾರದು, ಹೌದೋ ಅಲ್ಲವೊ ? ಸುಮ್ಮನೆ ತಮಾಷಿಗೆ ಹೇಳಿದೆ.''

''ಹೋಗಿ ಬನ್ನಿ, ಮೇಷ್ಟ್ರೆ, ಹೋಗಿ ಬನ್ನಿ. ನೀವು ಬರಿ Ph.D. ಮಾಡುತ್ತೀರಾ, ಕೆಲವರು LLD ತೆಗೆದುಕೊಂಡು ಬರುತ್ತಾರೆ.''

''LLD ? ಅದು Doctor of Law and Literature ಡಿಗ್ರಿ ಅಲ್ಲವೆ ? ಭಾರಿ ಡಿಗ್ರಿ ಅದು.''

''ಇಲ್ಲ, ಸಾರ್, LLD ಎಂದರೆ Land Lady's Daughter ಅಂತ.''

''ಛೆ, ಛೆ, ಹುಚ್ಚು, ಹುಚ್ಚಾಗಿ ಮಾತಾಡಬೇಡಪ್ಪ'' ಜೋರಾಗಿ ನಕ್ಕರು ಎಚ್.ಎನ್.

ಎಚ್.ಎನ್. ಬೊಂಬಾಯಿ ಮಾರ್ಗವಾಗಿ ಅಮೆರಿಕಾಗೆ ಹೋಗುವ ದಿನ ಬಂತು. ಅವರನ್ನು ಬೀಳ್ಕೊಡುವುದಕ್ಕೆ ರೈಲ್ವೆ ಸ್ಟೇಷನ್ನಿಗೆ ಹೋದೆ. ಅಲ್ಲಿ ಕಂಡ ದೃಶ್ಯ ನಂಬುವುದಕ್ಕಾಗಲಿಲ್ಲ. ಎಲ್ಲೆಲ್ಲೂ ಜನ, ನೂರಾರು ಮಂದಿ ವಿದ್ಯಾರ್ಥಿಗಳು, ಸ್ನೇಹಿತರು. ಎಲ್ಲಕ್ಕೂ ಆಶ್ಚರ್ಯದ ವಿಷಯವೆಂದರೆ ಆ ಜನಸಮೂಹದ ಮಧ್ಯೆ ಬಿಕ್ಕಿ, ಅಳುತ್ತ ನಿಂತಿದ್ದಾರೆ ಎಚ್.ಎನ್. ಅನೇಕರ ಕಣ್ಣುಗಳಲ್ಲೂ ನೀರು. ಇದೇನಾಯಿತು ಅಂತ ವಿಚಾರಿಸಿದೆ. ನನಗೆ ತಿಳಿದದ್ದು ಹೀಗೆ, ಹಿಂದಿನ ದಿನ ನ್ಯಾಷನಲ್ ಕಾಲೇಜಿನಲ್ಲಿ ಎಚ್.ಎನ್.ರ ಅಮೆರಿಕ ಯಾತ್ರೆಯ ಪ್ರಯುಕ್ತ ಒಂದು ಗೌರವ ಸಮಾರಂಭ ಇಟ್ಟು ಕೊಂಡಿದ್ದರು. ನನಗೆ ಹೋಗುವುದಕ್ಕೆ ಆಗಿರಲಿಲ್ಲ. ಆ ಸಂದರ್ಭದಲ್ಲಿ, ತಮ್ಮ ಆತ್ಮಕಥೆಯನ್ನು ಹೇಳುತ್ತ ಎಚ್.ಎನ್. ''ನಾನೊಬ್ಬ ಅನಾಥ'', ಎಂದರಂತೆ. ರೈಲ್ವೆ ಸ್ಟೇಷನ್ನಿನಲ್ಲಿ ಸೇರಿದ್ದ ಭಾರಿ ಜನಸಮುದಾಯವನ್ನು ತೋರಿಸಿ, ನಮಗೆ ಭೌತಶಾಸ್ತ್ರ ಹೇಳಿಕೊಡುತ್ತಿದ್ದ ಪ್ರೊಫೆಸರ್ ರಂಗೈಯಂಗಾರ್ ಎಚ್.ಎನ್. ಅವರನ್ನು ಕೇಳಿದರಂತೆ, ''ಈಗ ಹೇಳು ನರಸಿಂಹಯ್ಯ, ನೀನು ಅನಾಥನೆ ?'' ಆಗಲೇ ಭಾವೋದ್ವೇಗದಿಂದ ಕಷ್ಟಪಡುತ್ತಿದ್ದ ಎಚ್.ಎನ್. ತಡೆದುಕೊಳ್ಳಲಾರದೆ ಅಳುವುದಕ್ಕೆ ಪ್ರಾರಂಭಿಸಿದರಂತೆ. ಐದಾರು ಜನ ಹಿರಿಯ ವಿದ್ಯಾರ್ಥಿಗಳು ಎಚ್.ಎನ್. ಜೊತೆ ರೈಲು ಹತ್ತಿ, ಅವರಿಗೆ ಸಮಾಧಾನವಾಗುವ ತನಕ ಅವರ ಜೊತೆ ಪ್ರಯಾಣ ಮಾಡಿ ಹಿಂತಿರುಗಬೇಕಾಯಿತು.

* * *

ಎಚ್.ಎನ್. ಅಮೆರಿಕಾಗೆ ಹೋಗಿಬಂದರು. ನಾನು ಎಂ.ಎಸ್ಸಿ ಮುಗಿಸಿ ಅಮೆರಿಕಾಗೆ ಹೊರಟುನಿಂತೆ. ಇನ್ನೂ ಒಂದು ವರ್ಷ ಕಾಲಾವಕಾಶವಿದ್ದದ್ದರಿಂದ ಎಚ್.ಎನ್. ಹೇಳಿದರು, ''ಮನೇಲಿ ಸುಮ್ಮನೆ ಕೂತು ಏನ್ಮಾಡ್ತೀಯಪ್ಪ? ಕಾಲೇಜಿನಲ್ಲಿ ಬಂದು ಪಾಠ ಹೇಳಿಕೊಡು''. ಸರಿ, ಕಾಲೇಜಿನಲ್ಲಿ ಒಂದು ವರ್ಷ ಅಧ್ಯಾಪಕನಾಗಿ ಕೆಲಸ ಮಾಡಿದೆ. ಆಗ ಎಚ್.ಎನ್. ಕಾಲೇಜು ಪ್ರಿನ್ಸಿಪಾಲರಾಗಿದ್ದರು. ಆ ವರ್ಷ ನಡೆದ ಮಹತ್ತರದ ಘಟನೆ ಎಂದರೆ ಕಾಲೇಜಿಗೆ ಕೋ-ಎಜುಕೇಶನ್ ಪ್ರವೇಶ. ಈ ವಿಷಯವಾಗಿ ಕೆಲವೊಮ್ಮೆ ಚರ್ಚೆ ನಡೆಯುತ್ತಿತ್ತು, ತಾಪಮಾನ ಹೆಚ್ಚುತ್ತಿತ್ತು. ಕೆಲವರಿಗೆ ಈ ಪರಿಷ್ಕರಣೆ ಎಳ್ಳಷ್ಟೂ ಇಷ್ಟವಿರಲಿಲ್ಲ. ಎಚ್.ಎನ್.ಗೆ ಇದು ಆಗಲೇಬೇಕು ಎನ್ನುವ ಆಶಯ. ''ಕೋ-ಎಜುಕೇಷನ್ ಹೇಗಾದರೂ ತರಲೇಬೇಕಪ್ಪ, ಇದರಿಂದ ಕಾಲೇಜಿಗೆ ತುಂಬ ಒಳ್ಳೆಯ ದಾಗತ್ತೆ'', ಎಂದು ನಮ್ಮ ಹತ್ತಿರ ಹೇಳುತ್ತಲೇ ಇರುತ್ತಿದ್ದರು. ನಾವುಗಳು, ವಯಸ್ಸಿನಲ್ಲಿ ಕಿರಿಯರು, ಅವರಿಗೆ ಭರವಸೆ ಕೊಡುತ್ತಿದ್ದೆವು, ''ಆಗಿಯೇ ಆಗತ್ತೆ, ಸಾರ್. ನಿಮ್ಮ ಕಡೆ ನಾವೆಲ್ಲ ಯುವ ಅಧ್ಯಾಪಕರಿಲ್ಲವೆ ? ಯೋಚನೆ ಮಾಡಬೇಡಿ, ಮೇಷ್ಟ್ರೆ''. ಈ ವಿಷಯ ವಾಗಿ ಒಂದು ದೊಡ್ಡ ಚರ್ಚೆ ನಡೆಯಿತು. ಕೆಲವರು ಹಿರಿಯರು ಹೇಳಿದರು, "This is the beginning of the end. ಇದು ಕಾಲೇಜಿನ ಅಧೋಗತಿ.'' ನಾವು ಹೇಳಿದೆವು, "This is the end of the beginning. ಇನ್ನು ಮುಂದೆ ಕಾಲೇಜಿನ ಅಭಿವೃದ್ಧಿ.'' ಕೊನೆಗೂ ನಾವೇ ಗೆದ್ದೆವು. ಕೋ-ಎಜುಕೇಷನ್ ರೂಢಿಗೆ ಬಂತು.

* * *

ಹದಿನೈದು ವರ್ಷಗಳ ಕಾಲ ಅಮೆರಿಕಾದಲ್ಲಿದ್ದು ೧೯೭೩ರಲ್ಲಿ ಹಿಂತಿರುಗಿ ಬಂದೆ, ಬೆಂಗಳೂರಿನಲ್ಲೇ ಸಂಸಾರ ಸಮೇತನಾಗಿ ನೆಲೆಸಿದೆ. ''ವನವಾಸ, ಅಜ್ಞಾತವಾಸ ಎಲ್ಲ ಮುಗಿಸಿ ಬಂದೆಯಲ್ಲ, ತುಂಬ ಒಳ್ಳೆಯದಾಯಿತು'', ಎಂದರು ಎಚ್.ಎನ್. ಎಚ್.ಎನ್. ನೇತೃತ್ವ ದಲ್ಲಿ ನಡೆಯುತ್ತಿದ್ದ ಬೆಂಗಳೂರು ಸೈನ್ಸ್ ಫೋರಮ್ಮಿನ ಚಟುವಟಿಕೆಗಳಲ್ಲಿ ನಾನು ಸಹಭಾಗಿಯಾಗ ತೊಡಗಿದೆ. ಅಲ್ಲದೆ, ಜವಹರಲಾಲ್ ನೆಹ್ರು ತಾರಾಲಯ ಮತ್ತು ಬೆಂಗಳೂರು ಅಸೋಸಿಯೇಷನ್ ಫಾರ್ ಸೈನ್ಸ್ ಎಜುಕೇಷನ್ ಇವುಗಳ ಉದ್ಭವವಾಯಿತು. ಅದರ ಗೌರ್ನಿಂಗ್ ಕೌನ್ಸಿಲ್‌ನ ಸದಸ್ಯರಾದರು ಎಚ್.ಎನ್. ಹೀಗಾಗಿ ನಮ್ಮಿಬ್ಬರ ನಡುವಿನ ಬಾಂಧವ್ಯ



ಸಧೃಢವಾಗಿ ವೃದ್ಧಿಯಾಗುತ್ತ ಬಂತು. ತಿಂಗಳಲ್ಲಿ ಹಲವು ಸಲ ನಮ್ಮ ಟೆಲಿಫೋನ್ ಸಂವಾದ.

''ಗುಡ್ ಮಾರ್ನಿಂಗ್, ಗುಡ್ ಮಾರ್ನಿಂಗ್, ಯಂಗ್ ಸೈಂಟಿಸ್ಟ್!''

''ಓ, ಮೇಷ್ಟ್ರು! ಹೇಳಿ, ಮೇಷ್ಟ್ರೆ.''

''ಅಪ್ಪ, ವಿಶ್ವೇಶ್ವರ, ಮುಂದಿನ ತಿಂಗಳು ನಮ್ಮ ಫೋರಂನಲ್ಲಿ ಮಾತಾಡೋಕೆ ಇಬ್ಬರು ಫಿಸಿಸಿಸ್ಟ್, ಒಬ್ಬ ಬಯಾಲಜಿಸ್ಟ್ ಬೇಕಾಗಿದೆ. ಬೇಗ ಬೇಕು. ಜೊತೆಗೆ ಸ್ವಾರಸ್ಯವಾಗಿ ಮಾತಾಡಬೇಕು.''

''ಇದೇನು, ಮೇಷ್ಟ್ರೆ? ಹೋಟೆಲ್ ಮಾಣಿಗೆ ಎರಡು ಇಡ್ಲಿ, ಒಂದು ವಡೆ ಬೇಕು, ಅರ್ಜೆಂಟ್, ಜೊತೆಗೆ ಸಾಂಬಾರ್ ರುಚಿಯಾಗಿರಬೇಕು ಅಂತ ಆರ್ಡರ್ ಕೊಡುವ ಹಾಗೆ ಹೇಳಿದರೆ ಹೇಗೆ ಪೂರೈಸೋದು, ಮೇಷ್ಟ್ರೆ?''

''ಅಯ್ಯೋ, ಇದು ಬಹಳ ಸೀರಿಯಸ್ ವಿಷಯಪ್ಪ, ಹಾಸ್ಯ ಮಾಡಬೇಡ. ಅಂದ ಹಾಗೆ ಒಂದು ಒಳ್ಳೆ ಕೊಟೇಷನ್ ಸಿಕ್ಕಿದೆ. ಹೇಳಲೆ?''

''ಹೇಳಿ, ಮೇಷ್ಟ್ರೆ.''

''Definition of Prayer : A long distance call with no one at the other end. ಹೇಗಿದೆ? ಈಗ ನೀನೊಂದು ಹೇಳು ಮತ್ತೆ.''

''ಇದು Einstein ಹೇಳಿದ್ದು. I never worry about the future. It comes soon enough.''

''ತುಂಬ ಚೆನ್ನಾಗಿದೆ. ಬರೆದುಕೊಂಡು ಬಿಡುತ್ತೇನೆ. ಎಲ್ಲಿ, ತಿರುಗಿ ನಿಧಾನವಾಗಿ ಹೇಳು... ಅಪ್ಪ, ನಾನು ಹೇಳಿದ್ದು ಮರೆಯಬೇಡ, ಲೆಕ್ಚರ್ ಕೊಡೋಕೆ...''

''ಖಂಡಿತ ಸಾರ್, ನೀವೇನೂ ಯೋಚನೆ ಮಾಡಬೇಡಿ, ಮೇಷ್ಟ್ರೆ.''

''ಸರಿ, ಹಾಗಾದರೆ. ನಾಳೆ ಫೋನ್ ಮಾಡ್ತೇನೆ. ಗುಡ್ ಮಾರ್ನಿಂಗ್, ಗುಡ್ ಮಾರ್ನಿಂಗ್ ಯಂಗ್ ಸೈಂಟಿಸ್ಟ್!''

* * *

ಬೆಂಗಳೂರು ಸೈನ್ಸ್ ಫೋರಂ ಚೆನ್ನಾಗಿ ನಡೆದುಕೊಂಡು ಬಂದಿದೆ. ಇತ್ತೀಚೆಗೆ ಎಚ್.ಎನ್. ಅವರ ಸತತ ಸಾಧನೆಯ ಫಲವಾಗಿ ಜಗದೀಶ್ ಸೈನ್ಸ್ ಸೆಂಟರ್ ಸ್ಥಾಪಿತವಾಗಿದೆ. ಅಲ್ಲಿ ಅನೇಕ ಸೈನ್ಸ್ ಮಾಡಲ್‌ಗಳಿವೆ, ಗ್ರಂಥಾಲಯವಿದೆ. ತಿಂಗಳಿಗೆ ಎರಡು ಸಲ ವಿಜ್ಞಾನದ ವಿಷಯಗಳ ಮೇಲೆ ಜನಪ್ರಿಯ ಭಾಷಣಗಳು ನಡೆಯುತ್ತಿವೆ. ಈ ಕೇಂದ್ರ ಮತ್ತಷ್ಟು ವಿಕಾಸವಾಗಬೇಕು, ಚಟುವಟಿಕೆಗಳು ಹೆಚ್ಚಾಗುತ್ತ ಹೋಗಬೇಕು ಎನ್ನುವುದು ಎಚ್.ಎನ್. ಮನಸ್ಸಿನ ಮಹತ್ವಾಕಾಂಕ್ಷೆ. ಇದರ ವಿಷಯವಾಗಿ ವಿಜ್ಞಾನಿಗಳ ಜೊತೆ ಮಾತಾಡುತ್ತಿದ್ದರು. ಹೋದ ನವೆಂಬರ್ ತಿಂಗಳಲ್ಲಿ ನಾವು ಕೆಲವರು ಎಚ್.ಎನ್. ಜೊತೆ ಮಾತುಕಥೆ ನಡೆಸಿದೆವು. ಆದಷ್ಟು ಬೇಗ ಪ್ರಿಯೂನಿವರ್ಸಿಟಿ ವಿದ್ಯಾರ್ಥಿಗಳಿಗೆ ಆರೆಂಟು ವಿಶೇಷ ಭಾಷಣಗಳನ್ನು ಏರ್ಪಾಟು ಮಾಡೋಣ ಅವರ ಕುತೂಹಲ ಕೆರಳಿಸುವುದಕ್ಕೆ, ಹಾಗೆಯೆ ಇನ್ನೆಲ್ಲ ಕಾರ್ಯಕ್ರಮಗಳನ್ನು ಕ್ರಮೇಣ ರೂಢಿಸೋಣ ಎನ್ನುವ ನಿರ್ಧಾರವಾಯಿತು. ಇದರಿಂದ ಎಚ್.ಎನ್. ಮನಸ್ಸಿಗೆ ಸಾಕಷ್ಟು ತೃಪ್ತಿ, ಸಂತೋಷ. ಜನವರಿ ಹನ್ನೆರಡನೆಯ ತಾರೀಖು ಈ ಕಾರ್ಯಕ್ರಮವನ್ನು ಪ್ರಾರಂಭ ಮಾಡಿದೆವು. ಅಷ್ಟರಲ್ಲಿ ಎಚ್.ಎನ್. ಮಯ್ಯ ಆಸ್ಪತ್ರೆಗೆ ಸೇರಿದ್ದರು. ದಿನ ದಿನಕ್ಕೆ ಅವರ ಆರೋಗ್ಯ ಕೆಡುತ್ತ ಬರುತ್ತಿತ್ತು. ಮನೆಗೆ ಹೋಗುವ ಮುನ್ನ ಅವರಿಗೆ ಸುದ್ದಿ ಮುಟ್ಟಿಸಿಹೋಗೋಣ ಎಂದು ಆಸ್ಪತ್ರೆಗೆ ಹೋದೆ. ಇದೇ ನಮ್ಮ ಕಡೆಯ ಭೇಟಿಯಾಗುತ್ತದೆ ಎನ್ನುವುದು ನನಗೆ ಹೇಗೆ ತಿಳಿಯಬೇಕು?

ಐ.ಸಿ.ಯು.ನಲ್ಲಿ ಇದ್ದಾರೆ ಎಂದು ಹೇಳಿದರು. ಅಲ್ಲಿದ್ದ ನರ್ಸನ್ನು ಕೇಳಿದೆ, ''ಏನಮ್ಮ, ಅವರಿಗೆ ಜನಗಳ ಗುರುತು ಗೊತ್ತಾಗುತ್ತದೆಯೆ? ಹೇಳಿದ್ದು ಅರ್ಥವಾಗುತ್ತದೆಯೆ?'' ಎರಡೂ ಆಗುತ್ತದೆ ಎಂದು ಆಕೆ ಆಶ್ವಾಸನೆ ಕೊಟ್ಟರು. ಅರ್ಧ ಮೇಲೆ ಮಾಡಿದ್ದ ಮಂಚದ ಬೆನ್ನಿಗೆ ಒರಗಿ ಮಲಗಿದ್ದರು ಎಚ್.ಎನ್. ಮೈಪೂರ್ತಿ ಹೊದ್ದಿಗೆ ಹೊದ್ದಿಸಿದ್ದರು; ತಲೆ ಕೈಗಳು ಮಾತ್ರ ಹೊರಗೆ ಕಾಣಿಸುತ್ತಿದ್ದವು. ಒಬ್ಬ ಬಾಲಕ ಅವರ ಕಾಲುಗಳನ್ನು ಒತ್ತುತ್ತಿದ್ದ. ಇನ್ನೊಬ್ಬ ನರ್ಸ್ ಅವರಿಗೆ ಆಕ್ಸಿಜನ್ ಕೊಡುತ್ತಿದ್ದರು. ಕೊಟ್ಟು ಮುಗಿದ ನಂತರ, ಆಗ ತಾನೆ ಸೈನ್ಸ್ ಸೆಂಟರಿನಲ್ಲಿ ಪ್ರಾರಂಭವಾಗಿದ್ದ ಕಾರ್ಯಕ್ರಮದ ವಿಷಯ ಅವರಿಗೆ ಹೇಳಿದೆ.

''ಬಹಳ ಚೆನ್ನಾಗಿ ಆಯಿತು, ಸಾರ್. ನಾವು ನಿರೀಕ್ಷಿಸಿದ್ದಕ್ಕಿಂತ ಹೆಚ್ಚು ಮಂದಿ ವಿದ್ಯಾರ್ಥಿಗಳು ಬಂದಿದ್ದರು. ಅವರಲ್ಲಿ ತುಂಬ ಆಸಕ್ತಿಯಿದೆ. ನೀವೂ ಅಲ್ಲಿದ್ದಿದ್ದರೆ ಚೆನ್ನಾಗಿರುತ್ತಿತ್ತು, ಮೇಷ್ಟ್ರೆ. ಹೋಗಲಿ ಬಿಡಿ, ಬೇಗ ಸುಧಾರಿಸಿಕೊಳ್ಳಿ. ಇನ್ನು ಒಂದು ತಿಂಗಳ ಹೊತ್ತಿಗೆ ಕಾರ್ಯಕ್ರಮದ ಮುಕ್ತಾಯ ಸಮಾರಂಭಕ್ಕಾದರೂ ಬರಬಹುದು. ಮೇಷ್ಟ್ರೆ, ನಿಮಗೆ ಏನು ಬೇಕೋ ಅದನ್ನೆಲ್ಲಾ ಮಾಡೋಣ, ಮಾಡೋರು ಅನೇಕ ಜನ ಇದ್ದಾರೆ.''

ಎಚ್.ಎನ್. ಏನೋ ಹೇಳುವುದಕ್ಕೆ ಪ್ರಯತ್ನಪಟ್ಟರು. ಗಂಟಲಿನಿಂದ ಶಬ್ದ ಮಾತ್ರ ಬಂದಿತು, ಮಾತು ಹೊರಡಲಿಲ್ಲ. ನನ್ನ ಮಾತು ಅರ್ಥವಾಯಿತು ಎನ್ನುವಂತೆ ಮೆಲ್ಲಗೆ ತಲೆ ಆಡಿಸಿದರು. ಅವರ ಕಣ್ಣುಗಳು ತೀಕ್ಷ್ಣವಾಗಿ ನನ್ನ ಮುಖವನ್ನೇ ದೃಷ್ಟಿಸಿ ನೋಡುತ್ತಿದ್ದವು. ಅವರ ಮನಸ್ಸಿನಲ್ಲಿ ಏನು ಭಾವ-ಭಾವನೆಗಳು, ಚಿಂತೆ-ಚಿಂತನೆಗಳು ಮೂಡುತ್ತಿದ್ದವೋ, ಮಿಂಚಿ ಮಾಯವಾಗುತ್ತಿದ್ದವೋ ಏನೋ.

ಎಚ್.ಎನ್. ಅವರ ಎರಡೂ ಕೈಗಳನ್ನು ನನ್ನ ಕೈಗಳಲ್ಲಿ ತೆಗೆದುಕೊಂಡು ಹೇಳಿದೆ,

''ಕೆಲಸ ಮಾಡೋದಕ್ಕೆ ನಾವೆಲ್ಲ ಇದೀವಿ, ಸಾರ್. ಯೋಚನೆ ಮಾಡಬೇಡಿ, ಮೇಷ್ಟ್ರೆ.''

ಸಿ. ವಿ. ವಿಶ್ವೇಶ್ವರ, ಜವಹರಲಾಲ್ ನೆಹ್ರೂ ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು-೫೬೦ ೦೦೧

## ಎಚ್. ಎನ್. ಅವರ ಬದುಕೇ ಒಂದು 'ಪವಾಡ'

ನನ್ನ ಮತ್ತು ನರಸಿಂಹಯ್ಯನವರ ಸ್ನೇಹ ಅರುವತ್ತು ವರ್ಷಗಳಿಗೂ ಹಿಂದಿನದು. ೧೯೪೦ರಲ್ಲಿ ಅವರು ಮೊದಲ ವರ್ಷದ ಬಿ. ಎಸ್ಸಿ (ಆನರ್ಸ್) ವಿದ್ಯಾರ್ಥಿಯಾಗಿ ಸೆಂಟ್ರಲ್ ಕಾಲೇಜ್ ಪ್ರವೇಶಿಸಿದಾಗ ನಾನು ಅಲ್ಲಿ ಎರಡನೆಯ ವರ್ಷದ ವಿದ್ಯಾರ್ಥಿ. ಅವರ ಕೆಲವು ಸ್ನೇಹಿತರು ನನಗೂ ಸ್ನೇಹಿತರಾಗಿದ್ದುದರಿಂದ ನಾವು ಆಗಾಗ ಸಂಧಿಸುತ್ತಿದ್ದೆವು, ಹಾಗಾಗಿ ನಾವು ಸ್ನೇಹಿತರಾದೆವು.

ಹತ್ತು ವರ್ಷಗಳ ಮೇಲೆ, ೧೯೫೦ರ ಸುಮಾರಿನಲ್ಲಿ, ನಾನು ಸೆಂಟ್ರಲ್ ಕಾಲೇಜಿನಲ್ಲಿ ರಸಾಯನಶಾಸ್ತ್ರದ ಅಧ್ಯಾಪಕ. ಆಗ ನ್ಯಾಷನಲ್ ಕಾಲೇಜಿನಲ್ಲಿ ನರಸಿಂಹಯ್ಯನವರು ಭೌತಶಾಸ್ತ್ರದ ಅಧ್ಯಾಪಕರು. ಅವರ ಸಹಪಾಠಿ ಮತ್ತು ನಿಕಟವರ್ತಿಯಾಗಿದ್ದ ಕೆ. ಶ್ರೀನಿವಾಸನ್ ರಸಾಯನಶಾಸ್ತ್ರದ ಅಧ್ಯಾಪಕರು. ಶ್ರೀನಿವಾಸನ್ ನನ್ನ ಆಪ್ತರಾಗಿದ್ದುದರಿಂದ ಎಂದಾದರೂ ಕಾಲೇಜಿನಲ್ಲಿ ನನ್ನ ಕೆಲಸ ಬೇಗ ಮುಗಿದು, ಸಂಜೆ ಐದು ಗಂಟೆಗೆ ಮುಂಚೆಯೇ ಮನೆಗೆ ಬಂದರೆ, ಕೂಡಲೇ ನಾನು ನಮ್ಮ ಮನೆಯಿಂದ ಅರ್ಧ ಕಿಲೋಮೀಟರ್‌ಗಿಂತ ಹತ್ತಿರವೇ ಇದ್ದ ನ್ಯಾಷನಲ್ ಕಾಲೇಜಿಗೆ ಹೋಗುತ್ತಿದ್ದೆ. ಅಲ್ಲಿ ನರಸಿಂಹಯ್ಯ ಮತ್ತು ಶ್ರೀನಿವಾಸನ್ ಅಲ್ಲದೆ ಇನ್ನು ಕೆಲವು ಸ್ನೇಹಿತರೂ ಸಿಕ್ಕುತ್ತಿದ್ದರು. ಆಗ ಅಲ್ಲಿ ಪ್ರಿನ್ಸಿಪಾಲ್ ಆಗಿದ್ದ ಸಂಪದ್ಗಿರಿರಾಯರೂ ಕೆಲವು ವೇಳೆ ಬಂದು ತಮ್ಮ ಕಿರಿಯ ಸಹೋದ್ಯೋಗಿಗಳೊಂದಿಗೆ ಬೆರೆತು ಸರಸ ಸಂಭಾಷಣೆಯಲ್ಲಿ ಪಾಲ್ಗೊಳ್ಳುತ್ತಿದ್ದರು. ಅವರೆಲ್ಲರೊಡನೆ ಒಂದು ಗಂಟೆ ಇದ್ದು ಮನೆಗೆ ಹಿಂದಿರುಗುತ್ತಿದ್ದೆ. ಆ ಒಂದೆರಡು ವರ್ಷಗಳ ಅವಧಿಯಲ್ಲಿ ನಾನು ವಾರದಲ್ಲಿ ಎರಡು ಮೂರು ದಿನ ಆ ರೀತಿ ಅಲ್ಲಿಯ ಸ್ನೇಹಿತರೊಡನೆ ಕಾಲ ಕಳೆಯುತ್ತಿದ್ದೆ.

ನಮ್ಮ ಮಾತುಕತೆಯಲ್ಲಿ ಹತ್ತಾರು ವಿಷಯಗಳು ಬಂದಿರಬಹುದು. ಅನೇಕ ವೇಳೆ ಭಿನ್ನಾಭಿಪ್ರಾಯಗಳು ಕಾಣಿಸಿಕೊಂಡು ನಾವು ಚರ್ಚಿಸಿರಬಹುದು. ಆದರೂ ಈಗ ನರಸಿಂಹಯ್ಯನವರ ಮಾತು ಬಂದಾಗ ನನ್ನ ಮನಸ್ಸಿನಲ್ಲಿ ಪ್ರಮುಖವಾಗಿ ಎದ್ದು ನಿಲ್ಲುವುದು ಕೆಲವು ನೆನಪುಗಳು ಮಾತ್ರ; ಪಾಂಡವಪುರದ ಹುಡುಗನ ಪ್ರಕರಣ, ನರಸಿಂಹಯ್ಯನವರು ಸತ್ಯ ಸಾಯಿ ಬಾಬಾ ಅವರ ಭೇಟಿಗಾಗಿ ಕೋರಿಕೆ ಸಲ್ಲಿಸಿದಾಗ ಬಾಬಾ ಅವರು ಭೇಟಿ ನೀಡಲು ನಿರಾಕರಿಸಿದುದು, ಬಾಬಾ ಅವರು ಎಲ್ಲರಿಗೂ ಕೊಡುತ್ತಿದ್ದ ಬೂದಿ ಮತ್ತು ಪ್ರತಿಷ್ಠರಿಗೆ ಕೊಡುತ್ತಿದ್ದ ಉಂಗುರ, ಕೈಗಡಿಯಾರಗಳ ಮಾತು ಬಂದಾಗ ನರಸಿಂಹಯ್ಯನವರು, ''ನನಗೆ ಅದು ಯಾವುದೂ ಬೇಡ, ನನಗೊಂದು ಕುಂಬಳಕಾಯಿ ಬೇಕು'' ಎಂದುದು, ಪರ್ಜನ್ಯ ಜಪ ಮಾಡಿ ತಿಪ್ಪಗೊಂಡನಹಳ್ಳಿ ಕೆರೆಯನ್ನು ತುಂಬಿಸಿರೆಂದು ಅವರು ಶಿವಬಾಲಯೋಗಿಗೆ ಸವಾಲು ಹಾಕಿದುದು, ಜ್ಯೋತಿಷಿಯೊಬ್ಬನ ಭವಿಷ್ಯ ನುಡಿ ನಿಜವಾಯಿತೆಂದು ಯಾರೋ ಹೇಳಿದಾಗ, ಅವರು ''ಕೆಟ್ಟು ನಿಂತು ಹೋಗಿರುವ ಗಡಿಯಾರ ಸಹ ಪ್ರತಿನಿತ್ಯ ಎರಡು ಸಲ ಸರಿಯಾದ ವೇಳೆಯನ್ನು ತೋರಿಸುವುದಿಲ್ಲವೇನಪ್ಪಾ'' ಎಂದುದು, ಇತ್ಯಾದಿ.

ಈ ಪ್ರಸಂಗಗಳೇ ನನ್ನ ನೆನಪಿಗೆ ಬರಲು ಕಾರಣವೇನು ಎಂಬುದು ಯಾರಿಗೆ ತಾನೆ ಗೊತ್ತಿಲ್ಲ? ವೈಜ್ಞಾನಿಕ ದೃಷ್ಟಿಯ ಹಿರಿಮೆಯನ್ನು ಸಾರಿ ಅಂಧಶ್ರದ್ಧೆಯನ್ನು ಹೊರದೂಡುವುದು ನರಸಿಂಹಯ್ಯನವರ ಏಕೈಕ ಜೀವಿತೋದ್ದೇಶವಾಗಿದ್ದುದೇ ಅದಕ್ಕೆ ಕಾರಣ. ಸಹಜವಾಗಿಯೇ ವಿಜ್ಞಾನವನ್ನು ಜನಪ್ರಿಯಗೊಳಿಸಿ, ಆ ಮೂಲಕ ನಮ್ಮ ಜನರಲ್ಲಿ ವೈಜ್ಞಾನಿಕ ಮನೋಭಾವವನ್ನು ಬೆಳೆಸುವುದಕ್ಕಾಗಿ ರಾಜ್ಯಮಟ್ಟದ ಒಂದು ಸ್ವಯಂಸೇವಾ ಸಂಸ್ಥೆಯನ್ನು ಸ್ಥಾಪಿಸುವ ಉದ್ದೇಶದಿಂದ ಕಾರ್ಯ ಪ್ರವೃತ್ತರಾದ ನಾವು ಕೆಲವರು ಅದರಲ್ಲಿ ನರಸಿಂಹಯ್ಯನವರ ಸಹಯೋಗ ಅಗತ್ಯ ಎಂದು ತೀರ್ಮಾನಿಸಿದೆವು. ೧೯೮೦ರ ವೇಳೆಗೆ ಸ್ಥಾಪನೆಗೆ ಅಗತ್ಯವಾದ ಎಲ್ಲ ಸಿದ್ಧತೆಗಳಾದವು. ಸಂಸ್ಥೆಯ ಪ್ರಾರಂಭದ ದಿನಗಳಲ್ಲಿ ತಕ್ಕಮಟ್ಟಿಗೆ ಪ್ರಭಾವಶಾಲಿಯಾದವರು ಅಧ್ಯಕ್ಷರಾದರೆ ಅನುಕೂಲ ಎಂಬ ದೃಷ್ಟಿಯಿಂದ, ಆಗ್ಗೆ ಎರಡು

ಮೂರು ವರ್ಷಗಳ ಹಿಂದೆ ಬೆಂಗಳೂರು ವಿಶ್ವವಿದ್ಯಾನಿಲಯದ ವೈಸ್‌ಚಾನ್ಸಲರ್ ಸ್ಥಾನದಿಂದ ನಿವೃತ್ತರಾಗಿದ್ದ ಮತ್ತು ಲೆಜಿಸ್ಲೆಟಿವ್ ಕೌನ್ಸಿಲ್‌ನ ಹಾಲಿ ನಾಮಕರಣ ಸದಸ್ಯರಾಗಿದ್ದ ನರಸಿಂಹಯ್ಯನವರನ್ನು ಕಂಡು ಸಂಸ್ಥೆಯ ಮೊದಲ ಅಧ್ಯಕ್ಷರಾಗಲು ಒಪ್ಪಿಗೆ ನೀಡುವಂತೆ ಅವರನ್ನು ಕೇಳಿಕೊಂಡೆವು. ಸುಮಾರು ಹದಿನೈದು ವರ್ಷಗಳ ಹಿಂದೆ ತಾವೇ ಹುಟ್ಟು ಹಾಕಿದ ಬೆಂಗಳೂರು ಸೈನ್ಸ್ ಫೋರಮ್‌ನ ಅಧ್ಯಕ್ಷರಾಗಿದ್ದ ನರಸಿಂಹಯ್ಯನವರು ಮರುಮಾತಿಲ್ಲದೆ ನಮ್ಮ ಕೋರಿಕೆಯಂತೆ ಹೆಚ್ಚಿನ ಜವಾಬ್ದಾರಿಯನ್ನು ವಹಿಸಿಕೊಳ್ಳಲು ಒಪ್ಪಿದರು. ಹೀಗಾಗಿ ನರಸಿಂಹಯ್ಯನವರು ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತಿನ ಮೊತ್ತ ಮೊದಲ ಅಧ್ಯಕ್ಷರಾಗಿ ನಾಲ್ಕು ವರ್ಷ ಕೆಲಸ ಮಾಡಿದರು. ಆ ನಾಲ್ಕು ವರ್ಷವೂ ನಾನು ಉಪಾಧ್ಯಕ್ಷ ಸ್ಥಾನದಲ್ಲಿದ್ದೆ.

ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತಿನ ಹುಟ್ಟಿಗೆ ಕಾರಣರಾಗಿದ್ದ ಸೇತುರಾವ್, ಅಡ್ಯನಡ್ಕ ಕೃಷ್ಣಭಟ್ಟರು, ನಾನು ಮುಂತಾದವರಿಗೂ ನರಸಿಂಹಯ್ಯನವರಿಗೂ ಒಂದು ವಿಷಯದಲ್ಲಿ ಅಷ್ಟೇನೂ ಗುರುತರವಲ್ಲದ ಒಂದು ಭಿನ್ನಾಭಿಪ್ರಾಯ ಆಗಾಗ ಕಾಣಿಸಿಕೊಳ್ಳುತ್ತಿತ್ತು. ಮೂಢನಂಬಿಕೆಗಳ ಮೇಲೆ ಗದಾಪ್ರಹಾರ ಮಾಡುವುದು ಅವರಿಗೆ ಅತ್ಯಂತ ಪ್ರಿಯವಾಗಿದ್ದುದರಿಂದ ಆ ಬಗೆಯ ಕಾರ್ಯಕ್ರಮಗಳ ಬಗ್ಗೆ ಅಮಿತ ಉತ್ಸಾಹ ತೋರುತ್ತಿದ್ದರು; ನಮ್ಮ ಪತ್ರಿಕೆಯ ಪ್ರತಿಯೊಂದು ಸಂಚಿಕೆಯಲ್ಲಿಯೂ ಆ ಬಗೆಯ ಒಂದಾದರೂ ಲೇಖನ ಇರಬೇಕಪ್ಪಾ ಎಂದು ಹಲುಬುತ್ತಿದ್ದರು. ನಮ್ಮೆಲ್ಲರ ದೃಷ್ಟಿ ಸ್ವಲ್ಪಮಟ್ಟಿಗೆ ಭಿನ್ನವಾಗಿರುತ್ತಿತ್ತು. ಯಾವುದೇ ಮೂಢನಂಬಿಕೆಯ ಪ್ರಸ್ತಾಪ ಬಂದಾಗ ನಮ್ಮ ವಿರೋಧವನ್ನು ಖಚಿತವಾಗಿ ವ್ಯಕ್ತಪಡಿಸುವುದು ಅಗತ್ಯ; ಆದರೆ ಅದಕ್ಕಾಗಿ ಸಂದರ್ಭಗಳನ್ನು ಸೃಷ್ಟಿಸುವುದು ಸರಿಯಲ್ಲ, ವೈಜ್ಞಾನಿಕ ತಿಳಿವಳಿಕೆಯ ಪ್ರಸಾರ ಹೆಚ್ಚು ಪರಿಣಾಮಕಾರಿ, ಕತ್ತಲನ್ನು ದೂಷಿಸುವುದಕ್ಕಿಂತ ದೀಪ ಬೆಳಗಿಸುವುದು ಉತ್ತಮ ಮಾರ್ಗ ಎಂಬುದು ನಮ್ಮೆಲ್ಲರ ನಿಲುವು. ನರಸಿಂಹಯ್ಯನವರು ಮೊಂಡತನದಿಂದ ತಮ್ಮ ನಿಲುವಿಗೆ ಅಂಟಿಕೊಳ್ಳದೆ ಬಹು ಜನರ ಅಭಿಪ್ರಾಯಕ್ಕೆ ಗೌರವ ತೋರಿಸಿ ಕೆಲಸಕಾರ್ಯಗಳು ಸುಗಮವಾಗಿ ನಡೆಯಲು ಅವಕಾಶ ನೀಡುತ್ತಿದ್ದರು.

ಪವಾಡಗಳನ್ನು ಅಲ್ಲಗಳೆಯುತ್ತಿದ್ದ ನರಸಿಂಹಯ್ಯನವರು ತಮ್ಮ ಜೀವನವೇ ಒಂದು ಪವಾಡ ಎನ್ನುತ್ತಿದ್ದರು. ಅವರ ಆತ್ಮಕಥೆಯಲ್ಲಿಯೂ ಈ ವಾಕ್ಯ ಕಾಣಿಸಿಕೊಂಡಿದೆ. ದೂರದ ಹಳ್ಳಿಯೊಂದರಲ್ಲಿ ಕಡು ಬಡತನದ ಕುಟುಂಬದಲ್ಲಿ ಹುಟ್ಟಿ ಪ್ರೌಢಶಾಲೆ ವಿದ್ಯಾಭ್ಯಾಸಕ್ಕಾಗಿ ನೂರು ಕಿಲೋಮೀಟರ್ ದೂರದ ಬೆಂಗಳೂರಿಗೆ ಕಾಲ್ನಡಿಗೆಯಲ್ಲಿ ಹೋಗಿ ವಿದ್ಯಾಭ್ಯಾಸ ಮುಂದುವರಿಸಿ, ಕೊನೆಗೆ ವಿಶ್ವವಿದ್ಯಾಲಯ ಒಂದರ ವೈಸ್‌ಚಾನ್ಸಲರ್ ಆದುದು, ಭಾರತ ಸರ್ಕಾರದಿಂದ ಪದ್ಮಭೂಷಣ ಪ್ರಶಸ್ತಿ ಪಡೆದುದು ಪವಾಡವಲ್ಲದೆ ಬೇರೆ ಏನು ? ನಗರ ಪ್ರದೇಶದಿಂದ ಬಹುದೂರವಿರುವ ದಲಿತ ಕುಟುಂಬ ಒಂದರಲ್ಲಿ ಜನಿಸಿ ಮಾಧ್ಯಮಿಕ ಶಾಲೆಯ ವಿದ್ಯಾಭ್ಯಾಸಕ್ಕಾಗಿ ದೂರದ ಊರಿನಲ್ಲಿ ಯಾರದೋ ಮನೆಯಲ್ಲಿ ದನದ ಕೊಟ್ಟಿಗೆಯಲ್ಲಿ ಕೆಲಸ ಮಾಡಿಕೊಂಡಿದ್ದು ಅಂತಿಮವಾಗಿ ಎಫ್.ಆರ್.ಎಸ್. ಪ್ರಶಸ್ತಿ ಪಡೆದು, ಜಗದ್ವಿಖ್ಯಾತ ವಿಜ್ಞಾನಿಯಾದ ಮೇಘನಾದ್ ಸಾಹಾ ಅವರ ಜೀವನವನ್ನು ನೆನಪಿಗೆ ತರುವ ನರಸಿಂಹಯ್ಯನವರ ಜೀವನವನ್ನು ಒಂದು ಪವಾಡವೆಂದೇ ಕರೆಯಬೇಕು.

ಜೀವನದ ಕೊನೆಯವರೆಗೂ ಹಾಸ್ಟೆಲ್‌ನ ಒಂದು ಚಿಕ್ಕ ಕೊಠಡಿಯಲ್ಲಿ ವಾಸಿಸುತ್ತಿದ್ದು ಸರಳ ಜೀವನವನ್ನು ನಡೆಸಿ ವಿದ್ಯಾರ್ಥಿ ವೃಂದದ ಪ್ರೀತಿಯನ್ನು ಗಳಿಸಿದ ನರಸಿಂಹಯ್ಯನವರ ಕೊಡುಗೆ ಏನು ಎಂಬ ಪ್ರಶ್ನೆಗೆ ಒಬ್ಬೊಬ್ಬರು ಒಂದೊಂದು ವಿಷಯವನ್ನು ಬೊಟ್ಟು ಮಾಡಿ ತೋರಿಸಬಹುದು. ನನ್ನ ಮಟ್ಟಿಗೆ ಹೇಳುವುದಾದರೆ, ಮುಗ್ಧರ ಮೌಢ್ಯವನ್ನು ಪೋಷಿಸುವ ದೇವ ಮಾನವರು, ಜ್ಯೋತಿಷಿಗಳು ಮುಂತಾದವರ ಬೆಂಗಾವಲಿಗೆ ಶ್ರೀಮಂತರು, ಅಧಿಕಾರಸ್ಥರು, ರಾಜಕೀಯ ಧುರೀಣರಂಥ ಪ್ರತಿಷ್ಠಿತರಿರುವುದರಿಂದ ಆ ಮೌಢ್ಯದ ವಿರುದ್ಧ ದನಿ ಎತ್ತುವುದು ಕಷ್ಟಸಾಧ್ಯವೆಂದು ಹಲುಬುವ ವಿಚಾರ ಪರರ ನೆರವಿಗೆ ಬಂದ ನರಸಿಂಹಯ್ಯನವರು ತಮ್ಮ ಸ್ಥಾನದ ಬೆಂಬಲ ಅವರಿಗೆ ನೀಡಿದುದು ಅವರ ಮುಖ್ಯ ಕೊಡುಗೆ.

ಪ್ರೊ|| ಜೆ. ಆರ್. ಲಕ್ಷ್ಮಣರಾವ್, ಮೈತ್ರಿ, ೧೨ನೇ ಮುಖ್ಯರಸ್ತೆ
ಸರಸ್ವತಿಪುರ, ಮೈಸೂರು- ೫೭೦ ೦೦೯



# ಎಚ್.ಎನ್. : ಒಂದು ಸ್ಮೃತಿ

"ಶ್ರೇಯಸ್ ಮತ್ತು ಪ್ರೇಯಸ್ ಇವು ಎರಡೂ ಮನುಷ್ಯನನ್ನು ಸಮೀಪಿಸುತ್ತವೆ. ಧೀಮಂತನು ಶ್ರೇಯಸ್ಸನ್ನು ಆರಿಸಿಕೊಳ್ಳುತ್ತಾನೆ. ಮಂದಮತಿಯು ಪ್ರೇಯಸ್ಸನ್ನು ಆರಿಸಿಕೊಳ್ಳುತ್ತಾನೆ." ಇದು ಯಮಧರ್ಮರಾಜನು ನಚಿಕೇತನಿಗೆ ಮಾಡಿದ ಉಪದೇಶ. ಡಾ|| ಎಚ್. ನರಸಿಂಹಯ್ಯನವರು ನಚಿಕೇತನ ಹಾಗೆ ಪ್ರೇಯಸ್ಸನ್ನು ದೂರವಿಟ್ಟು, ಶ್ರೇಯಸ್ಸನ್ನು ಆರಿಸಿಕೊಂಡವರು. ಸ್ವಾರ್ಥ ತ್ಯಾಗವಿಲ್ಲದೇ ಇದು ಸಾಧ್ಯವಿಲ್ಲ. ಎಚ್. ಎನ್. ಅವರು ಒಬ್ಬ ಮಹಾತ್ಯಾಗಿ. ಇವರಲ್ಲಿ ಸ್ವಾರ್ಥದ ಬದಲು, ಸ್ವಾಮಿ ವಿವೇಕಾನಂದರ ದೃಢ ಆತ್ಮವಿಶ್ವಾಸ, ದೇಶೀಯ ಶಿಕ್ಷಣ ಸಮಾಜದ ಆದರ್ಶಗಳು, ಗಾಂಧಿವಾದ ಮತ್ತು ವೈಜ್ಞಾನಿಕ ಮಾನವತಾವಾದ ಮೇಳೈಸಿಕೊಂಡಿದ್ದವು.

ಎಚ್.ಎನ್. ಅವರು ನ್ಯಾಷನಲ್ ಕಾಲೇಜಿನಲ್ಲಿ ಉಪನ್ಯಾಸಕರಾಗಿ ಕೆಲಸಕ್ಕೆ ಸೇರಿದ್ದೇ ಅವರ ಸ್ವಾರ್ಥ ತ್ಯಾಗದ ಮೊದಲ ಅಧ್ಯಾಯ. ಅವರ ಪ್ರಥಮ ಶ್ರೇಣಿಯ ವಿದ್ಯಾರ್ಹತೆ ಮತ್ತು ಅವರ ಹಿಂದುಳಿದ ಕೋಮನ್ನು ಬಳಸಿಕೊಂಡು ಅವರು ಸರ್ಕಾರಿ ಸೇವೆಯನ್ನು ಸೇರಿದ್ದರೆ, ಅವರು ಕಡೆಯ ಪಕ್ಷ ಜಿಲ್ಲಾಧಿಕಾರಿಯಾಗಿ ನಿವೃತ್ತರಾಗಿ ಬೆಂಗಳೂರಿನಲ್ಲಿ ಒಂದು ಭಾರಿ ಮನೆಯನ್ನು ನಿರ್ಮಿಸಿಕೊಳ್ಳಬಹುದಾಗಿತ್ತು. ಆದರೆ ನರಸಿಂಹಯ್ಯನವರು ಪ್ರೇಯಸ್ಸಿನ ಮಾರ್ಗವನ್ನು ಹಿಡಿಯಲಿಲ್ಲ. ನಚಿಕೇತನೇ ಯಮಧರ್ಮರಾಜನಿಗೆ ಹೇಳಿದಂತೆ, "ನ ವಿತ್ತೇನ ತರ್ಪಣೀಯೋ ಮನುಷ್ಯಃ" ಮನುಷ್ಯ ಧನದಿಂದ ತೃಪ್ತಿ ಪಡುವವನಲ್ಲ. ಖಾಸಗೀ ಕಾಲೇಜುಗಳು ಉಪನ್ಯಾಸಕರಿಗೆ ವೇತನಕ್ಕಾಗಿ ಹಣ ಒದಗಿಸುವುದೇ ಕಷ್ಟವಾಗಿದ್ದ ಆ ಕಾಲದಲ್ಲಿ, ಎಚ್.ಎನ್. ಅವರು ನ್ಯಾಷನಲ್ ಕಾಲೇಜನ್ನು ಸೇರಿದರು. ಆ ದಿನಗಳಲ್ಲಿ ಎಲ್ಲಾ ಅಧ್ಯಾಪಕರಿಗೂ ನ್ಯಾಷನಲ್ ಕಾಲೇಜಿನಲ್ಲಿ ಒಂದೇ ವೇತನ ಶ್ರೇಣಿ.

ಎಚ್.ಎನ್. ಅವರದು ಸಾಹಸ ಪ್ರವೃತ್ತಿ. ಆ ದಿನಗಳಲ್ಲಿ ನಮ್ಮ ಸಂಸ್ಥೆ ಎರಡು ಶಾಲೆಗಳನ್ನು ಮತ್ತು ಒಂದು ಕಾಲೇಜನ್ನು ನಡೆಸುತ್ತಿತ್ತು. ಆದರೆ ಅವುಗಳ ಆರ್ಥಿಕ ವ್ಯವಸ್ಥೆ ಒಂದೇ ಇತ್ತು. ಎಚ್.ಎನ್. ಅವರು ಇವುಗಳ ಆರ್ಥಿಕ ವ್ಯವಸ್ಥೆಗಳನ್ನು ಪ್ರತ್ಯೇಕಿಸಬೇಕೆಂದು ವಾದಿಸಿ, ಕಾಲೇಜಿನ ಭವಿಷ್ಯದ ದೃಷ್ಟಿಯಿಂದ ಈ ವಾದ ಸರಿಯೆಂದು ನಮಗೆಲ್ಲ ಅವಗತ ಮಾಡಿಕೊಟ್ಟು ನಮ್ಮ ಹಸ್ತಾಕ್ಷರಗಳನ್ನು ಸಂಗ್ರಹಿಸಿ, ಸಂಸ್ಥೆಯ ವಿಶೇಷ ಸರ್ವ ಸದಸ್ಯರ ಸಭೆಯನ್ನು ಕರೆಯುವ ಹಾಗೆ ಮಾಡಿದರು. ಅದರ ಅಧ್ಯಕ್ಷತೆಯನ್ನು ವಹಿಸಿದ್ದ ಸಂಸ್ಥೆಯ ಅಧ್ಯಕ್ಷರು ಅಸಾಧಾರಣ ಪ್ರತಿಭಾವಂತರು ಮತ್ತು ತಮ್ಮ ಕ್ಷೇತ್ರದಲ್ಲಿ ಪ್ರಸಿದ್ಧ ಪರಿಣತರು. ಆದರೆ ಸ್ವಲ್ಪ ಅಹಂಕಾರಿ. ಸಭೆಯು ಪ್ರಾರಂಭವಾದ ಮೇಲೆ ಅವರು ಒಂದು ಸಲ ತಮ್ಮ ಕೈಗಡಿಯಾರವನ್ನು ನೋಡಿಕೊಂಡು, "ನನಗೆ ಈಗ ಬೇರೆ ಕಾರ್ಯಕ್ರಮಗಳಿಗೆ ಹೋಗಬೇಕಾಗಿದೆ. ಚರ್ಚೆಯನ್ನು

ಈಗಲೇ ಮುಗಿಸುತ್ತೇನೆ'' ಎಂದು ಸಭೆಯನ್ನು ಬರ್ಖಾಸ್ತು ಮಾಡುವುದರಲ್ಲಿದ್ದರು. ಆಗ ತಕ್ಷಣ ಎಚ್.ಎನ್. ಅವರ ಪ್ರತಿಕ್ರಿಯೆ ಅರ್ಜುನ ಧನುಸ್ಸಿನಿಂದ ಹೊರಟ ಬಾಣದಂತಿತ್ತು. ಅವರು ಎದ್ದುನಿಂತು, ''ನೀವು ಬೇಕಾದರೆ ಹೋಗಬಹುದು, ಆದರೆ ಸಭೆಯು ಮುಂದುವರೆಯಬೇಕು. ಹೇಗೂ ಉಪಾಧ್ಯಕ್ಷರಿದ್ದಾರೆ, ಅವರ ಅಧ್ಯಕ್ಷತೆಯಲ್ಲಿ ಸಭೆಯ ಕಾರ್ಯಕಲಾಪಗಳು ಮುಂದುವರಿಯಲಿ'' ಎಂದು ಈ ತರುಣ ಉಪನ್ಯಾಸಕ ತಮ್ಮ ಸಂಸ್ಥೆಯ ಅಧ್ಯಕ್ಷರ ಮುಖಕ್ಕೇ ಈ ಮಾತನ್ನು ಹೇಳಿದರು. ಇದರಿಂದ ಸ್ವಲ್ಪ ಅಪ್ರತಿಭರಾದ ಅಧ್ಯಕ್ಷರು ನಿರ್ಗಮಿಸಿದರು ಮತ್ತು ಉಪಾಧ್ಯಕ್ಷರು ಸಭೆಯನ್ನು ನಡೆಸಿಕೊಟ್ಟರು.

ಎಚ್.ಎನ್. ಅವರ ಸರಳತೆಯ ಬಗ್ಗೆ ಒಂದು ಉದಾಹರಣೆಯನ್ನು ಇಲ್ಲಿ ಕೊಡಬೇಕು. ಅವರು ಬೆಂಗಳೂರು ವಿಶ್ವವಿದ್ಯಾಲಯದ ಉಪಕುಲಪತಿಯಾದ ನಂತರವೂ ಒಬ್ಬ ಸಾಮಾನ್ಯ ಕಾರ್ಯಕರ್ತನಂತೆ ಆಗಾಗ್ಗೆ ಕಾಲೇಜಿಗೆ ಬರುತ್ತಿದ್ದರು. ಹಾಗೊಂದು ಬಾರಿ ಬಂದು ತಾವು ಧರ್ಮಸ್ಥಳಕ್ಕೆ ಒಂದು ಅಧಿಕೃತ ಕಾರ್ಯಕ್ರಮಕ್ಕೆ ಶ್ರೀಕ್ಷೇತ್ರದ ಆಹ್ವಾನದ ಮೇರೆಗೆ ಹೋಗುತ್ತಿರುವುದಾಗಿಯೂ ಮತ್ತು ಕಾರಿನಲ್ಲಿ ಜಾಗವಿರುವುದರಿಂದ, ಕನ್ನಡ ಪ್ರಾಧ್ಯಾಪಕರಾದ ಎಂ.ಎಸ್.ವಿ. ಮತ್ತು ನಾನು ಅವರ ಜೊತೆ ಹೋಗಬೇಕೆಂದು ಹೇಳಿ ಒಪ್ಪಿಸಿದರು. ನಾವು ಸಾಯಂಕಾಲ ಹೊರಟಿದ್ದರಿಂದ, ಆ ರಾತ್ರಿ ಹಾಸನದಲ್ಲಿ ಸರ್ಕಾರಿ ಅತಿಥಿ ಗೃಹದ ಕೊಠಡಿಯೊಂದರಲ್ಲಿ ತಂಗಿದ್ದೆವು. ಆ ಕೊಠಡಿಯಲ್ಲಿ ಇದ್ದದ್ದು ಎರಡು ಶಯನಗಳು ಮಾತ್ರ. ಆಗ ಎಚ್.ಎನ್. ಅವರು ನಮ್ಮ ವಿರೋಧವನ್ನು ಮನ್ನಿಸದೆ, ಆ ಸುಪ್ಪತ್ತಿಗೆಯ ಶಯನಗಳನ್ನು ಎಂ.ಎಸ್.ವಿ. ಮತ್ತು ನನಗೆ ಕೊಟ್ಟು ಅವರು ರಾತ್ರಿ ನೆಲದ ಮೇಲೆ ಮಲಗಿ ನಿದ್ರಿಸಿದರು.

ಎಚ್.ಎನ್. ಅವರು ಉಪಕುಲಪತಿಯಾಗಿದ್ದಾಗ ಕಾಲೇಜು ಅಧ್ಯಾಪಕರ ಸಂಘಟನೆಯ ನೇತೃತ್ವದಲ್ಲಿ, ಸೇವಾ ನಿಯಮಗಳ ವಿಚಾರದಲ್ಲಿ ಕಾಲೇಜು ಅಧ್ಯಾಪಕರು ಸರ್ಕಾರದ ವಿರುದ್ಧ ಚಳವಳಿಯನ್ನು ನಡೆಸುತ್ತಿದ್ದರು. ಆಗ ಎಚ್.ಎನ್. ಅವರು ಆಗಿನ ಮುಖ್ಯಮಂತ್ರಿ ಸನ್ಮಾನ್ಯ ದೇವರಾಜ ಅರಸು ಅವರೊಡನೆ ಕಾಲೇಜು ಅಧ್ಯಾಪಕರ ನಾಯಕರ ಭೇಟಿ ಮತ್ತು ಮಾತುಕತೆಯನ್ನು ಏರ್ಪಡಿಸಿದರು. ನಮ್ಮನ್ನು ತಮ್ಮ ಅಧಿಕೃತ ಕಾರಿನಲ್ಲಿ ವಿಧಾನಸೌಧಕ್ಕೆ ಕರೆದುಕೊಂಡು ಹೋಗಿ, ಮಾತುಕತೆಯ ನಂತರ ರಾತ್ರಿ ಹೊತ್ತಾದರೂ ನಮ್ಮನ್ನು ಕಾರಿನಲ್ಲಿ ನಮ್ಮ ನಮ್ಮ ಮನೆಯ ಗೇಟಿನವರೆಗೂ ಕರೆದುಕೊಂಡು ಬಿಟ್ಟರು. ಎಚ್.ಎನ್. ಅವರ ಸೌಜನ್ಯಕ್ಕೆ ಮತ್ತು ಸರಳತೆಗೆ ಮಿತಿಯಿಲ್ಲ. ಅವರ ಬಗ್ಗೆ ಬರೆಯುವುದು ಎಷ್ಟೋ ಇದೆ. ಆದರೆ ಸ್ಥಳಾಭಾವದಿಂದ ಇನ್ನೊಂದು ಮಾತನ್ನು ಮಾತ್ರ ಉಲ್ಲೇಖಿಸಿ ಈ ಲೇಖನವನ್ನು ಮುಗಿಸುತ್ತೇನೆ.

ಎಚ್.ಎನ್. ಅವರದು ವೈಜ್ಞಾನಿಕ ಮನೋಭಾವ. ಪ್ರಶ್ನಿಸದೇ, ಪರೀಕ್ಷಿಸದೇ ಅತಿಮಾನುಷ ಘಟನೆಗಳನ್ನು ಒಪ್ಪಿಕೊಳ್ಳುವ ವ್ಯಕ್ತಿಯಲ್ಲ ಅವರು. ಸತ್ಯ ಸಾಯಿಬಾಬಾ ಅವರು ಮಾಡುತ್ತಾರೆ ಎನ್ನಲಾದ ಪವಾಡಗಳನ್ನು ಅಧಿಕೃತವಾಗಿ ಪರೀಕ್ಷಿಸಲು ಮುಂದಾದ ವ್ಯಕ್ತಿ. ಒಂದು ಬಾರಿ ಅವರ ಒಂದು ಅಧಿಕೃತ ಕಾರ್ಯಕ್ರಮದ ಪ್ರಯುಕ್ತ ಎಚ್.ಎನ್. ಅವರು ನಗರ ಸಮೀಪದ ಪ್ರಶಾಂತಿನಿಲಯಕ್ಕೆ ಹೋದರು. ನಾನೂ ಅವರ ಜೊತೆಗೆ ಸತ್ಯ ಸಾಯಿಬಾಬಾ ಅವರ ಸನ್ನಿಧಾನದಲ್ಲಿ ನಡೆದ ಕಾರ್ಯಕ್ರಮದಲ್ಲಿ ಉಪಸ್ಥಿತನಿದ್ದೆ. ಕಾರ್ಯಕ್ರಮವೇನೊ ಪ್ರಶಾಂತವಾಗಿ ನಡೆಯಿತು. ಆದರೆ ಎಚ್.ಎನ್. ಎದುರು ಯಾವುದೇ ಪವಾಡಗಳು ನಡೆಯಲಿಲ್ಲ. ಈಚೆಗೆ ಬೆನ್ನಿ ಹಿನ್ ಎಂಬ ಒಬ್ಬ ಅಮೆರಿಕನ್ ಧರ್ಮ ಪ್ರಚಾರಕ ಒಂದು ವಿಶೇಷ ಜೆಟ್ ವಿಮಾನದಲ್ಲಿ ಬೆಂಗಳೂರಿಗೆ ಬಂದು ಅರಮನೆಯ ಆವರಣದಲ್ಲಿ ಪವಾಡಗಳನ್ನು (ಬೈಬಲ್ಲಿನಲ್ಲಿ ವರ್ಣಿಸಿರುವಂತೆ) ಮಾಡಿ ತೋರಿಸುವೆನೆಂದು ಪ್ರಚಾರ ಮಾಡಿದ ಸಮಯದಲ್ಲಿ, ಎಚ್.ಎನ್. ಅವರು ತೀವ್ರ ಅಸ್ವಸ್ಥತೆಯಿಂದ ಬಹುಮಟ್ಟಿಗೆ ಪ್ರಜ್ಞಾಹೀನರಾಗಿ ಆಸ್ಪತ್ರೆಯಲ್ಲಿದ್ದರು. ಬೆನ್ನಿ ಹಿನ್ ನಿಜವಾಗಿಯೂ ಅದೃಷ್ಟವಂತ.

**ಡಾ|| ಕೆ. ದ್ವಾರಕಾನಾಥ್**, ನಂ. ೨೯೮, ೧೭ನೆ ಮುಖ್ಯರಸ್ತೆ, ೪ನೆ 'ಟ' ಬ್ಲಾಕ್, ಜಯನಗರ, ಬೆಂಗಳೂರು - ೫೬೦ ೦೪೧

## ಏಕಾಕಿ ಎಚ್. ಎನ್.

**ಕೊ**ನೆಕೊನೆಗೆ ಎಚ್. ಎನ್. ಮತ್ತು ಜೋಕುಗಳು ಒಟ್ಟಾಗಿಬಿಟ್ಟವು. ಕಳೆದ ಕೆಲವು ವರ್ಷಗಳಿಂದ ಅವರನ್ನು ಕಂಡು ಮಾತನಾಡಿದವರೆಲ್ಲ ಕೆಲವಾದರೂ ಹೊಸ ಹಳೆಯ ಜೋಕುಗಳನ್ನು ಅವರಿಂದ ಕೇಳಿ ಬರುತ್ತಿದ್ದರು. ಬಹಳ ಸಾರಿ ನಾನು ಏಕೆ ಹೀಗೆ ಎಂದು ಯೋಚಿಸಿದ್ದುಂಟು. ಎಚ್. ಎನ್. ಗೆ ಇದ್ದ ಹತ್ತಾರು ಆಸಕ್ತಿಗಳಲ್ಲಿ ಹೊಂದಾಣಿಕೆ ಕಾಣುತ್ತಿರಲಿಲ್ಲ. ಕರ್ನಾಟಕ ಸಂಗೀತ, ನಾಟಕ, ಕ್ರಿಕೆಟ್, ವಿಚಾರವಾದ, ಜ್ಞಾನ, ಶಿಕ್ಷಣ, ಖಾದಿ, ಸರಳ ಜೀವನ, ಬ್ರಹ್ಮಚರ್ಯ ಹೀಗೆ ಹಲವು ನೆಲೆಗಳು. ಎಲ್ಲಿಯೂ ಏರುಪೇರಾಗದಂತೆ ಅವರು ಜೀವಿಸಿದರು. ವಿಜ್ಞಾನದ ವಿದ್ಯಾರ್ಥಿ-ಅಧ್ಯಾಪಕರಾದರೂ ಆ ವಲಯದಲ್ಲಿ ಅವರು ತಮ್ಮ ಆಸಕ್ತಿಯನ್ನು ಮುಂದುವರೆಸಲಿಲ್ಲ. ಜ್ಞಾನದ ಸಾಮಾಜಿಕ ಜವಾಬ್ದಾರಿ ಅವರ ಮುಖ್ಯ ಕಾಳಜಿಯಾಗಿಬಿಟ್ಟಿತು. ವೈಜ್ಞಾನಿಕ ಮನೋಭಾವ ಬೆಳೆಯಬೇಕೆಂದರು. ಅದಕ್ಕಾಗಿ ಪ್ರಶ್ನಿಸುವ ಪ್ರವೃತ್ತಿಯನ್ನು ಬೆಳೆಸಿಕೊಳ್ಳಲು ಎಲ್ಲರಿಗೂ ಹೇಳುತ್ತಿದ್ದರು. ಹಾಗೆ ಹೇಳದೇ ಅವರ ಯಾವ ಭಾಷಣವೂ ಕೊನೆಯಾಗುತ್ತಿರಲಿಲ್ಲ. ಹಾಗಿದ್ದರೂ ವಿಚಾರವಾದಿಗಳೂ ಅವರೊಡನೆ ಜಗಳವಾಡುತ್ತಿದ್ದರು. ಕೊನೆಗೂ ಅಂತದೇ ಒಂದು ಜಗಳ ಈಚೆಗೆ ನಡೆಯಿತಷ್ಟೆ. ಹಾಗೆಂದು ಅವರನ್ನು ಗಾಳಿ ಬಂದಾಗ ತೂರಿಕೊಳ್ಳುವ ಅವಕಾಶವಾದಿ ಎನ್ನುವಂತೆಯೂ ಇರಲಿಲ್ಲ. ಅವರ ನಂಬಿಕೆಯ ಜಗತ್ತು ದೃಢವಾಗಿತ್ತು. ಆದರೆ ಆ ಜಗತ್ತಿನಲ್ಲಿ ಅವರು ಒಬ್ಬಂಟಿಯಾಗಿದ್ದರು. ನಾವು ಅವರಲ್ಲಿ ಮೆಚ್ಚಿಕೊಳ್ಳುವ ಯಾವ ಗುಣವನ್ನೂ ಈಗ ದಿನದಿನದ ಆಚರಣೆಯ ಮೌಲ್ಯವನ್ನಾಗಿ ಹೊಂದಿಲ್ಲ. ಹಾಗೆ ಹೊಂದದೇ ಇರುವುದಕ್ಕೆ ನಮ್ಮದೇ ಆದ ತರ್ಕಗಳಿವೆ. ಅನುಯಾಯಿಗಳಿಲ್ಲದ ಈ ನಾಯಕರಿಗೆ ಈ ಅಂಶ ಗೊತ್ತಿತ್ತೆಂದು ನನ್ನ ಅನಿಸಿಕೆ. ಅದರಲ್ಲೂ ಅವರ ಜೀವನದ ಅತ್ಯಂತ ಎತ್ತರದ ಸ್ಥಿತಿ ಎಂದು ತಿಳಿಯಬಹುದಾದ ಏಳನೆಯ ದಶಕದ ಅನಂತರ ಈ ಅಂಶ ಅವರ ಮನಸ್ಸಿನಲ್ಲಿ ಬಲಗೊಳ್ಳುತ್ತಾ ಹೋದಂತಿದೆ. ತುರ್ತು ಪರಿಸ್ಥಿತಿಯ ಆಚೀಚಿನ ವರ್ಷಗಳಲ್ಲಿ ಅವರು ಬೆಂಗಳೂರು ವಿಶ್ವವಿದ್ಯಾಲಯದ ಕುಲಪತಿಯಾಗಿದ್ದರು. ನನ್ನ ತಿಳುವಳಿಕೆಯಂತೆ ಅವರ ಎಲ್ಲ ತಿಳುವಳಿಕೆ ಮತ್ತು ನಂಬಿಕೆಗಳು ಪ್ರಖರಗೊಂಡ ವ್ಯಾಪ್ತಿ ಕಂಡುಕೊಂಡ ಹಾಗೆಯೇ ಅವುಗಳ ಮಿತಿಯೂ ಸ್ಪಷ್ಟಗೊಂಡ ಅವಧಿಯದು. ಆ ಬಗ್ಗೆ ಹೇಳಲು ಸಾಕಷ್ಟಿದೆ. ಆದರೆ ಅನಂತರದ ಸುಮಾರು ಎರಡುವರೆ ದಶಕಗಳು ಅವರ ಏಕಾಕಿತನ ಬಲಗೊಳ್ಳುತ್ತಾ ಹೋದ ಅವಧಿ. ಈ ಅವಧಿಯಲ್ಲಿಯೇ ಅವರಲ್ಲಿನ ನಗೆಹನಿಗಳಿಗೆ ಮೊರೆಹೋದ ವ್ಯಕ್ತಿ ಹುಟ್ಟಿ ಬೆಳೆದಂತಿದೆ. ಸ್ವಪ್ರತಿಭೆಯಿಂದ ಎಲ್ಲ ಸಾಮಾಜಿಕ ಅಸಮಾನತೆಗಳನ್ನೂ ಮೀರಿ ನಿಲ್ಲಲು ವ್ಯಕ್ತಿಗೆ ಪ್ರಜಾಪ್ರಭುತ್ವ ಅವಕಾಶ ನೀಡುತ್ತದೆ ಎನ್ನುವ ಅವರ ನಂಬಿಕೆ ಅವರ ಪಾಲಿಗೆ ಸುಳ್ಳಾಗಲಿಲ್ಲ ನಿಜ. ಇಂತಹ ತಿಳುವಳಿಕೆಗೆ ಇರುವ ಮಿತಿಗಳ ಅರಿವು ಅವರಿಗೆ ಆಗತೊಡಗಿತ್ತು. ಸಾಮಾಜಿಕ ಅಸಮಾನತೆಯ ಬೇರುಗಳು ಹೀಗೆ ವ್ಯಕ್ತಿಗತ ಸಾಧನೆಗಳಿಂದ ಮರೆಯಾಗಿ ಹೋಗುವುದಿಲ್ಲವೆಂಬುದನ್ನು ಅವರ ಅನುಭವಗಳು ಅವರಿಗೆ ತೋರಿಸಿಕೊಟ್ಟಿದ್ದವು. ಆದರೆ ಅವರು ಅದಕ್ಕಾಗಿ ಸಿನಿಕರಾಗಲಿಲ್ಲ; ಗೊಣಗಲಿಲ್ಲ. ಬದಲಿಗೆ ಎಲ್ಲರೊಡನೆ ಹೀಗೆ ನಗುತ್ತಿದ್ದರು. ಆದರೆ ಅವರ ನಗೆಯ ಹಿಂದಿನ ಏಕಾಕಿತನ ಹಲವು ಬಾರಿ ಕಣ್ಣಿಗೆ ರಾಚುವಂತಿತ್ತು. ಅವರ ಹೋರಾಟದ ಹಾದಿಯಲ್ಲಿ ಪಯಣ ಹೊರಟವರೂ ಅವರೊಬ್ಬರೇ. ಕೊನೆಗೆ ಉಳಿದವರೂ ಅವರೊಬ್ಬರೇ ತಾನೆ?



**ಡಾ|| ಕೆ. ವಿ. ನಾರಾಯಣ**, ಕನ್ನಡ ವಿಶ್ವವಿದ್ಯಾಲಯ
ಹಂಪಿ, ವಿದ್ಯಾರಣ್ಯ - ೫೮೩ ೨೭೬

## ಹೊಸೂರು ಮತ್ತು ಎಚ್.ಎನ್.

**ಎ**ರಡು ವರ್ಷಗಳ ಹಿಂದೆ ದಿವಂಗತ ನಿಟ್ಟೂರು ಶ್ರೀನಿವಾಸ ರಾವ್‌ರವರನ್ನು ನೋಡಲು ಟಾಟಾ ಸಿಲ್ಕ್ ಫಾರಂನಲ್ಲಿದ್ದ ಅವರ ಮನೆಗೆ ಹೋಗಿದ್ದೆ. ಜೊತೆಯಲ್ಲಿ ಜಿ.ಆರ್. ಇದ್ದರು. ಅವರು ನನ್ನನ್ನು ನಿಟ್ಟೂರರವರಿಗೆ ಪರಿಚಯಿಸಿದರು. ಆಗ ನನ್ನನ್ನು ಅವರು ವಿಚಾರಿಸುತ್ತಾ, 'ನಿಮ್ಮ ಸ್ಥಳ ಯಾವುದು ?' ಎಂದರು. 'ನಾನು ಬೆಂಗಳೂರಿನವಳೇ ಸರ್. ಇದೇ ಈ ಟಾಟಾ ಸಿಲ್ಕ್ ಫಾರಂನಲ್ಲೇ ನಾನು ಹುಟ್ಟಿ, ಬೆಳೆದು, ಓದಿದ್ದೆಲ್ಲಾ' ಎಂದೆ. ಅವರು 'ಅದಲ್ಲ, ನಿಮ್ಮ ಹಿರಿಯರ ಊರು' ಎಂದರು. 'ಓ! ಅದಾ, ನಮ್ಮದು ಹೊಸೂರು. ತಮಿಳುನಾಡಿನ ಹೊಸೂರಲ್ಲ, ಕೋಲಾರದ್ದು. ಎಚ್. ನರಸಿಂಹಯ್ಯನವರ ಊರು ಹೊಸೂರು' ಎಂದೆ. ಬೆಂಗಳೂರಿನಲ್ಲಿ ಯಾರಿಗಾದರೂ

'ಹೊಸೂರು' ಎಂದರೆ ತಕ್ಷಣ ಗೊತ್ತಾಗುವುದು ತಮಿಳು ನಾಡಿನ ಹೊಸೂರೇ. ಕೋಲಾರದ ಹೊಸೂರು ಎನ್ನುವುದಕ್ಕಿಂತ ಎಚ್.ಎನ್.ರ ಹೊಸೂರು, ಎಂದರೆ ಎಲ್ಲರಿಗೂ ಪರಿಚಿತವಾಗುವುದು.

ನಮ್ಮ ನಾಡಿನಲ್ಲಿ ಎಷ್ಟೋ ಸಾಹಿತಿಗಳ, ಕಲಾವಿದರ, ಮಹನೀಯರ ಹೆಸರಿನಲ್ಲಿ ಅವರೂರಿನ ಹೆಸರುಗಳು ಸೇರಿಕೊಂಡಿವೆ. ಆದರೆ ಇವೆಲ್ಲಕ್ಕಿಂತ ಎಚ್.ಎನ್. ಮತ್ತು ಹೊಸೂರು – ಇವುಗಳ ಸಂಬಂಧ ವಿಶಿಷ್ಟವಾದುದು. ತಮ್ಮ ವ್ಯಕ್ತಿತ್ವದ ಒಂದು ಭಾಗವೆಂಬಂತೆ ಹೊಸೂರನ್ನು ಎಚ್.ಎನ್. ಕಟ್ಟಿದ್ದಾರೆ. ಹೊಸೂರಿನ ಕಣಕಣದಲ್ಲೂ ಅವರ ನೆನಪು, ಸಾಧನೆ, ಕರ್ತೃತ್ವಶಕ್ತಿ ಎದ್ದು ಕಾಣುತ್ತದೆ. ತಾವು ಓದಿದ ಪ್ರೈಮರಿ ಶಾಲೆಯನ್ನು ದುರಸ್ತಿಗೊಳಿಸಿ, ವಿಸ್ತರಿಸಿ ಲಕ್ಷಾಂತರ ರೂಪಾಯಿಗಳನ್ನು ಖರ್ಚು ಮಾಡಿ ಮಾದರಿ ಶಾಲೆಯಾಗಿಸಿದ್ದಾರೆ. ಪ್ರಾಥಮಿಕ ಶಿಕ್ಷಣ ಮುಗಿಸಿ ಪ್ರೌಢಶಾಲೆಯಿಲ್ಲದ ಹೊಸೂರಿನಂತಹ ಗ್ರಾಮದಲ್ಲಿ ಹೆಚ್ಚಿನ ಶಿಕ್ಷಣದ ಅವಕಾಶವಿಲ್ಲದ ಹೆಣ್ಣುಮಕ್ಕಳು, ಕೆಳಜಾತಿ ವರ್ಗದವರಿಗೆ ಬಹಳ ತೊಂದರೆಯಾಗಿತ್ತು. ಅಂತಹವರಿಗೆ ೧೯೬೩ರಲ್ಲಿ ಎಚ್.ಎನ್. ಸ್ಥಾಪಿಸಿದ ಪ್ರೌಢಶಾಲೆ ಒಂದು ಆಶಾಕಿರಣವಾಯಿತು. ಇಂದು ಹೊಸೂರಿನ ನ್ಯಾಷನಲ್ ಹೈಸ್ಕೂಲ್ ಇಡೀ ಜಿಲ್ಲೆಗೆ ಆದರ್ಶ ಪ್ರೌಢಶಾಲೆಯೆನಿಸಿದೆ. ಶಾಲೆಯ ಆವರಣದಲ್ಲಿರುವ 'ವಿಜ್ಞಾನ ಕೇಂದ್ರ'ವನ್ನು ವೀಕ್ಷಿಸಲು ಸುತ್ತಮುತ್ತಲ ಜಿಲ್ಲೆಗಳಿಂದ, ರಜೆ ದಿನಗಳಲ್ಲಿ ವಿದ್ಯಾರ್ಥಿಗಳು ಬರುತ್ತಾರೆ. ನಗರ ಪ್ರದೇಶದ ವಿದ್ಯಾರ್ಥಿಗಳಿಗೂ ಲಭ್ಯವಾಗದ ಎಷ್ಟೋ ಮಾಹಿತಿಗಳನ್ನು ಈ ವಿಜ್ಞಾನ ಕೇಂದ್ರದಿಂದ ಪಡೆಯಬಹುದು. ಸುಮಾರು ಅರವತ್ತು ಲಕ್ಷ ರೂ.ಗಳಷ್ಟು ಖರ್ಚು ಮಾಡಿ ಈ ವಿಜ್ಞಾನದ ಮ್ಯೂಸಿಯಂನ್ನು ಸ್ಥಾಪಿಸಲಾಗಿದೆ. ಇದಕ್ಕಾಗಿ ಇನ್‌ಫೋಸಿಸ್‌ನವರು ನಲವತ್ತು ಲಕ್ಷ ರೂಪಾಯಿಗಳನ್ನು ಖರ್ಚು ಮಾಡಿದ್ದರೆ, ಎಚ್.ಎನ್. ಕಷ್ಟಪಟ್ಟು ಉಳಿದ ಇಪ್ಪತ್ತು ಲಕ್ಷ ರೂಪಾಯಿಗಳನ್ನು ಸಂಗ್ರಹಿಸಿದ್ದಾರೆ. ಅಷ್ಟೇ ಅಲ್ಲದೆ ಇಂದು ವಿದ್ಯಾರ್ಥಿನಿಯರಿಗಾಗಿ ಹಾಸ್ಟೆಲ್ ಮತ್ತು ಬಾಲಕರ ಹಾಸ್ಟೆಲ್, ಎಕ್ಸ್-ರೇ ಸಜ್ಜಿತ ಹೆರಿಗೆ ಆಸ್ಪತ್ರೆ, ಪಶುವೈದ್ಯಕೀಯ ಆಸ್ಪತ್ರೆ – ಎಲ್ಲವೂ ಹೊಸೂರಿನಲ್ಲಿದ್ದು ಆದರ್ಶ ಗ್ರಾಮವೆಂಬ ಪ್ರಶಂಸೆಗೆ ಪಾತ್ರವಾಗಿದೆ. ತಮಗೆ ಬಂದ ಪ್ರಶಸ್ತಿಗಳ ಹಣವನ್ನೆಲ್ಲಾ ಗ್ರಾಮದ ಅಭಿವೃದ್ಧಿಗೆ ಬಳಸಿದ್ದಾರೆ ಎಚ್. ಎನ್.

ಗಾಂಧೀಜಿಯವರ ರಾಮರಾಜ್ಯದ ಕಲ್ಪನೆ ಹೇಗಿತ್ತೋ, ಆದರೆ ಗಾಂಧಿವಾದಿಯಾದ ಎಚ್.ಎನ್. ಹೊಸೂರನ್ನು ತಮ್ಮ ಕಲ್ಪನೆಯ ಲೋಕದಲ್ಲಿ ಕಂಡು ಅದನ್ನು ವಾಸ್ತವಕ್ಕೆ ತರಲು ಶ್ರಮಿಸಿದ್ದಂತೂ ನಿಜ. ಹೊಸೂರು ಗ್ರಾಮವನ್ನು ಸರ್ಕಾರದ 'ಸ್ವಸ್ತಿ ಗ್ರಾಮ ಯೋಜನೆ'ಯಡಿ ತರಬೇಕೆಂದು ಆಸೆಪಟ್ಟು ಅವರಿವರಿಂದ ಕಾಡಿಬೇಡಿ ಐವತ್ತು ಲಕ್ಷ ರೂ. ಹಣವನ್ನು ಕೂಡಿಸಿ ಸರ್ಕಾರದ ಕೈಗಿಟ್ಟರು. ಒಪ್ಪಂದದಂತೆ ಸರ್ಕಾರ ತನ್ನ ಪಾಲಿನ ೫೦ಲಕ್ಷ ರೂಪಾಯಿ ಹಣವನ್ನೂ ಕೊಡಲಿಲ್ಲ, ಜೊತೆಗೆ ಎಚ್.ಎನ್. ಕಷ್ಟಪಟ್ಟು ಸಂಗ್ರಹಿಸಿದ್ದ ಹಣವೂ ಸೂಕ್ತ ರೀತಿಯಲ್ಲಿ ಬಳಕೆಯಾಗದೆ ಹೊಸೂರಿಗೆ ಆ ಲಾಭ ದೊರೆಯಲಿಲ್ಲ. ಈ ಘಟನೆಯಿಂದ ಎಚ್.ಎನ್. ಬಹಳ ನೊಂದುಕೊಂಡರು. ಕಡೆಗಾಲದಲ್ಲಿ ಈ ನೋವು ಅವರನ್ನು ಬಹಳ ಕಾಡಿತಂತೆ. ಭಾರತದ ಪ್ರತಿಯೊಂದು ಗ್ರಾಮದಲ್ಲಿಯೂ ಒಬ್ಬೊಬ್ಬ ಎಚ್.ಎನ್. ಹುಟ್ಟಿಬರಬಾರದೆ ಎಂದೆನಿಸುತ್ತದೆ.

ಎರಡು ವರ್ಷಗಳ ಹಿಂದೆ ಹೊಸೂರಿನಲ್ಲಿ ಸಾಹಿತ್ಯ ಪರಿಷತ್ತಿನ ಕೋಲಾರ ಜಿಲ್ಲಾ ಸಾಹಿತ್ಯ ಸಮ್ಮೇಳನ ನಡೆಯಿತು. ಆ ಕಾರ್ಯಕ್ರಮದಲ್ಲಿ ಎಚ್.ಎನ್. ತಮ್ಮ ಮನೆಯ ಹಬ್ಬವೋ ಎಂಬಂತೆ ಸಂಭ್ರಮದಿಂದ ಓಡಾಡಿ ಭಾಗವಹಿಸಿದ್ದರು. ಆ ಕಾರ್ಯಕ್ರಮಕ್ಕೆಂದು ಹೋದವರಿಗೆಲ್ಲಾ ಕಡ್ಡಾಯವಾಗಿ ಎರಡು ಸಂಗತಿಗಳು ಕಾದಿದ್ದವು. ಒಂದು, ಎಲ್ಲರೂ ಅವರ ನೆಚ್ಚಿನ ಉಪ್ಪಿಟ್ಟನ್ನು ತಿನ್ನಬೇಕಿತ್ತು, ಮತ್ತೊಂದು ಅವರು ವಾಸಿಸುತ್ತಿದ್ದ ಮನೆಗೆ ದರ್ಶನ ನೀಡಬೇಕಿತ್ತು. ಅಂದಿನ ಸಮ್ಮೇಳನಕ್ಕೆ ಭಾಷಣ ಮಾಡಲೆಂದು ಹೋಗಿದ್ದ ನಾನು ಹೊಟ್ಟೆ ತುಂಬ ಮುಂಚೆಯೇ ತಿಂದಿದ್ದರೂ ಉಪ್ಪಿಟ್ಟಿನ ಶಿಕ್ಷೆ ಅನುಭವಿಸಬೇಕಾಗಿ ಬಂತು. ಬಂದವರಿಗೆಲ್ಲಾ ಅವರ ಬಾಲ್ಯದ ಮನೆಯನ್ನು ತೋರಿಸಿ ಕಳುಹಿಸಿಕೊಡುತ್ತಿದ್ದರು. ನನಗೂ ಕೂಡ 'ಜಿ.ಆರ್.ರನ್ನು ಕರ್ಕೊಂಡು ಹೋಗಿ ನನ್ನ ಮನೆಯನ್ನು ತೋರಿಸಿಕೊಂಡು ಬಾಮ್ಮಾ' ಎಂದು ಹೇಳಿದರು.

ಇಂತಹ ಎಚ್.ಎನ್.ರ ಹೊಸೂರಿಗೂ ನನಗೂ ಇರುವ ಸಂಬಂಧ ಗಾಢವಾದುದು. ಹೊಸೂರು ನನ್ನ ತಾತನ ಊರು. ನನ್ನ ಮತ್ತು ಎಚ್.ಎನ್.ರ ಸಂಬಂಧದ ಮೂಲ ಹೊಸೂರಿನ ಬೇರುಗಳಲ್ಲಿದೆ. ನಾನು ನನ್ನ ಬಾಲ್ಯದ ಅಮೂಲ್ಯ ಸಮಯವನ್ನು ಕಳೆದದ್ದು ಹೊಸೂರಿನಲ್ಲಿ. ಬೇಸಿಗೆ ರಜೆ ಮತ್ತು ಇತರ ರಜೆಗಳಲ್ಲಿ ವರ್ಷದಲ್ಲಿ ಎರಡರಿಂದ ಮೂರು ತಿಂಗಳ ಕಾಲ ತಾತನ ಮನೆಯಲ್ಲಿ ಎಲ್ಲ ಮಕ್ಕಳೊಂದಿಗೆ ಅತ್ಯಂತ ಖುಷಿಯಿಂದ ಕಾಲ ಕಳೆಯುತ್ತಿದ್ದೆವು. ಎಚ್.ಎನ್.ರು ಹೊಸೂರಿನಲ್ಲಿ ಕಟ್ಟಿದ ಸಂಸ್ಥೆಗಳು ಮತ್ತು ನಡೆಸಿದ ಕಾರ್ಯಕ್ರಮಗಳು ನನ್ನ ಬೆಳವಣಿಗೆಯ ಹಾದಿಯಲ್ಲಿ ಬಹಳ ಪ್ರಭಾವ ಬೀರಿವೆ. ನ್ಯಾಷನಲ್ ಹೈಸ್ಕೂಲಿನಲ್ಲಿ ನಡೆಯುತ್ತಿದ್ದ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಚಿಕ್ಕವರಿದ್ದಾಗ ತಪ್ಪದೆ ಭಾಗವಹಿಸುತ್ತಿದ್ದೆವು. ನನ್ನ ದೊಡ್ಡಪ್ಪ ನಾಗೇಶ್ವರರಾವ್ ಮತ್ತು ಮಾವ ರಾಮರಾವ್ ಅವರು ಎಚ್.ಎನ್‌ರಿಗೆ ಆಪ್ತ ಸ್ನೇಹಿತರು. ಅವರು ಊರಿಗೆ ಬಂದಾಗ ಅವರ ಮನೆಗಳಲ್ಲಿ ತಂಗುತ್ತಿದ್ದರು. ಆಗಾಗ್ಗೆ ಅವರ ಮನೆಗಳಲ್ಲಿ ನಡೆಸುತ್ತಿದ್ದ ಚರ್ಚೆ, ತರ್ಕ, ಚಿಂತನ-ಮಂಥನಗಳನ್ನು ಕೇಳುತ್ತಾ ನಾ ಬೆಳೆದೆ. ಹೊಸೂರಿನ ನ್ಯಾಷನಲ್ ಹೈಸ್ಕೂಲನ್ನು ನಾನು ಈಗಲೂ ನೆನಪಿಸಿಕೊಳ್ಳುವುದು ಅದು ನಮ್ಮಲ್ಲಿ ಹುಟ್ಟಿಸಿದ ರಂಗಾಸಕ್ತಿಗೆ. ಎಪ್ಪತ್ತರ ದಶಕದ ಆರಂಭದಲ್ಲಿ ಇರಬೇಕು, ಈ ಶಾಲೆಯಲ್ಲಿ ರಂಗಶಿಬಿರವನ್ನು ಏರ್ಪಡಿಸಿ ನಾಟಕ ಪ್ರಯೋಗ ಮಾಡಿದ್ದರು. ಈ ಶಿಬಿರವನ್ನು ಪ್ರಸಿದ್ಧ ರಂಗನಿರ್ದೇಶಕಿ ಪ್ರೇಮಾಕಾರಂತರು ನಡೆಸಿಕೊಟ್ಟಿದ್ದರು. ಆ ಹಳ್ಳಿಯ ಮಕ್ಕಳಿಗೆಂದು ಪ್ರೇಮಾಕಾರಂತರು 'ಅಲಿಬಾಬಾ ಮತ್ತು ನಲವತ್ತು ಜನ ಕಳ್ಳರು' ನಾಟಕವನ್ನು ನಿರ್ದೇಶಿಸಿದ್ದರು. ಇವೆಲ್ಲವನ್ನೂ ಹತ್ತಿರದಿಂದ ನೋಡುತ್ತಾ ಬೆಳೆದೆ.

ನಾನು ಎಚ್.ಎನ್.ರ ಶಿಷ್ಯೆಯಾಗದಿದ್ದರೂ ಅವರ ಊರಿನವಳೆಂದು ನನ್ನ ಮೇಲೆ ಅವರಿಗೆ ವಿಶ್ವಾಸ. ಈ ವಿಶ್ವಾಸದ ಲಾಭ ಪಡೆದವಳು ನಾನು. ಬೆಂಗಳೂರಿನಲ್ಲಿ ನಮ್ಮ 'ಅಚಲ', 'ಜಾಗೃತಿ'ಯ ಎಲ್ಲ ಕಾರ್ಯಕ್ರಮಗಳಿಗೆ ನ್ಯಾಷನಲ್ ಕಾಲೇಜಿನ ಸಭಾಂಗಣವನ್ನು ಉಚಿತವಾಗಿ ಪಡೆಯುತ್ತಿದ್ದೆ. ನ್ಯಾಷನಲ್ ಕಾಲೇಜಿನ ಪ್ರಿನ್ಸಿಪಾಲ್ ಯಾರೇ ಆಗಿರಲಿ, ಎಚ್.ಎನ್. ಅವರಿಗೆ ಫೋನ್ ಮಾಡಿ, 'ಗಾಯತ್ರಿ ನಿಮ್ಮ ಹತ್ತಿರ ಬರುತ್ತಾರೆ, ಅವರಿಗೆ ಹಾಲ್ ಫ್ರೀಯಾಗಿ ಕೊಟ್ಟುಬಿಡೀಪ್ಪಾ. ನಮ್ಮೂರ ಹುಡುಗಿ' ಎಂದು ಸೇರಿಸುತ್ತಿದ್ದರು. ಅವರ ಊರಿನವರೆಂಬ ಪ್ರೀತಿ ಅವರಿಗೆ ವಿಶಾಲ ವೃತ್ತವನ್ನು ನಿರ್ಮಿಸಿತ್ತು. ಒಮ್ಮೆ ಒಂದು ಸ್ವಾರಸ್ಯಕರ ಘಟನೆ ನಡೆಯಿತು. ಅದೊಂದು ಕಾಲೇಜು ಶಿಕ್ಷಕರ ಮತ್ತು ಆಡಳಿತ ಮಂಡಳಿಯ ಪ್ರತಿನಿಧಿಗಳ ಸಭೆ ನಡೆಯುವುದಿತ್ತು. ಆಗ ನನ್ನ ಗಂಡ ಬುಕ್ಪಾದ ಅಧ್ಯಕ್ಷರಾಗಿದ್ದರು. ಸಭೆಗೆ ಮುಂಚೆ ಅಲ್ಲಿಗೆ ಬಂದವರೊಬ್ಬರಿಗೆ ನನ್ನ ಗಂಡನನ್ನು ಪರಿಚಯಿಸುತ್ತಾ, 'ಈ ವೆಂಕಟೇಶ ಮೂರ್ತಿ ನಮ್ಮೂರ ಅಳಿಯಾಪ್ಪ' ಎಂದರಂತೆ. ತಕ್ಷಣ ನನ್ನ ಗಂಡ, 'ನಾನು ಇಡೀ ಊರಿಗೆ ಅಳಿಯ ಅಲ್ಲ ಸಾರ್, ಒಬ್ಬರಿಗೆ ಮಾತ್ರ ಎಂದಿದ್ದರಂತೆ!

ಪ್ರಶ್ನಾರ್ಥಕ ಚಿಹ್ನೆ ಎಚ್.ಎನ್.ರ ವ್ಯಕ್ತಿತ್ವದ ಗುರುತು. ಎಲ್ಲವನ್ನೂ ಪ್ರಶ್ನಿಸದೇ ಒಪ್ಪಬಾರದೆಂಬ ಅವರ ವೈಚಾರಿಕತೆ ನನಗೂ ಮೆಚ್ಚು, ಬಹುಶಃ ಅದರಿಂದಲೇ ಏನೋ, ನನ್ನ ಪರಿಸರದ ಎಲ್ಲ ವಿದ್ಯಮಾನಗಳನ್ನು ಪ್ರಶ್ನಿಸುತ್ತಾ ಹಿರಿಯರಿಗೆ ಮುಜುಗರ, ಅಹಿತವನ್ನು ಉಂಟುಮಾಡಿ 'ಅಧಿಕ ಪ್ರಸಂಗಿ' ಎಂದೆನಿಸಿಕೊಂಡೂ ಇದ್ದೇನೆ. ನನ್ನ ಈ ಗುಣದ ಎಚ್.ಎನ್.ರನ್ನು ಪ್ರಶ್ನಿಸುವುದನ್ನೂ ಬಿಡಲಿಲ್ಲ, ಕೆಲವೊಮ್ಮೆ ಅವೈಜ್ಞಾನಿಕವೆನಿಸುವ ಅವರ ವೈಚಾರಿಕತೆಯನ್ನು ಪ್ರಶ್ನಿಸುತ್ತಿದ್ದೆ, ಛೇಡಿಸುತ್ತಿದ್ದೆ, ಕೆಲವೊಮ್ಮೆ ರೇಗಿಸುತ್ತಿದ್ದೆ, ಕೂಡ. ಇಬ್ಬರ ವಿಚಾರಗಳಲ್ಲೂ ಭಿನ್ನತೆಯಿದ್ದರೂ ಪರಸ್ಪರ ಗೌರವವಿತ್ತು. ಪ್ರತಿ ಬಾರಿ ಭೇಟಿಯಾದಾಗಲೂ ಹೊಸದಾಗಿಯೇ ಜಗಳ ಆರಂಭಿಸುತ್ತಿದ್ದೆವು. ಅಂತಹದೊಂದು ಘಟನೆ, ಬಹುಶಃ ಅದೇ ಕೊನೆಯ ಘಟನೆ ನಮ್ಮ ನಡುವೆ ನಡೆಯಿತು. ಆರು ತಿಂಗಳ ಹಿಂದೆ ನ್ಯಾಷನಲ್ ಕಾಲೇಜಿನ ಎಚ್.ಎನ್. ಹಾಲ್‌ನಲ್ಲಿ ದೇವಿಪ್ರಸಾದ್ ಚಟ್ಟೋಪಾಧ್ಯಾಯರ ನೆನಪಿಗೆ ವಿಚಾರ ಸಂಕಿರಣವನ್ನು ಏರ್ಪಡಿಸಿದ್ದೆವು. ಕಾರ್ಯಕ್ರಮದ ಸಮಯದಲ್ಲಿ ಅಲ್ಲಿಯೇ ಅಡ್ಡಾಡುತ್ತಿದ್ದ ಅವರು ಕಾರ್ಯಕ್ರಮ ಮುಗಿದ ನಂತರ ಹರಟೆ ಹೊಡೆಯಲು ನಮ್ಮ ಬಳಿ ಬಂದರು. ಜೋಕ್ ಮಾಡಿದರು. ಕೊನೆಗೆ ನನ್ನನ್ನುದ್ದೇಶಿಸಿ, ''ಅಲ್ಲಮ್ಮ, ಏನನ್ಯಾಯ, 'X' ರ ಮಗಳು ಯಾವುದೋ ಧರ್ಮದವನ ಮದುವೆ ಮಾಡಿಕೊಂಡಳಂತೆ'' ಅಂದರು. ಆಡಿದ ಮಾತಿನ ವರಸೆಯಿಂದ ನನಗೆ ಶಾಕ್ ಆಯಿತು. ಏನು ಉತ್ತರಿಸುವುದೆಂದು ಚಿಂತಿಸುತ್ತಿರುವಾಗ ತಕ್ಷಣ ನನ್ನ ಜೊತೆಯಲ್ಲಿದ್ದ ಜಿ.ಆರ್.ರವರು 'ಯಾರಾದರೇನು ಒಬ್ಬ, ಗಂಡಸನ್ನ ತಾನೆ ಮದುವೆಯಾಗಿರೋದು?' ಎಂದರು. ತಕ್ಷಣ ಎಚ್.ಎನ್, 'ಹಾಗಲ್ಲಪ್ಪ, ಹುಡುಗಿ ಎಂಜಿನಿಯರ್, ಹುಡುಗ ಎಸ್.ಎಸ್.ಎಲ್.ಸಿ', ಅಂತ ತೇಲಿಸಿದರು. ನಾನು ಸುಮ್ಮನಿರದೆ, ''ಅದೇನು ಬಿಡಿ ಸರ್, ಈಗ 'ರಂಗ SSLC' ಅಂತ ಸಿನಿಮಾ ಬಂದಿದೆ. ಅದರಲ್ಲೂ ಹುಡುಗಿ ಗ್ರಾಜುಯೇಟ್, ಹುಡುಗ SSLC ಫೇಲ್'' ಎಂದೆ. ತಕ್ಷಣ 'ಸುಮ್ಮನಿರಮ್ಮ, ನಾನೇನೋ ಸೀರಿಯಸ್ಸಾಗಿ ಹೇಳಿದರೆ, ತಮಾಷೆ ಮಾಡ್ತೀಯ' ಎಂದು ನಗುತ್ತಾ ನನ್ನ ಬಾಯಿ ಮುಚ್ಚಿಸಿದರು. ಇದೇ ನನ್ನ ಮತ್ತು ಎಚ್.ಎನ್.ರವರ ಕೊನೆಯ ತಮಾಷೆಯ ಮಾತುಕತೆ.

ಇಂತಹ ತಮಾಷೆ ಮಾಡುವ ಎಚ್.ಎನ್. ಇನ್ನೆಲ್ಲಿ? ಹಾಗೆಯೇ 'ನಮ್ಮೂರ ಹುಡುಗಿ' ಎಂದು ಕರೆದು ಬೆನ್ನುತಟ್ಟಿ ನನ್ನ ಕಾರ್ಯಕ್ರಮಗಳಿಗೆ ನೆರವು, ಬೆಂಬಲ ನೀಡುತ್ತಿದ್ದ ಎಚ್.ಎನ್. ಇನ್ನು ಕೇವಲ ನೆನಪು ಮಾತ್ರ.

ಡಾ|| ಎನ್. ಗಾಯತ್ರಿ, ನಂ. ೧೦೮, ಸ್ಕೈಲೈನ್ ಸುರಭಿ, ವಿದ್ಯಾಪೀಠ ರಸ್ತೆ, ಬೆಂಗಳೂರು - ೮೫

### ಹನಿಗವನಗಳಿಗೆ ಆಹ್ವಾನ

ಗುರುರಾಜ ಪ್ರಕಾಶನದಿಂದ ಈಗ ೨೧ನೇ ಪ್ರಕಟಣೆಯಾಗಿ ಹಾಸ್ಯ ಹನಿಗವನ ಸಂಕಲನವನ್ನು ಸಹಕಾರಿ ತತ್ವದ ಆಧಾರದ ಮೇಲೆ ಹೊರತರಲು ಉದ್ದೇಶಿಸಿದೆ. ಒಬ್ಬರು ಎಷ್ಟು ಬೇಕಾದರೂ ಹನಿಗವನಗಳನ್ನು ಕಳಿಸಬಹುದು. ಆಸಕ್ತಿಯುಳ್ಳವರು ಆರು ಸಾಲು ಮೀರದ ಹಾಸ್ಯ ಹನಿಗವನಗಳನ್ನು ಈ ಕೆಳಗಿನ ವಿಳಾಸಕ್ಕೆ ದಿನಾಂಕ ೩೧-೦೩-೨೦೦೫ ರೊಳಗೆ ಕಳುಹಿಸಲು ಕೋರಿದೆ.

**ಗುರುರಾಜ ಪ್ರಕಾಶನ**
೨೩೬, ೧೧ನೇ ಮುಖ್ಯರಸ್ತೆ, ಐಜೇಸ್ ಕಾಲೋನಿ, ಅರೇಹಳ್ಳಿ
ಸುಬ್ರಹ್ಮಣ್ಯಪುರ ಅಂಚೆ, ಬೆಂಗಳೂರು-೫೬೦ ೦೬೧

# ಎಚ್.ಎನ್.ರವರ ರಾಜಕೀಯ ನಿಲುವು

**ನಾ**ವು ಎಚ್.ಎನ್.ನ ಮೊದಲು ನೋಡಿದ್ದು ೧೯೩೮ರಲ್ಲಿ. ಆಗ ನಾವಿಬ್ಬರೂ ಬೆಂಗಳೂರಿನ ಸರ್ಕಾರಿ ಇಂಟರ್‌ಮೀಡಿಯೆಟ್ ಕಾಲೇಜಿನಲ್ಲಿ ಜೂನಿಯರ್ ತರಗತಿಯ 'ಎ' ಸೆಕ್ಷನ್ನಿನಲ್ಲಿದ್ದೆವು. ಎಚ್.ಎನ್ನಿನಂತೆ ನಾನೂ ಪೂರ್ಣಖಾದೀಧಾರಿಯಾಗಿದ್ದೆ. ಅವರು ನ್ಯಾಷನಲ್ ಹೈಸ್ಕೂಲಿನಲ್ಲಿದ್ದಾಗ ೧೯೩೬ರಲ್ಲಿ ಗಾಂಧೀಜಿಯವರು ಅವರ ಹೆಗಲ ಮೇಲೆ ಕೈಯಿಟ್ಟು ಮಾತನಾಡಿಸಿದ್ದರು. ಆ ಶಾಲೆಯ ಪಾಠೇತರ ಕಾರ್ಯಕ್ರಮಗಳಿಂದ ಉಜ್ವಲ ರಾಷ್ಟ್ರೀಯತೆ, ಗಾಂಧಿ-ನೆಹ್ರೂ ಮುಂತಾದ ಮುಖಂಡರ ಬಗ್ಗೆ ಅಪಾರ ಗೌರವ, ದೇಶದ ರಾಜಕೀಯ ಘಟನೆಗಳ ಬಗ್ಗೆ ಸಾಕಷ್ಟು ತಿಳುವಳಿಕೆ ಇವೆಲ್ಲವೂ ಅದರಲ್ಲಿದ್ದವು. ಆದರೆ ನನ್ನ ಹಾಗೆ ವಿದ್ಯಾರ್ಥಿ ಸಮ್ಮೇಳನ ಮುಂತಾದ ವಿದ್ಯಾರ್ಥಿ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿರಲಿಲ್ಲ. ಕಾಲವನ್ನೆಲ್ಲಾ ವ್ಯಾಸಂಗಕ್ಕೇ ಉಪಯೋಗಿಸುತ್ತಿದ್ದರು. ಏಕೆಂದರೆ ಉತ್ತಮ ದರ್ಜೆಯಲ್ಲಿ ತೇರ್ಗಡೆಯಾಗದಿದ್ದರೆ, ಉಚಿತ ಹಾಸ್ಟಲುಗಳಲ್ಲಿ ಪ್ರವೇಶ ಸಿಕ್ಕದೆ ವಿದ್ಯಾಭ್ಯಾಸವನ್ನೇ ನಿಲ್ಲಿಸಬೇಕಾಗಿತ್ತು.

೧೯೪೨ನೆಯ ವರ್ಷವು ಅವರಿಗೆ ಒಂದು ದೊಡ್ಡ ಅಗ್ನಿಪರೀಕ್ಷೆಯನ್ನು ತಂದೊಡ್ಡಿತು. ಆಗ ನಾವಿಬ್ಬರೂ ಸೆಂಟ್ರಲ್ ಕಾಲೇಜಿನಲ್ಲಿ ಆನರ್ಸ್ ವಿಭಾಗದ ಮೂರನೆಯ (ಅಂದರೆ ಕೊನೆಯ) ವರ್ಷಕ್ಕೆ ಕಾಲಿಟ್ಟಿದ್ದೆವು. ಹಳ್ಳಿಯಲ್ಲಿ ಅತಿಕಷ್ಟ ಜೀವನವನ್ನು ಸಾಗಿಸುತ್ತಿದ್ದ ತಾಯಿ ತಂಗಿಯರನ್ನ ನೋಡಿಕೊಳ್ಳಲು ಬೇಗನೆ ವಿದ್ಯಾಭ್ಯಾಸ ಮುಗಿಸಿ ಉದ್ಯೋಗಕ್ಕೆ ಸೇರಬೇಕೆಂಬ ತನ್ನ ಏಕೈಕ ಗುರಿಯನ್ನು ಕೈಬಿಟ್ಟು ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಎರಡು ಬಾರಿ ಜೈಲಿಗೆ ಹೋದರು. ರಸಾಯನಶಾಸ್ತ್ರದ ವಿಭಾಗದಲ್ಲಿ ನನ್ನ ಸಹಪಾಠಿಯಾಗಿದ್ದ ಎಂ. ಎ. ಸೇತೂರಾವ್ ಕೂಡ ಬಂಧಿತರಾದರು. ಕಮ್ಯುನಿಸ್ಟ್ ಪಕ್ಷದ ಪ್ರಭಾವದಲ್ಲಿದ್ದ ಸ್ಟೂಡೆಂಟ್ಸ್ ಫೆಡರೇಷನ್ನಿನ ವಿದ್ಯಾರ್ಥಿಗಳು ಚಳವಳಿಯಲ್ಲಿ ಭಾಗವಹಿಸಲಿಲ್ಲ. ಹೀಗಾಗಿ ನಾನು ಜೈಲಿಗೆ ಹೋಗಲಿಲ್ಲ. ಆದರೆ ಆ ವರ್ಷದ ಡಿಸೆಂಬರ್ ಕೊನೆಯಲ್ಲಿ ನನ್ನ ಸಹಪಾಠಿಗಳು ಬಿಡುಗಡೆ ಆಗುವವರೆಗೆ ನಾನೂ ತರಗತಿಗೆ ಹೋಗಲಿಲ್ಲ.

ನಾನೂ ಎಚ್.ಎನ್. ಇಬ್ಬರೂ ೧೯೪೬ರಲ್ಲಿ ನ್ಯಾಷನಲ್ ಕಾಲೇಜಿನ ಅಧ್ಯಾಪಕರಾದೆವು. ಎಚ್.ಎನ್.ಗೆ ೧೯೪೨ರಲ್ಲಿ ಕಮ್ಯುನಿಸ್ಟರ ಬಗ್ಗೆ ಉಂಟಾಗಿದ್ದ ಕೋಪ ತಾತ್ಸಾರಗಳು ಇನ್ನೂ ಅಡಗಿರಲಿಲ್ಲ. ೧೯೪೭ರಲ್ಲಿ ಸ್ವಾತಂತ್ರ್ಯ ಬರುವವರೆಗೂ ಎರಡು ವರ್ಷ ಆಗಸ್ಟ್ ೯ ರಂದು ಪಾಠಕ್ಕೆ ಮುಂಚೆ ವಿದ್ಯಾರ್ಥಿಗಳನ್ನು ಸಭೆಸೇರಿಸಿ ಒಂದೈದು ನಿಮಿಷ ಕ್ವಿಟ್ ಇಂಡಿಯಾ ಚಳವಳಿಯ ಬಗ್ಗೆ ಮಾತನಾಡುತ್ತಿದ್ದರು. ಆಗ ಗಾಂಧೀ-ನೆಹ್ರೂ ಜೊತೆಗೆ ಜಯಪ್ರಕಾಶ್ ನಾರಾಯಣ್, ಅರುಣಾ ಅಸಫ್ ಅಲಿ ಮುಂತಾದ ಸೋಷಲಿಸ್ಟ್ ನಾಯಕರ ಬಗ್ಗೆ ಅವರಿಗೆ ಬಹಳ ಗೌರವವಿತ್ತು. ಏಕೆಂದರೆ ಸೋಷಲಿಸ್ಟರು ೧೯೪೨ರಲ್ಲಿ ಕಾಂಗ್ರೆಸ್ ಮುಖಂಡರು ಜೈಲಿನಲ್ಲಿದ್ದಾಗ, ಒಂದಷ್ಟು ಕಾಲ ತಲೆಮರೆಸಿಕೊಂಡು ಹೋರಾಟವನ್ನು ಸಂಘಟಿಸಿದ್ದರು.

ಒಂದು ವರ್ಷದಲ್ಲೇ ನನ್ನ ಮತ್ತು ಎಚ್.ಎನ್. ಮಧ್ಯೆ ಒಳ್ಳೆಯ ಸ್ನೇಹ ಬೆಳೆದಿತ್ತಾದರೂ, ನಾವು ರಾಜಕೀಯ ವಿಷಯ ಮಾತನಾಡುತ್ತಿರಲಿಲ್ಲ. ೧೯೪೭ರ ಸೆಪ್ಟೆಂಬರ್‌ನಲ್ಲಿ ನಡೆದ ಮೈಸೂರು ಚಲೋ ಹೋರಾಟದಿಂದ ಈ ಸ್ಥಿತಿ ಬದಲಾಯಿಸಿತು. ಅದರಲ್ಲಿ ಭಾಗವಹಿಸಲು ನಾವಿಬ್ಬರೂ ಕಾಲೇಜಿಗೆ ರಾಜೀನಾಮೆ ಇತ್ತೆವು. ಹಿಂದಿನದೆಲ್ಲಾ ಮರೆತು ಒಟ್ಟಿಗೆ ಕೆಲಸ ಮಾಡುವಷ್ಟರಮಟ್ಟಿಗೆ ನಮ್ಮ ಸ್ನೇಹ ಬೆಳೆದಿತ್ತು. ''ಇಂಕಿಲಾಬ್'' ಎಂಬ ಒಂದು ಭೂಗತ ಪತ್ರಿಕೆಯನ್ನು ಸೈಕ್ಲೋಸ್ಟೈಲ್ ಮಾಡಿ ಹಂಚುತ್ತಿದ್ದೆವು.

ಮತ್ತೆ ನಾವು ಕಾಲೇಜಿಗೆ ವಾಪಸಾದ ಮೇಲೆ, ನಾವು ರಾಜಕೀಯ ವಿಷಯಗಳನ್ನೂ ಚರ್ಚಿಸಲು ಪ್ರಾರಂಭಿಸಿದೆವು. ೧೯೫೨ನೆಯ ಸಾರ್ವತ್ರಿಕ ಚುನಾವಣೆಯಲ್ಲಿ ಮದರಾಸಿನಲ್ಲಿ ಕಮ್ಯುನಿಸ್ಟರಿಗೆ ದೊರೆತ ಗಮನಾರ್ಹವಾದ ಜಯವು ಎಚ್.ಎನ್. ಮೇಲೆ ಒಳ್ಳೆಯ ಪರಿಣಾಮ ಉಂಟುಮಾಡಿತು. ಅಲ್ಲದೆ ಅಷ್ಟುಹೊತ್ತಿಗೆ ಅರುಣಾ ಅಸಫ್ ಅಲಿ ಮತ್ತು ಕೆಲವು ಎಡಸೋಷಲಿಸ್ಟರು ಕಮ್ಯುನಿಸ್ಟರೊಡನೆ ಒಂದುಗೂಡಿ ಕೆಲಸ ಮಾಡಲಾರಂಭಿಸಿದ್ದರು. ಇದರ ಜೊತೆಗೆ ಎ. ಕೆ. ಗೋಪಾಲನ್, ಈ. ಎಂ. ಎಸ್. ನಂಬೂದರಿಪಾದ್, ಪಿ. ಸುಂದರಯ್ಯ, ಟಿ. ನಾಗಿರೆಡ್ಡಿ ಇವರುಗಳು ಪ್ರಸಿದ್ಧಿಗೆ ಬಂದಿದ್ದರು. ಕಮ್ಯುನಿಸ್ಟ್ ಪಕ್ಷಗಳು ತ್ಯಾಗಗಳಿಂದ ಕೂಡಿದ ಬಡ ಜನರ ಪಕ್ಷವೆಂದು ಎಚ್.ಎನ್.ಗೆ ಅರಿವಾಯಿತು. ೧೯೪೨ರ ''ದ್ರೋಹ''ವು ಭಿನ್ನಾಭಿಪ್ರಾಯದ ಮಟ್ಟಕ್ಕೆ ಇಳಿಯಿತು.

೧೯೬೦ರಲ್ಲಿ ಪಿಎಚ್.ಡಿ. ಪಡೆದು ಅಮೆರಿಕದಿಂದ ಎಚ್.ಎನ್. ಹಿಂತಿರುಗಿದ ಮೇಲೆ ಅವರಲ್ಲಿ ಭಾರೀ ಬದಲಾವಣೆಯನ್ನು ಕಾಣಬಹುದಾಗಿತ್ತು. ರಾಜಕೀಯ ವಿಷಯಗಳ ಬಗ್ಗೆ ಬಹಿರಂಗವಾಗಿ ಮಾತನಾಡುವುದನ್ನು ಬಿಟ್ಟರು. ವಿಜ್ಞಾನವೇ ಅವರಿಗೆ ಸರ್ವಸ್ವವಾಯಿತು. ವೈಜ್ಞಾನಿಕ ಮನೋಭಾವವನ್ನು ಜನರಲ್ಲಿ ಉಂಟುಮಾಡುವುದೇ ಅವರ ಮುಖ್ಯ ಗುರಿಯಾಯಿತು. ಇದರ ಅಂಗವಾಗಿ ವೈಚಾರಿಕತೆ ಅವರಲ್ಲಿ ಪ್ರಬಲವಾಯಿತು. ಮೂಢನಂಬಿಕೆಗಳು, ಪವಾಡಗಳು, ಜಾತಿಪದ್ಧತಿ ಇವುಗಳನ್ನು ಖಂಡಿಸುವುದರ ಜೊತೆಗೆ ಬಡಜನರ ಶೋಷಣೆ, ದಾರಿದ್ರ್ಯ ಇವುಗಳ ಬಗ್ಗೆಯೂ ಮಾತನಾಡಲು ಪ್ರಾರಂಭಿಸಿದರು. ಸಹಜವಾಗಿಯೇ, ಇದೇ ಗುರಿಯುಳ್ಳ ಎಡಪಕ್ಷಗಳ ಬಗ್ಗೆ ಅವರಿಗೆ ಸಹಾನುಭೂತಿ ಉಂಟಾಯಿತು. ಬಹಳ ವರ್ಷದಿಂದ ಅವರಿಗೆ ಎಂ. ಎಸ್. ಕೃಷ್ಣನ್ ಗೊತ್ತಿತ್ತು. ಇಂಜನೀರಿಂಗ್ ಪದವೀಧರನಾಗಿ ಉದ್ಯೋಗಕ್ಕೆ ಹೋಗದೆ ಕಾರ್ಮಿಕರಿಗಾಗಿ ತನ್ನ ಜೀವನವನ್ನೇ ಅರ್ಪಿಸಿದ ಕೃಷ್ಣನ್ ಬಗ್ಗೆ ಬಹಳ ಗೌರವವಿತ್ತು.

೧೯೭೫ರಲ್ಲಿ ಇಂದಿರಾ ಗಾಂಧಿಯ ವಿರೋಧವಾಗಿ ಮಹಾ ಹೋರಾಟವನ್ನು ಪ್ರಾರಂಭಿಸಿ, ಸೈನಿಕರು ಇಂದಿರಾ ಗಾಂಧಿಯ ಆಜ್ಞೆಯನ್ನು ಉಲ್ಲಂಘಿಸಬೇಕೆಂದು ಜಯಪ್ರಕಾಶ್ ನಾರಾಯಣ್ ಕರೆಕೊಟ್ಟಿದ್ದನ್ನು ಬೇಜವಾಬ್ದಾರಿ ಎಂದು ಎಚ್.ಎನ್. ಟೀಕಿಸುತ್ತಿದ್ದರು. ಅವರು ಬಹಿರಂಗವಾಗಿ ಏನೂ ಹೇಳದಿದ್ದರೂ, ನನ್ನಂತಹ ಆಪ್ತಮಿತ್ರರೊಂದಿಗೆ ತಮ್ಮ ಅನಿಸಿಕೆಗಳನ್ನು ಮುಚ್ಚುಮರೆಯಿಲ್ಲದೆ ಹೇಳುತ್ತಿದ್ದರು. ಜಯಪ್ರಕಾಶರು ಜನಸಂಘದಿಂದ ಹಿಡಿದು ಸೋಷಲಿಸ್ಟರವರೆಗೆ ಎಲ್ಲರನ್ನೂ ಕೂಡಿಸಿ ಜನತಾ ಪಕ್ಷವನ್ನು ಕಟ್ಟಿದ್ದು ಎಚ್.ಎನ್.ಗೆ ಸರಿಬೀಳಲಿಲ್ಲ. ಕೋಮುವಾದಿ ಶಕ್ತಿಗಳಿಗೆ ಇದರಿಂದ ಒಂದು ಗೌರವವಾದ ಜಾಗ ಸಿಕ್ಕಿತೆಂದು ಅವರು ಅಭಿಪ್ರಾಯಪಟ್ಟರು. ಜಯಪ್ರಕಾಶರ ವಿಷಯದಲ್ಲಿ ಅವರ ಅಸಮಾಧಾನ ಇನ್ನೂ ಹೆಚ್ಚಿತು.

ಇಂದಿರಾ ಗಾಂಧಿಯವರ ತುರ್ತುಪರಿಸ್ಥಿತಿಯ ಕಾಲದಲ್ಲಿ ನಡೆದ ''ವಿಪರೀತಗಳ''ನ್ನೂ ಅವರ ಸರ್ವಾಧಿಕಾರ ಮನೋಭಾವವನ್ನೂ ಎಚ್.ಎನ್. ಟೀಕಿಸಿದರೂ, ಅವರ ಮೇಲೆ ಒಂದು ರೀತಿಯ ಗೌರವವಿತ್ತು. ಅಮೆರಿಕದಂತಹ ಪ್ರಬಲ ದೇಶಗಳ ನಾಯಕರನ್ನು ಧೈರ್ಯವಾಗಿ ಎದುರಿಸಬಲ್ಲ ಇಂದಿರಾ ಗಾಂಧಿಯವರ ಸಾಮರ್ಥ್ಯವನ್ನು ಎಚ್.ಎನ್. ಮೆಚ್ಚುತ್ತಿದ್ದರು. ಆದರೆ ಅವರು ಯಾವ ರಾಜಕೀಯ ಮುಖಂಡರಿಗಾಗಲಿ, ರಾಜಕೀಯ ಪಕ್ಷಕ್ಕಾಗಲಿ ತಮ್ಮ ನಿಷ್ಠೆಯನ್ನು ಅರ್ಪಿಸಿದವರಲ್ಲ. ಗುಂಡೂರಾವ್ ರಾಜ್ಯದ ಮುಖ್ಯ ಮಂತ್ರಿಯಾಗಿದ್ದಾಗ, ಎಚ್.ಎನ್.ರನ್ನು ವಿಧಾನ ಪರಿಷತ್ತಿಗೆ ನಾಮಕರಣ ಮಾಡಿ, ಪರಿಷತ್ತಿನ ಕಾಂಗ್ರೆಸ್ ಪಕ್ಷಕ್ಕೆ ಸೇರಬೇಕೆಂದು ಆಗ್ರಹಿಸಿದರು. ಅದಕ್ಕೆ ಮಣಿಯದೆ, ವಿಧಾನ ಪರಿಷತ್ತಿನಲ್ಲಿ ಎಚ್.ಎನ್. ಸ್ವತಂತ್ರರಾಗಿಯೇ ಉಳಿದರು.

ಎಚ್. ಎನ್. ಒಬ್ಬ ಗಾಂಧೀವಾದಿಯೆಂದು ಹೇಳುವುದು ವಾಡಿಕೆ. ಅವರೂ ಇದನ್ನು ನಿರಾಕರಿಸುತ್ತಿರಲಿಲ್ಲ. ಆದರೆ ಇದು ನೂರಕ್ಕೆ ನೂರು ಸರಿ ಎಂದು ನಾನು ಹೇಳಲಾರೆ. ಅವರಲ್ಲಿ ಗಾಂಧಿವಾದಿಯ ಗುಣಗಳು ಅನೇಕವಿದ್ದರೂ ಕೂಡ ಅವರ ವೈಜ್ಞಾನಿಕ ಮನೋಭಾವ ಮತ್ತು ವೈಚಾರಿಕತೆ ಅವರನ್ನು ಒಬ್ಬ ಸ್ವತಂತ್ರ ಚಿಂತಕರನ್ನಾಗಿ ಮಾಡಿತ್ತು. ಉದಾಹರಣೆಗೆ ವಿನೋಬಾರವರ ಭೂದಾನ ಚಳವಳಿ ವಿಫಲವಾಗಿದ್ದನ್ನು ಹೇಳಿ, ಅದೇ ಕೆಲಸವನ್ನು ಒಬ್ಬ ಮುಖ್ಯಮಂತ್ರಿ ತೃಪ್ತಿಕರವಾಗಿ ಮಾಡಲು ಸಾಧ್ಯ ಎಂದು ತಮ್ಮ ಆತ್ಮಕಥೆಯಲ್ಲಿ ಹೇಳಿದ್ದಾರೆ. ಶೋಷಣೆಯನ್ನು ಕೊನೆಗಾಣಿಸಲು ಅಧಿಕಾರವನ್ನು ಹಿಡಿಯಬೇಕು ಎಂಬ ಮಾರ್ಕ್ಸ್ ವಾದದ ತತ್ವವನ್ನು ಬೇರೆ ಮಾತಿನಲ್ಲಿ ಹೇಳಿದ್ದಾರೆ. ಆದರೆ, ಕಾರ್ಮಿಕರು ದೀರ್ಘಕಾಲ ಮುಷ್ಕರ ನಡೆಸಿ ಕಷ್ಟಪಡುತ್ತಿದ್ದಾಗ, ಸರ್ಕಾರದೊಂದಿಗೆ ಸಂಧಾನಕ್ಕಾಗಿ ವಿಧಾನ ಸಭೆಗೆ ಹೋಗಿದ್ದಾಗ ಅಲ್ಲಿ ಸರ್ಕಾರದವರು ಕೊಟ್ಟ ''ಪುಷ್ಕಳವಾದ ಉಪಹಾರ''ವನ್ನು ಅವರು ಸ್ವೀಕರಿಸಿದ್ದು ಎಚ್.ಎನ್.ಗೆ ಸರಿ ಬೀಳಲಿಲ್ಲ. ಗಾಂಧೀಜಿ ಹಾಗೆ ಮಾಡುತ್ತಿರಲಿಲ್ಲವೆಂದು ತಮ್ಮ ಆತ್ಮ ಕಥೆಯಲ್ಲಿ ಹೇಳಿದ್ದಾರೆ. ಲೆನಿನ್ ಬಗ್ಗೆ ಅವರಿಗೆ ಅಪಾರ ಗೌರವ ವಿತ್ತು. ಕೆಲವು ತಿಂಗಳುಗಳ ಹಿಂದೆ ಲೆನಿನ್ ಬಗ್ಗೆ ಎರಡು ಸಣ್ಣ ಪುಸ್ತಕಗಳನ್ನು ಓದುವುದಕ್ಕಾಗಿ ನನ್ನಿಂದ ತರಿಸಿಕೊಂಡಿದ್ದರು. ಸೋವಿಯತ್ ರಷ್ಯಾದ ಸಮಾಜವಾದ ಕುಸಿದು ಬಿದ್ದು ಈಗ ಬಂಡವಾಳಶಾಹಿ ಸರ್ವಾಂತರ್ಯಾಮಿ, ಬಡವ ಬಲ್ಲಿದರ ಅಂತರ ಹೆಚ್ಚಾಗಿ, ಆರ್ಥಿಕ ಶೋಷಣೆ ಹೆಚ್ಚಾಗಿದೆ ಎಂದು ಜಾಗತೀಕರಣದ ಬಗ್ಗೆ ತಮ್ಮ ಆತ್ಮಕಥೆಯಲ್ಲಿ ವ್ಯಥೆ ಪಟ್ಟಿದ್ದಾರೆ. ಅವರು ತೀರಿಹೋಗುವುದಕ್ಕೆ ಒಂದೆರಡು ತಿಂಗಳುಗಳ ಹಿಂದೆ ತಾವು ಮೆಚ್ಚುತ್ತಿದ್ದ ಎಂ. ಎಸ್. ಕೃಷ್ಣನ್‌ರವರ ಕಮ್ಯುನಿಸ್ಟ್ ಪಕ್ಷದ ಕಟ್ಟಡ ನಿಧಿಗೆ ೫,೦೦೦ ರೂಪಾಯಿ ಕೊಡುಗೆ ಕಳುಹಿಸಿಕೊಟ್ಟರು. ಇವೆಲ್ಲವನ್ನೂ ಪರಿಶೀಲಿಸಿದರೆ, ಎಚ್.ಎನ್. ಅವರದು ಶೋಷಣೆ ವಿರೋಧವಾದ ಅಹಿಂಸಾತ್ಮಕಗಳಿಗೆ ಸಹಾನುಭೂತಿಯುಳ್ಳ ಗಾಂಧಿವಾದ ಎಂದು ಹೇಳುವುದು ಸೂಕ್ತವಾಗಿ ಕಾಣುತ್ತದೆ.


ಎಚ್. ಎನ್.ರೊಡನೆ 'ಹೊಸತು' ಸಂಪಾದಕರು

**ಡಾ|| ಕೆ. ಶ್ರೀನಿವಾಸನ್**, ನಂ. ೧೧೭, ೪ನೇ ಕ್ರಾಸ್
ಹನುಮಂತನಗರ, ಬೆಂಗಳೂರು - ೫೬೦ ೦೧೯

# ಎಚ್ಚೆನ್ – ಸುಸಂಸ್ಕೃತರು, ಸಜ್ಜನ, ಮಾನವೀಯ ಮನುಷ್ಯ

**ಎ**ಚ್ಚೆನ್ – ಅಪರೂಪದ ಸರಳ ಸಜ್ಜನ ಮನುಷ್ಯ. ನ್ಯಾಷನಲ್ ಕಾಲೇಜಿನ ವಿದ್ಯಾರ್ಥಿನಿ ಆಗದಿದ್ದರೂ ಹಿರಿಯ ವಿದ್ಯಾರ್ಥಿ ಸಂಘದ ಸದಸ್ಯತ್ವ ಲಭಿಸಿತ್ತು ನನಗೆ. ಹಿರಿಯ ವಿದ್ಯಾರ್ಥಿ ನಾಣಿಯ ಪತ್ನಿ ಹಿಸ್ಪ್ರಿಯಾನಿಕ್ ಕ್ಲಬ್‌ನ ಸದಸ್ಯೆ ಎನ್ನುವ ಕಾರಣಕ್ಕಾಗಿ. ಏಕಮೇವಾದ್ವಿತೀಯ Physics ಮೇಷ್ಟ್ರು ಎನ್ನುವ ಹೆಗ್ಗಳಿಕೆಗೆ ಪಾತ್ರರಾಗಿದ್ದ ಎಚ್ಚೆನ್ ಅವರನ್ನು ನಾನು ನೋಡುತ್ತಿದ್ದುದೇ ನಾಟಕದ ರಿಹರ್ಸಲ್ ಸಮಯದಲ್ಲಿ. ಡಾಕ್ಟರೇಟ್ ಪಡೆದ ಮೇಧಾವಿ ಅಷ್ಟು ನಿಗರ್ವಿಯಾಗಿ ಇರುವುದರ ಜೊತೆಗೆ ಅಷ್ಟು ಸಹಜವಾಗಿ ವಿದ್ಯಾರ್ಥಿಗಳೊಂದಿಗೆ ಬೆರೆಯುತ್ತಿದ್ದುದನ್ನು ನೋಡಿ ನನಗೆ ಪರಮಾಶ್ಚರ್ಯ. ಕಾಲೇಜಿನ ವೇಳೆಯ ನಂತರ ವಿದ್ಯಾರ್ಥಿಗಳೊಂದಿಗೆ ಬ್ಯಾಡ್‌ಮಿಂಟನ್, ಕ್ರಿಕೆಟ್ ಆಡುತ್ತಿದ್ದು, ಅನಂತರ ನಾಟಕದ ರಿಹರ್ಸಲ್ ಮಾಡುವವರೊಂದಿಗೆ ಲೋಕಾಭಿರಾಮವಾಗಿ ಮಾತಾಡುತ್ತಾ ಮತ್ತೆ ಮತ್ತೆ ಜೋಕ್ಸ್ ಮಾಡಿ ನಗಿಸುತ್ತಾ ಕಾಲ ಕಳೆಯುತ್ತಿದ್ದ ಸಂಘಜೀವಿ ಎಚ್ಚೆನ್.

ನಮ್ಮ ನಾಟಕದ ರಿಹರ್ಸಲ್ ಮುಗಿಯುತ್ತಿದ್ದುದೇ attender ನರಸಿಂಹಯ್ಯ ಬನ್ನು-ಬಿಸ್ಕತ್ತು-ಬಾದಾಮಿ ಹಾಲು ತಂದುಕೊಟ್ಟ ಮೇಲೆ. ಡಾ|| ಎಚ್ಚೆನ್ ಸೇವಾರ್ಥ. ಅದೇ ನಮಗೆ ಲಾಸ್ಟ್ ಕಾಲ್ ಮನೆಗೆ ಹೋಗುವುದಕ್ಕೆ.

ಆಡಿದ ನಾಟಕವನ್ನೇ ಮತ್ತೆ ಮತ್ತೆ ಆಡಿದರೂ ಸಂತೋಷದಿಂದ ಕೂತು, ನೋಡಿ, ಮೆಚ್ಚುಗೆಯ ಮಾತನ್ನಾಡುತ್ತಿದ್ದರು. ನಾಟಕ ಮುಗಿದ ಮೇಲೆ ಕಾಲೇಜಿನ ಹಾಸ್ಟೆಲಿನಲ್ಲಿ ನಮಗೆಲ್ಲಾ ಊಟ. ಹಾಸ್ಟೆಲ್ ವಿದ್ಯಾರ್ಥಿಗಳೊಂದಿಗೆ ಪ್ರತಿನಿತ್ಯವೂ ಕೂತು, ಊಟಮಾಡಿ, ತಟ್ಟೆ ತೊಳೆದು ಅದರ ಜಾಗದಲ್ಲಿಟ್ಟುಬಿಡುತ್ತಿದ್ದ ಶಿಸ್ತಿನ ಸಿಪಾಯಿ. ಈ ನಡವಳಿಕೆ ವಿದ್ಯಾರ್ಥಿ ದೆಸೆಯಲ್ಲಿ ಒಂದೇ ಅಲ್ಲ, ಉಪನ್ಯಾಸಕ-ಪ್ರೊಫೆಸರು-ಪ್ರಿನ್ಸಿಪಾಲರು-Vice-Chancellor-NES ಅಧ್ಯಕ್ಷ – ಎಲ್ಲ ದೆಸೆಯಲ್ಲೂ ಅದೇ ಶಿಸ್ತು-ಅದೇ ಉಡುಪು-ಅದೇ ಟೋಪಿ-ಅದೇ ಸರಳತೆ.

ಗಾಂಧಿ ತತ್ವಗಳನ್ನು ಜೀವನದುದ್ದಕ್ಕೂ ನಡವಳಿಕೆಯಲ್ಲಿ ಅಳವಡಿಸಿಕೊಂಡಿದ್ದ ಗಾಂಧೀವಾದಿ. ಜಾತ್ಯತೀತ ತತ್ವಗಳ ಬಗ್ಗೆ ಉದ್ದುದ್ದ ಭಾಷಣಗಳನ್ನು ಮಾಡುವವರ ನಾಡಿನಲ್ಲಿ ಅದರ ಬಗ್ಗೆ ಚಕಾರವೆತ್ತದೆ ಅದನ್ನು ನಿತ್ಯಜೀವನದಲ್ಲಿ, ನಡವಳಿಕೆಯಲ್ಲಿ ಅನುಸರಿಸಿದ ಉದಾತ್ತ ವ್ಯಕ್ತಿ. ಸಂಗೀತ, ನಾಟಕ ಹಾಗೂ ಪಠ್ಯೇತರ ಚಟುವಟಿಕೆಗಳಲ್ಲಿ ಅತ್ಯಂತ ಆಸಕ್ತಿ ಇದ್ದುದಷ್ಟೇ ಅಲ್ಲ – ಅದರ ಬಗ್ಗೆ ಎಲ್ಲರಲ್ಲೂ, ಮುಖ್ಯವಾಗಿ ವಿದ್ಯಾರ್ಥಿಗಳಲ್ಲಿ ಆಸಕ್ತಿ ಹುಟ್ಟುಹಾಕಿದ ವಿದ್ಯಾಭಿಮಾನಿ. ಕಾಲೇಜಿನಲ್ಲಿ ಅಂತರ ತರಗತಿಗಳ ನಡುವೆ ನಾಟಕ ಸ್ಪರ್ಧೆಯನ್ನು ಮೊದಲಿಗೆ ಪ್ರಾರಂಭಿಸಿದವರೇ ಎಚ್ಚೆನ್. ಅದೇ ಪೋಷಕರು, ಸಾಮಾನ್ಯರು ನ್ಯಾಷನಲ್ ಕಾಲೇಜನ್ನು ನಾಟಕದ ಕಾಲೇಜು ಎಂದು ಕರೆಯುವಂತೆ ಮಾಡಿದ್ದು.

ನಾಟಕ, ಆಟ-ಪಾಠಗಳಲ್ಲಿ ಆಸಕ್ತಿ ಇದ್ದಮಾತ್ರಕ್ಕೆ ಎಚ್ಚೆನ್ ವ್ಯಾಸಂಗ ಮಾಡಲು ವಿದ್ಯಾರ್ಥಿಗಳನ್ನು ಪ್ರೋತ್ಸಾಹಿಸುತ್ತಿರಲಿಲ್ಲ ಎಂದಲ್ಲ. ಈ ನಾಟಕ-ಗದ್ದಲ ಎಲ್ಲ ಡಿಸೆಂಬರ್ ತಿಂಗಳಿನೊಳಗೆ ಮುಗಿದುಹೋಗುತ್ತಿತ್ತು. ಆಮೇಲೆ ಅವರ ಗಮನವೆಲ್ಲ final ಪರೀಕ್ಷೆಗೆ ಕೂಡುವ ವಿದ್ಯಾರ್ಥಿಗಳ ಮೇಲೆ. ''ಹೋಗೀಪ್ಪಾ time waste ಮಾಡ್ಬೇಡಿ - ಚೆನ್ನಾಗಿ ಓದಿಕೊಳ್ಳಿ'' ಎಂದು ಪದೇ ಪದೇ ಹೇಳುವುದರ ಜೊತೆಗೆ, ಅವರಿಗೆ ಪಾಠದ ವಿಷಯದಲ್ಲಿ ಬರುವ ಎಲ್ಲಾ ಸಂದೇಹಗಳನ್ನೂ ಅತ್ಯಂತ ಆಸಕ್ತಿಯಿಂದ ಪರಿಹರಿಸಿ, ವಿವರಿಸಿ, ತಿಳಿಸಿ ಹೇಳುತ್ತಿದ್ದರು. ಹೊತ್ತು, ವೇಳೆಯ ಪರಿವೆಯಿಲ್ಲದೆ.

ವಿದ್ಯಾರ್ಥಿಗಳ ಬಗ್ಗೆ ಅಸಾಧ್ಯ ಕಾಳಜಿ. ನೂರಕ್ಕೆ ತೊಂಬತ್ತರಷ್ಟು ವಿದ್ಯಾರ್ಥಿಗಳ ಹೆಸರು ಮೇಷ್ಟರಿಗೆ ಗೊತ್ತಿರುತ್ತಿತ್ತು. ಅದರಲ್ಲಿ ಮುಕ್ಕಾಲು ಪಾಲು ವಿದ್ಯಾರ್ಥಿಗಳ ಮನೆಯವರ ಪರಿಚಯವೂ ಇರುತ್ತಿತ್ತು. ಎಚ್ಚೆನ್‌ಗೆ ತಮ್ಮ ವಿದ್ಯಾರ್ಥಿಗಳು-ಅವರ ಬೆಳವಣಿಗೆ – ಎಲ್ಲದರಲ್ಲೂ ಆಸಕ್ತಿ. ಅಷ್ಟೇ ಅಲ್ಲ, ಕಾಲೇಜಿನ ಶಿಕ್ಷಣ ಮುಗಿಸಿಹೋದ ವಿದ್ಯಾರ್ಥಿಗಳ ಉತ್ತರೋತ್ತರ ಬೆಳವಣಿಗೆ, ವೃತ್ತಿ, ಪರಿವಾರ – ಎಲ್ಲದರ ಬಗ್ಗೆಯೂ ಆಸಕ್ತಿ-ಅಭಿಮಾನ.

ಎಚ್ಚೆನ್ ಬರೆದ 'ಹೋರಾಟದ ಹಾದಿಯಲ್ಲಿ' ಪುಸ್ತಕ ಓದಿದಾಗ ಎಂತಹ ಪ್ರಾಮಾಣಿಕ-ಸಾತ್ವಿಕ ಮನುಷ್ಯ. ಇಷ್ಟು ಓದಿ ಡಾಕ್ಟರೇಟ್ ಪಡೆದು - ಎಂತೆಂತಹ ಜವಾಬ್ದಾರಿಯುತ ಹುದ್ದೆಗಳನ್ನು ನಿರ್ವಹಿಸಿ. ಹನ್ನೊಂದು ವಿದ್ಯಾಸಂಸ್ಥೆಗಳನ್ನು ಕಟ್ಟಿ-ಬೆಳೆಸಿ-ನಡೆಸಿದ ವ್ಯಕ್ತಿ – ಮಗುವಿನ ಮುಗ್ಧತೆಯನ್ನು ಉಳಿಸಿಕೊಂಡು ಅತ್ಯಂತ ಸರಳ ವ್ಯಕ್ತಿತ್ವದ ನಿಷ್ಠ ಗಾಂಧೀವಾದಿಯಾಗಿರಲು ಹೇಗೆ ಸಾಧ್ಯವಾಯಿತು ಎಂದು ಆಶ್ಚರ್ಯವಾಗುತ್ತದೆ. ಅವರು ಅಮೆರಿಕದಲ್ಲಿರುವಾಗ ಅಂತಿಮ ಪರೀಕ್ಷೆಯನ್ನು ತೆಗೆದುಕೊಳ್ಳುವ ಪ್ರತಿ ವಿದ್ಯಾರ್ಥಿಗೂ, ಪರೀಕ್ಷೆಯ ತಯಾರಿ ಕುರಿತು ಶುಭಕೋರಿ ಪತ್ರ ಬರೆಯುತ್ತಿದ್ದರಂತೆ. ಮನೆಯ ಮಕ್ಕಳಿಗೇ ಪತ್ರ ಬರೆಯಲು ಕಷ್ಟವೆನಿಸುವ ನಮಗೆ ಇದು ಊಹಿಸಲೂ ಅಸಾಧ್ಯ.

ಎಚ್ಚೆನ್ ಅಂದರೆ ಇದೆಲ್ಲವನ್ನೂ ಮೀರಿದ ಜ್ಞಾಪಕಕ್ಕೆ ಬರುವುದು ಅವರ ಹಾಸ್ಯಪ್ರಜ್ಞೆ. ''ಇದೊಂದು ಜೋಕ್ ಹೇಳ್ಬಿಡ್ತೀನಿ, ಕೇಳಿಬಿಡಪ್ಪ-ಕಡೇದು'' ಅಂತ ಹೇಳದೆ ಮೇಷ್ಟ್ರು ಹೊರಟದ್ದು ಜ್ಞಾಪಕವೇ ಇಲ್ಲ. ಎಂತಹ ಗಂಭೀರ ಸನ್ನಿವೇಶದಲ್ಲೂ ಮೇಷ್ಟ್ರು Jokes ಹೇಳಲೇಬೇಕು. ೮೯ನೇ ಇಸವಿ – ನನ್ನ ಮಗ ಪ್ರಕಾಶ್‌ಗೆ accident ಆಗಿ ಕಾಲು fracture ಆಗಿತ್ತು. ಗೀತಾ ನರ್ಸಿಂಗ್ ಹೋಂನಲ್ಲಿ ಆಪರೇಷನ್ ಆಯ್ತು ಸಂಜೆ ೮ ಘಂಟೆಗೆ. ಆವತ್ತು ರವೀಂದ್ರ ಕಲಾಕ್ಷೇತ್ರದಲ್ಲಿ 'ಮುಖ್ಯಮಂತ್ರಿ' ನಾಟಕ ಇತ್ತು. ಎಚ್ಚೆನ್‌ಗೆ ಸನ್ಮಾನ ಸಮಾರಂಭ ಇತ್ತು - ಕಲಾಗಂಗೋತ್ರಿ ನಾಟಕ ತಂಡದವರಿಂದ. ನಾಟಕ, ಸಮಾರಂಭ ಮುಗಿಸಿಕೊಂಡು ಬಂದರು ಎಚ್ಚೆನ್ ಗೀತಾ ನರ್ಸಿಂಗ್ ಹೋಂಗೆ. ಅಷ್ಟು ಹೊತ್ತಿಗೆ ಆಪರೇಷನ್ ಮುಗಿಸಿ ವಾರ್ಡ್‌ಗೆ ಕರಕೊಂಡು ಬಂದು ಮಲಗಿಸಿದ್ದರು ಪ್ರಕಾಶ್‌ನ. ಒಂದಷ್ಟು ನಾಟಕದವರೂ ಬಂದಿದ್ದರು ಮೇಷ್ಟ್ರು ಜೊತೆಗೆ –ಡಾ|| ರಾಜಾರಾಂ, ಮುಖ್ಯಮಂತ್ರಿ ಚಂದ್ರು, ಪ್ರಸಾದ್ ಎಲ್ಲರೂ. ಎಚ್ಚೆನ್ ಬಂದಾಗಿಂದ್ಲೂ ಒಂದು Joke ಹೇಳ್ತಾ ಇದ್ದಾರೆ – ಎಲ್ಲರೂ ''ಹೋ'' ಅಂತ ನಗ್ತಾ ಇದ್ದಾರೆ. ಗೀತಾ ನರ್ಸಿಂಗ್ ಹೋಂನವರು ನೋಡೋಷ್ಟು ನೋಡಿ – ''ಸಾರ್ ೧೧ ಘಂಟೆ ಆಯ್ತು. ಬೇರೆ ಪೇಷಂಟ್‌ಗಳಿಗೆ ತೊಂದ್ರೆ ಆಗುತ್ತೆ - ಬಾಗಿಲು ಹಾಕಬೇಕು - Doctor ಬೈಯ್ತಾರೆ ಇಲ್ಲದಿದ್ದರೆ'' ಅಂದರು. ''ಸರಿ. ಸರಿ ಹೊರಟುಬಿಡ್ತೀವಿ-ಬನ್ನೀಪ್ಪಾ'' ಅಂದುಬಿಟ್ಟು, ''ಪ್ರಕಾಶ್, ಇನ್ನು ಒಂದೇ ಒಂದು ಜೋಕಪ್ಪಾ-ಕಡೇದು'' ಅಂತಂದು ಒಂದು ಮೂರ್ನಾಲ್ಕು ಜೋಕ್ಸ್ ಹೇಳೇ ಹೊರಟ್ರು. ನರ್ಸಿಂಗ್ ಹೋಂ attender ಆತಂಕದಿಂದ ನೋಡ್ತಾ ಇದ್ದರೂನೂ.

ರ್‍ಯಾಂಕ್ ತೊಗೊಳ್ಳೋ ವಿದ್ಯಾರ್ಥಿಗಳ ಮೇಲೆ ಇರೋಷ್ಟೇ ಅಭಿಮಾನ-ಪ್ರೀತಿ, ಎರಡು-ಮೂರನೇ ದರ್ಜೇಲಿ ಉತ್ತೀರ್ಣರಾಗೋ ವಿದ್ಯಾರ್ಥಿ ಮೇಲೂ ಇತ್ತು. ಪ್ರಾರಂಭದ ದಿನಗಳಲ್ಲಿ ನ್ಯಾಷನಲ್ ಕಾಲೇಜಿಗೆ ಎಂಟು-ಒಂಬತ್ತು ರ್‍ಯಾಂಕ್ ಬರೋವಾಗ, ಆ ವಿದ್ಯಾರ್ಥಿಗಳ ಬಗ್ಗೆ ಇರುವ ಹೆಮ್ಮೆ-ಅಭಿಮಾನ ಬರ್ತಾ ಬರ್ತಾ ಕಡಿಮೆ ಆಯ್ತು ಅನ್ನಿಸುತ್ತೆ. ವಿದ್ಯಾರ್ಜನೆಯಲ್ಲೇ ಆಸಕ್ತರಾದ ಅಸಾಧ್ಯ ಪ್ರತಿಭಾವಂತ ವಿದ್ಯಾರ್ಥಿಗಳಲ್ಲಿ ಸ್ವಾರ್ಥ ಮನೋಭಾವ ಹೆಚ್ಚು-ಅವರಿಂದ ಕಾಲೇಜಿಗೆ, ಮನೆಯವರಿಗೆ, ದೇಶಕ್ಕೆ ಹೆಚ್ಚಿನ ಉಪಯೋಗವಿಲ್ಲ. ಸಾಮಾನ್ಯ ವಿದ್ಯಾರ್ಥಿಗಳಲ್ಲೇ ಹೆಚ್ಚಿನ ಮಾನವೀಯತೆ ಇದೆ ಅನ್ನೋದನ್ನ ಎಚ್ಚೆನ್ ಮನಗಂಡರು ಅನ್ನಿಸುತ್ತೆ–ನಮ್ಮ ಕೈಲಾಸಂ ನಾಟಕದ ಮಾಧು ತರಹ ಅಂತ.

ಒಟ್ಟಿನಲ್ಲಿ ನಮ್ಮ ಜೀವನದಲ್ಲಿ ಕಂಡ ಅತ್ಯಂತ ಮಾನವೀಯ ವ್ಯಕ್ತಿ. ಅಂತಹ ವ್ಯಕ್ತಿಯ ಒಡನಾಟ ಇದ್ದುದು ನನ್ನ ಸೌಭಾಗ್ಯ ಎನ್ನುವುದೇ ನನಗೆ ಅತ್ಯಂತ ಹೆಮ್ಮೆಯ ವಿಷಯ.

**ಭಾರ್ಗವಿ ನಾರಾಯಣ್**, ೨೭೬ ಸಿ, ೩೭ನೇ 'ಎ' ಅಡ್ಡರಸ್ತೆ, ಜಯನಗರ ೮ನೇ ಬ್ಲಾಕ್, ಬೆಂಗಳೂರು -೮೨



## ವಿಮರ್ಶೆ

ಒಬ್ಬರು
ನನ್ನ ಪ್ರಥಮ ಸಂಕಲನಕೆ
ಕಾಡಿ-ಬೇಡಿ ಮುನ್ನುಡಿ ಬರೆಯಲು
ಮುಂದಾದರು
ಆದರೆ ಅವರಿಗೆ
ಮುನ್ನುಡಿ-ಹಿನ್ನುಡಿ ಸಹ
ಸಿಗದಾದಾಗ
ಮುದ್ದಾಮ ಕಟು ವಿಮರ್ಶೆ ಮಾಡಿದರು.

ಶಂಕರಗೌಡ ಸಾತ್ಮಾರ, ಇಂಗ್ಲಿಷ್ ಪ್ರಾಧ್ಯಾಪಕರು
ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಮುಂಡಗೋಡ

# ಎಚ್ಚೆನ್ ಅವರ ಹೆಚ್ಚೇನು ?

**ಪೂ**ಜ್ಯ ಡಾ|| ಎಚ್ಚೆನ್ ಅವರು ಚರಿತ್ರೆಯ ಪುಟಗಳಲ್ಲಿ ಸೇರಿರುವುದು ಲೋಕ ವಿದಿತ. ವಿಧಾನಸಭೆಯಿಂದ ಹಿಡಿದು ಅನೇಕ ಸಂಘಸಂಸ್ಥೆಗಳು ಶ್ರದ್ಧಾಂಜಲಿ ಕಾರ್ಯಕ್ರಮ ನಡೆಸಿರುವುದು ಅವರ ಮೇಲಿನ ಗೌರವಾದರಗಳ ಸಂಕೇತ. ಶಿಕ್ಷಣ, ಮೂಢನಂಬಿಕೆಯ ವಿರೋಧ, ಇತ್ಯಾದಿ ವಿಷಯಗಳಲ್ಲಿ ಅವರು ನಡೆದು ಬಂದ ದಾರಿ ತುಂಬಾ ಅನುಕರಣೀಯ. ಜೊತೆಗೆ, ಅವರು ಸಮಾಜದ ವಿಭಿನ್ನ ಕಾರ್ಯಕ್ಷೇತ್ರಗಳಲ್ಲೂ ಮಾಡಿರುವ ಕಾರ್ಯಚಟುವಟಿಕೆಗಳು ಎಂತಹವರನ್ನೂ ಚಕಿತಗೊಳಿಸುತ್ತವೆ. ಉದಾಹರಣೆಗಾಗಿ, ಹೊಸೂರು ಗ್ರಾಮದ 'ಸ್ವಸ್ತಿ ಗ್ರಾಮಯೋಜನೆ'. ಒಂದು ಚಿಕ್ಕ ಹಳ್ಳಿಗಾಗಿ ಒಂದು ಕೋಟಿ ರೂ.ಗಳ ಮೊತ್ತದಿಂದ ಗ್ರಾಮದ ಅನೇಕ ಅಭಿವೃದ್ಧಿ ಯೋಜನೆಗಳು ಜಾರಿಗೆ ಬಂದಿವೆ: ರಸ್ತೆಗಳ ಡಾಂಬರೀಕರಣ, ಕುಡಿಯುವ ನೀರಿಗಾಗಿ ಓವರ್‌ಹೆಡ್ ಟ್ಯಾಂಕ್, ನಲ್ಲಿಗಳು ಇತ್ಯಾದಿ.

ನಮ್ಮೂರಿನ ಹಲವಾರು ಅಭಿವೃದ್ಧಿ ಕಾರ್ಯಕ್ರಮಗಳು ಅವರ ಸೇವಾಕ್ಷೇತ್ರದ ಇನ್ನೊಂದು ಮುಖ. ಅವರು ಇತರರ ಬಗ್ಗೆ ನಡೆದುಕೊಳ್ಳುತ್ತಿದ್ದ ರೀತಿ, ತೋರಿಸುತ್ತಿದ್ದ ಅನುಕಂಪ ಮತ್ತು ಹಾಸ್ಯಪ್ರಜ್ಞೆ ಇವುಗಳು ಅಸಾಮಾನ್ಯ. ಅವರು ಉಪಕುಲಪತಿಗಳಾಗಿದ್ದ ಸಂದರ್ಭ, ಇದ್ದಕ್ಕಿದ್ದಂತೆ ಒಮ್ಮೆ ನ್ಯಾಷನಲ್ ಕಾಲೇಜಿಗೆ ಕಾಲ್ನಡಿಗೆಯಲ್ಲಿ ಅನಿರೀಕ್ಷಿತವಾಗಿ ಬಂದರು. ಪ್ರಾಂಶುಪಾಲರು ಅವರ ಬಳಿಗೆ ಧಾವಿಸಿ ಬಂದರು. ಇದ್ದಕ್ಕಿದ್ದಂತೆ ಇಂಗ್ಲಿಷ್ ವಿಭಾಗದ ಮುಖ್ಯಸ್ಥರಾಗಿದ್ದ ಡಾ॥ ದ್ವಾರಕಾನಾಥ್ ಅವರಿಗೆ ಹೇಳಿದರು: ''ನಾನು ನಾಳೆ ಧರ್ಮಸ್ಥಳಕ್ಕೆ ಅಲ್ಲಿನ ಒಂದು ಶಿಕ್ಷಣ ಸಂಸ್ಥೆಯ ಆಹ್ವಾನದ ಮೇರೆಗೆ ಹೋಗುತ್ತಿದ್ದೇನೆ, ನೀವು ಡಾ॥ ಶ್ರೀನಿವಾಸ್ ಇಬ್ಬರೂ ಬರಬೇಕು.'' ಅದರಂತೆ ಮಾರನೇ ದಿನ ಧರ್ಮಸ್ಥಳಕ್ಕೆ ಹೊರಟು, ಮಾರ್ಗಮಧ್ಯೆ ಹಾಸನದಲ್ಲಿ ಸರ್ಕಾರಿ ಅತಿಥಿಗೃಹದಲ್ಲಿ ರಾತ್ರಿ ತಂಗುತ್ತಾರೆ. ಮೊದಲೇ ಕಾದಿರಿಸಲಾದ ಆ ಕೊಠಡಿಯಲ್ಲಿರುವುದು ಎರಡು ಮಂಚಗಳು ಮಾತ್ರ. ಇವರ ಜೊತೆಗೆ ಬಂದ ಈರ್ವರು ಉಪನ್ಯಾಸಕರನ್ನು ಮಂಚದ ಮೇಲೆ ಮಲಗಿಕೊಳ್ಳಲು ಹೇಳಿ ಇವರು ನೆಲದ ಮೇಲೆ ಮಲಗುತ್ತಾರೆ. ಅವರ ಸರಳ ಸಜ್ಜನಿಕೆ ಅಂತಹದ್ದು. ಇದನ್ನು ದ್ವಾರಕಾನಾಥ್‌ರೇ ಹೇಳಿದ್ದಾರೆ.

ನನ್ನ ಮತ್ತು ಡಾ॥ ಎಚ್ಚೆನ್ ಸಂಪರ್ಕ ಸುಮಾರು ೬೫ ವರ್ಷಗಳದು. ಪ್ರತಿವರ್ಷ ಬೇಸಿಗೆ ರಜಾದಲ್ಲಿ ಹೊಸೂರಿಗೆ ಬಂದಾಗ ನಮ್ಮ ತಾತನವರ ಮನೆಯಲ್ಲಿ ಒಂದೇ ರೂಮಿನಲ್ಲಿ ಇರುತ್ತಿದ್ದೆವು. ಬೆಳಗಿನ ಜಾವ ಈಜುವುದು, ಉಪಯುಕ್ತವಾದ ಚರ್ಚಾ ವಿಷಯಗಳು, ಮಧುಗಿರಿಯ ಬಳಿ ಸಿದ್ದಾಪುರಕ್ಕೆ ಅವರ ತಂಗಿಯ ಮನೆಗೆ ಆಗಾಗ ಸೈಕಲ್‌ನಲ್ಲಿ ೩೦ ಮೈಲಿ ಹೋಗಿಬರುವುದು, ಸಂಜೆ ಬಾಲ್‌ಬ್ಯಾಟ್‌ಮಿಂಟನ್ ಸುಮಾರು ೩ ಘಂಟೆಗಳು ಹಣಾಹಣಿಯಿಂದ ಆಡುವುದು ಹೀಗೆ ಸಾಗಿತ್ತು ಬೇಸಿಗೆಯ ೧೦ ವರ್ಷಗಳ ರಜಾದಿನಗಳು. ಎಚ್ಚೆನ್ ಅವರ ಬಡತನಕ್ಕಿಂತ ಮೀರಿದ ಬಡತನ ಅವರ ತಂಗಿಯದು. ಪ್ರತಿ ತಿಂಗಳು ಸಂಬಳದಿಂದ ೨೦೦ ರೂಪಾಯಿಗಳನ್ನು ಸಿದ್ದಾಪುರಕ್ಕೆ ಕಳಿಸುತ್ತಿದ್ದರು. ಅಮೆರಿಕಾಗೆ ಹೋದಾಗ ೩ ವರ್ಷಕ್ಕೆ ಆಗುವ ೭,೨೦೦ ರೂಪಾಯಿಗಳನ್ನು ನಮ್ಮ ಮಾವನವರಿಗೆ ಕೊಟ್ಟು ತಿಂಗಳ ಹಣ ಅವರಿಗೆ ಸಂದಾಯವಾಗುವ ಏರ್ಪಾಡು ಮಾಡಿದ್ದರು. ಅವರು ಪ್ರಾಂಶುಪಾಲರಾಗಿದ್ದಾಗ ಇದ್ದಕ್ಕಿದ್ದಂತೆ ತಂಗಿ ವಿಧಿವಶರಾದ ಸುದ್ದಿ ತಿಳಿದು ಬೆಂಗಳೂರಿನಿಂದ ಸಿದ್ದಾಪುರಕ್ಕೆ ಧಾವಿಸಿ ಬಂದಾಗ ತಂಗಿಯ ಅಂತ್ಯ ಸಂಸ್ಕಾರ ನಡೆದೇಹೋಗಿತ್ತು. ಮುಖದರ್ಶನವೂ ಆಗಲಿಲ್ಲ. ರಕ್ತ ಸಂಬಂಧದ ಏಕಮಾತ್ರ ಕೊಂಡಿ ಕಳೆದುಕೊಂಡ ದುಃಖವನ್ನು ಯಾರಿಗೂ ಹೇಳಿಕೊಳ್ಳಲು ಆಗದೆ ಅನುಭವಿಸಿದರು. ಪ್ರಾಯಶಃ ಅವರ ಜೀವನದಲ್ಲಿ ಆಗ ಮಾತ್ರ ನಾನು ಅವರು ಕಣ್ಣೀರು ಹಾಕಿದ್ದನ್ನು ನೋಡಿದ್ದು. ಸ್ವಾತಂತ್ರ್ಯ ಸಂಗ್ರಾಮದ ಹೋರಾಟದಲ್ಲಿ ಕೆಲವು ಜೈಲುಗಳಲ್ಲಿ ಇದ್ದು ಹೊರಬಂದ ನಂತರ ಸ್ವಾತಂತ್ರ್ಯ ಹೋರಾಟಗಾರರು ಎಂಬ ಸರ್ಕಾರಿ ಶೀರ್ಷಿಕೆಯಡಿಯಲ್ಲಿ ಅನೇಕರು ಸರ್ಕಾರಿ ಸವಲತ್ತುಗಳನ್ನು ಪಡೆಯುತ್ತಿದ್ದಾರೆ. ಉದಾಹರಣೆಗೆ, ಮಾಸಿಕ ಸಂಬಳ, ಉಚಿತ ಒಂದನೇ ತರಗತಿ ರೈಲು ಪ್ರಯಾಣ, ಉಚಿತ ದೂರವಾಣಿ ಸಂಪರ್ಕ. ಇವು ಯಾವುವೂ ಇವರ ಬಳಿ ಸುಳಿಯಲಿಲ್ಲ. ಅಂದರೆ ಇವರು ನಿರಾಕರಿಸಿದರು. ಈ ಬಗ್ಗೆ ನಾನು ಯಾಕೆ ಹೀಗೆ ಮಾಡಿದೆ ಎಂದು ಕೇಳಲಾಗಿ, ನಾವು ಅಂದು ನಮ್ಮ ಮಾತೃಭೂಮಿಗಾಗಿ ದುಡಿದ ಶ್ರಮಕ್ಕೆ ಪ್ರತಿಫಲವಾಗಿ ಹಣ ತೆಗೆದುಕೊಂಡರೆ ನಮ್ಮ ಹೋರಾಟಕ್ಕೆ ಕಿಂಚಿತ್ತೂ ಬೆಲೆಯಿರುವುದಿಲ್ಲ, ಎಂದು ಹೇಳಿದರು. ಒಂದು ದಿನ ರಾತ್ರಿ ೧೦ ಘಂಟೆಗೆ ಆಗ ಕರ್ನಾಟಕ ಸರ್ಕಾರದ ಮುಖ್ಯ ಕಾರ್ಯದರ್ಶಿಗಳಾಗಿದ್ದ ಶ್ರೀ ಜಿ.ವಿ.ಕೆ. ರಾವ್ ಅವರ ಕಚೇರಿಯಿಂದ ''ನರಸಿಂಹಯ್ಯನವರೆ, ನಿಮ್ಮನ್ನು ಭಾರತದ ಹಿಂದುಳಿದ ವರ್ಗಗಳ ಆಯೋಗದ ಅಧ್ಯಕ್ಷರನ್ನಾಗಿ ನೇಮಕ ಮಾಡಿರುತ್ತಾರೆ, ನೀವು ಬಂದು ರಿಪೋರ್ಟ್ ಮಾಡಿಕೊಳ್ಳಿ'' ಎಂದು ತಿಳಿಸಿದರು. ತಕ್ಷಣವೆ ಎಚ್ಚೆನ್ ಅದನ್ನು ವಿನಯದಿಂದ ನಿರಾಕರಿಸಿದರು. ಬೆಂಗಳೂರಿನ ಎನ್.ಇ.ಎಸ್. ಸಂಸ್ಥೆಯಿಂದ ದೂರವಿರುವ ಯಾವ ಹುದ್ದೆಯೂ (ರಾಜ್ಯಪಾಲರಾದಿಯಾಗಿ) ಅವರಿಗೆ ಬೇಡ. ಹೊಸೂರಿನಲ್ಲಿ ಪ್ರೌಢಶಾಲೆ ೧೯೬೩ರಲ್ಲಿ ಪ್ರಾರಂಭ ಮಾಡಿದಾಗ ಪ್ರತಿ ಶನಿವಾರ ಸಂಜೆ ಇಲ್ಲಿಗೆ ಬಂದು ಸೇರುತ್ತಿದ್ದರು. ಭಾನುವಾರ ಬೆಳಿಗ್ಗೆ ನಾಲ್ಕು ಘಂಟೆಗೆ ಹಳ್ಳಿಗಳಿಗೆ ಹೋಗಿ ೫,೦೦೦ ರೂಪಾಯಿಗಳನ್ನು ಸಂಗ್ರಹಿಸಲು ಸುಮಾರು ಒಂದು ತಿಂಗಳು ಬೇಕಾಯಿತು. ಇದನ್ನು ಸರ್ಕಾರಕ್ಕೆ ಕಟ್ಟಬೇಕಾಗಿತ್ತು. ಒಂದು ನೂರು ರೂಪಾಯಿ ದಾನ ಮಾಡಿದವರಿಗೆ ಹೂವಿನ ಹಾರ ಹಾಕಿ, ಪಾದಮುಟ್ಟಿ ನಮಸ್ಕರಿಸಿ ಅದನ್ನು ಸ್ವೀಕರಿಸುತ್ತಿದ್ದೆವು. ಅಷ್ಟು ಹಣದ ಅಭಾವದ ಕಾಲ ಅದು.



ಮಾನ್ಯ ಶ್ರೀ ಡಿ. ಎಸ್. ಆನಂದ್‌ರವರು ತಮ್ಮ ಕಟ್ಟಡದಲ್ಲಿ ಶಾಲೆ ನಡೆಸಲು ಅನುಮತಿ ನೀಡಿದರು. ಇದರಿಂದ ಮೂರು ವರ್ಷಗಳು ಕಳೆದು ನಂತರ ಸರ್ಕಾರದ ಅನುದಾನ, ಅನೇಕ ದಾನಿಗಳ ನೆರವು ಇವೆಲ್ಲವನ್ನೂ ಸಂಗ್ರಹಿಸುತ್ತಾ ಬಂದು, ಇಂದು ೮೦೦ ವಿದ್ಯಾರ್ಥಿಗಳ ಆಶ್ರಯತಾಣವಾಗಿದೆ. ಮಧ್ಯಾಹ್ನದ ಉಪಾಹಾರಕ್ಕೆ ೨೫ ಲಕ್ಷ ರೂಪಾಯಿಗಳನ್ನು ಕೆನರಾ ಬ್ಯಾಂಕಿನಲ್ಲಿಟ್ಟು ಅದರ ಬಡ್ಡಿ ಹಣದಿಂದ ಎಲ್ಲರಿಗೂ ಮಧ್ಯಾಹ್ನದ ಉಪಾಹಾರ ನೀಡಲಾಗುತ್ತಿದೆ. ಅದೇ ಕಾಲಕ್ಕೆ ಪ್ರಾರಂಭವಾದ ಗೌರಿಬಿದನೂರು, ಬಾಗೇಪಲ್ಲಿ ಕಾಲೇಜುಗಳು, ಯಲ್ದೂರು, ಮುದೆಯನೂರು, ಸುಬ್ರಹ್ಮಣ್ಯಪುರ ಶಾಲೆಗಳು, ಇವಕ್ಕೆ ಕೊಂಚವಾದರೂ ತಳಹದಿ ಇತ್ತು. ಕೆಲವು ದಾನಿಗಳ ನೆರವು ಸಹ ಇತ್ತು. ಆದರೆ ಹೊಸೂರಿನದೇ ವೈಶಿಷ್ಟ್ಯ. ಜಮೀನಿನಿಂದ ಪ್ರಾರಂಭವಾಗಿ ಎಲ್ಲವನ್ನೂ ಕೊಂಡು ಸಜ್ಜುಗೊಳಿಸಲಾಯಿತು. ಎಲ್ಲಾ ಹುದ್ದೆಗಳು, ಪ್ರಶಸ್ತಿಗಳು ಅನಾಯಾಚಿತವಾಗಿ ಬಂದವು. ೨೦೦೪ರ ಡಿಸೆಂಬರ್ ೪ರಂದು ಹೊಸೂರಿನಲ್ಲಿ ಒಂದು ವಿಶಿಷ್ಟ ಸಮಾರಂಭ. ಎಂ. ಎಸ್. ರಾಮಯ್ಯ ಮೆಡಿಕಲ್ ಕಾಲೇಜಿನ ಅಧ್ಯಕ್ಷರಾದ ಶ್ರೀ ಎಂ. ಆರ್. ಜಯರಾಂ ಮುಖ್ಯ ಅತಿಥಿಗಳು. ಸಮಾರಂಭಕ್ಕೆ ಬರಲು ಸಾಧ್ಯವಾಗುತ್ತಿಲ್ಲವೆಂದು ಡಾ॥ ಎಚ್ಚೆನ್ ಹೇಳಿದರು. ಆದರೆ ಜಯರಾಂ ಅವರ ಮೇಲಿನ ಪ್ರೀತಿಗಾಗಿ ಒಪ್ಪಿ ಬಂದರು. ಬರುವ ದಾರಿಯಲ್ಲಿ ಹಲವು ಬಾರಿ ವಾಂತಿ ಆಯಿತು. ಆಗ ಕೊಂಚ ವಮನದ್ರವ್ಯವು ಶ್ವಾಸನಾಳದಲ್ಲಿ ಸೇರಿಕೊಂಡು ಮೂರು ದಿನದ ನಂತರ ಉಲ್ಬಣಗೊಂಡು ಶ್ವಾಸಕೋಶಗಳ ನ್ಯೂಮೋನಿಯಾ ಆಗಿರುವುದನ್ನು ಮನಗಂಡ ಡಾ॥ ಮಯ್ಯರವರು ಕೇವಲ ಐದು ದಿನಗಳಲ್ಲಿ ಅವರನ್ನು ಗುಣಪಡಿಸಿದರು. ನಂತರದ ಎರಡು ದಿನಗಳಲ್ಲಿ ಎರಡನೇ ಸುತ್ತಿನ ಶ್ವಾಸಕೋಶದ ತೊಂದರೆ ಉಂಟಾಗಿ ಅದು ಯಾವ ಚಿಕಿತ್ಸೆಗೂ ಸರಿಬಾರದಿದ್ದುದು ನಮ್ಮ ದುರ್ದೈವ. ಹೊಸೂರಿನ ಅವರ ನಿಕಟವರ್ತಿಗಳಾದ ನಮಗೆ ನಮ್ಮಿಂದ ಹೀಗಾಗಿರಬಹುದು ಎಂಬ ಅಳುಕು. ಹೊಸೂರೇ ಅವರಿಗೆ ಮೃತ್ಯುವಾಯಿತಲ್ಲ ಎಂಬ ವ್ಯಥೆ. ಕೊನೆಯ ಹನ್ನೆರಡು ದಿನಗಳಲ್ಲಿ ಅವರು ಅನುಭವಿಸಿದ ನೋವು ನಿಜಕ್ಕೂ ಭಯಾನಕ. ಡಾ॥ ಮಯ್ಯರವರಿಗೆ ನಮ್ಮ ಶಾಲಾ ಅಭಿವೃದ್ಧಿ ಸಮಿತಿಯ ವತಿಯಿಂದ ಕೃತಜ್ಞತೆಯನ್ನು ತಿಳಿಸಿದ್ದೇವೆ. ನಂತರದಲ್ಲಿ ಹೊಸೂರಿನಲ್ಲಿ ನಡೆದ ಅಂತ್ಯಕ್ರಿಯೆ ಮುಂತಾದ ಎಲ್ಲ ಕಾರ್ಯಕ್ರಮಗಳು ಅವರ ಸೂಚನೆಯಂತೆ ನಡೆದಿವೆ.

ನನಗೂ ಮತ್ತು ಅವರ ತಂಗಿಯ ಮಗ ಹನುಮಂತರಾಯಪ್ಪನಿಗೂ ಚಿತೆಗೆ ಪ್ರಥಮವಾಗಿ ಅಗ್ನಿಸ್ಪರ್ಶ ಮಾಡುವ ಅವಕಾಶ ಒದಗಿಬಂದದ್ದು ನಮ್ಮ ಸುದೈವ. ''ನಿನಗೆ ಎಂಥಾ ಪೋರ್ಟ್‌ಫೋಲಿಯೋ ಕೊಟ್ಟಿದ್ದೀನಪ್ಪಾ ನಿನಗೆ'' ಎಂದು ಎಲ್ಲರ ಎದುರಿಗೂ ಹಾಸ್ಯ ಪ್ರಜ್ಞೆಯಿಂದ ನನಗೆ ಹೇಳುತ್ತಿದ್ದರು. ಏನಪ್ಪಾ ಅದು ಎಂದು ಕೆಲ ಹಿರಿಯರು ಕೇಳಿದಾಗ ''ಸುಬ್ಬೂನ ನನ್ನ ಕ್ರಿಮೇಷನ್ ಕಮಿಟಿ ಛೇರ್ಮನ್ ಮಾಡಿದ್ದೀನಪ್ಪಾ'' ಎಂದು ನಗುನಗುತಾ ಹೇಳುತ್ತಿದ್ದರು. ಆದರೆ ಆ ಕೆಲಸ ಇಷ್ಟು ಬೇಗ ಬರುತ್ತೆಂದು ನಾವು ಯಾರೂ ಊಹಿಸಿರಲಿಲ್ಲ. ಅವರು ಮಾಡಬೇಕಾದ ಇನ್ನೂ ಎಷ್ಟೋ ಕೆಲಸಗಳು ಉಳಿದುಹೋಗಿವೆ. ನಮಗೆಲ್ಲಾ ಇನ್ನೊಂದು ಅಗಾಧವಾದ ನೋವು ಏನೆಂದರೆ, ಇಂತಹ ಆದರ್ಶಪುರುಷ, ಸ್ನೇಹಜೀವಿ, ಜನೋಪಕಾರಿ ವ್ಯಕ್ತಿಯನ್ನು ನಿಂದಿಸುವ ಜನರೂ ಇದ್ದಾರಲ್ಲಾ ಎಂದು. ಅವರ ಬಗ್ಗೆ ಅಸಹನೆ ವ್ಯಕ್ತಪಡಿಸದೆ ಅವರಿಗೊಂದು ಪ್ರಶ್ನೆ ಹಾಕಬೇಕೆನಿಸುತ್ತದೆ: ''ಇನ್ನೊಬ್ಬ ಎಚ್ಚೆನ್ ಅವರನ್ನು ನೀವು ತೋರಿಸುತ್ತೀರಾ ?'' ಎಚ್ಚೆನ್ ಅವರ ಹೆಚ್ಚೇನು ಎಂಬುವವರಿಗೆಲ್ಲಾ ನಮ್ಮದು ಇದೇ ಪ್ರಶ್ನೆ.

ಡಾ॥ ಎಚ್. ಎನ್. ಸುಬ್ರಹ್ಮಣ್ಯ, ವೈದ್ಯರು, ಹೊಸೂರು

## ಸ್ಫೂರ್ತಿಯ ಸೆಲೆ

ನನಗೂ ಡಾ॥ ಎಚ್ಚೆನ್ ಅವರಿಗೂ ಎರಡು ವಿಷಯಗಳಲ್ಲಿ ವಿಚಿತ್ರ ಸಾಮ್ಯವಿದೆ. ಒಂದು: ಅವರು HN ನಾನು HVN. ಎರಡು: ಅವರು NES (National Education Society) ಸಂಸ್ಥಾಪಕರು, ನಾನು NESನ product. ಹೇಗೆಂದರೆ ನ್ಯಾಷನಲ್ ಪ್ರೈಮರಿ ಶಾಲೆಯಿಂದ ನ್ಯಾಷನಲ್ ಕಾಲೇಜ್ (B.Sc)ವರೆಗೂ ನಾನು ವಿದ್ಯಾರ್ಥಿಯಾಗಿದ್ದೆ. ಬಹುಶಃ ಎಚ್ಚೆನ್ ಅವರ ಅಗಾಧ ವ್ಯಕ್ತಿತ್ವವನ್ನು ಕಂಡು ಬೆರಗಾಗಲು ಈ ಕಾರಣವೊಂದೇ ಸಾಕೇನೋ. ಜತೆಗೆ ನನ್ನ ದೊಡ್ಡಪ್ಪ ನ್ಯಾಷನಲ್ ಹೈಸ್ಕೂಲಿನ ಮೇಷ್ಟರಾಗಿದ್ದೂ, ನನ್ನ ತಂದೆಯವರಿಂದ ನನ್ನ ಚಿಕ್ಕಮ್ಮ ಆದಿಯಾಗಿ ನನ್ನ ಅಕ್ಕ, ಅಣ್ಣ, ತಂಗಿ ಎಲ್ಲರೂ ಹೈಸ್ಕೂಲ್ ಅಥವಾ ಕಾಲೇಜಿನ ವಿದ್ಯಾರ್ಥಿ

ಗಳಾಗಿದ್ದೂ HN ಅವರ ಪ್ರಭಾವ ನನ್ನ ಮೇಲಾಗಲು ಇನ್ನಷ್ಟು ಕಾರಣವನ್ನು ಒದಗಿಸಿವೆ.

ಕಾಲೇಜು ವ್ಯಾಸಂಗದ ಐದು ವರ್ಷಗಳಲ್ಲಿ ಎಚ್ಚೆನ್ ಅವರೊಂದಿಗೆ ಹೆಚ್ಚಿನ ಸಂಪರ್ಕ ಹೊಂದಲು ಸಾಧ್ಯವಾಯಿತು. ಈ ಸಂದರ್ಭದ ಕೆಲವು ಸಂಗತಿಗಳನ್ನು ತಿಳಿಸಲು ಬಯಸುತ್ತೇನೆ. ನ್ಯಾಷನಲ್ ಕಾಲೇಜು ಎಂದರೆ ರ್‍ಯಾಂಕುಗಳ ಕಾಲೇಜು ಎಂದು ನಾವೆಲ್ಲ ಬೀಗುತ್ತಿದ್ದಾಗಲೇ, ಹೀಗಾಗಲು ಅದರ ವಿಶೇಷತೆಯೇನು ಇಲ್ಲ, ಅತ್ಯುತ್ತಮ ವಿದ್ಯಾರ್ಥಿಗಳನ್ನು ಮಾತ್ರ ಸೇರಿಸಿಕೊಂಡು ಈ ಗೌರವ ಸಂಪಾದಿಸುವುದು ದೊಡ್ಡದಲ್ಲ ಎಂಬ ಕೆಲವು ಅಪಸ್ವರಗಳಿಗೆ ಎಚ್ಚೆನ್ ಅವರ ಪ್ರತಿಕ್ರಿಯೆ : ನ್ಯಾಷನಲ್ ಹೈಸ್ಕೂಲಿನಿಂದ ಸಾಮಾನ್ಯ ದರ್ಜೆಯಲ್ಲಿ ತೇರ್ಗಡೆಯಾದವರನ್ನೂ ಸೇರಿಸಿಕೊಳ್ಳುತ್ತೇವಲ್ಲ ಎಂದು. ಆಗ ನಮಗೆಲ್ಲ ಅವಮಾನವೆನಿಸಿ, ವಿರೋಧವನ್ನೂ ವ್ಯಕ್ತಪಡಿಸುತ್ತಿದ್ದೆವು. ಆದರೆ ಕಾಲೇಜಿನ ಒಟ್ಟಾರೆ ವಾತಾವರಣ ಕ್ರಮೇಣ ಕಲುಷಿತವಾಗಲು ನಮ್ಮ ಸ್ಕೂಲಿನ ಜೊಳ್ಳುಗಳಷ್ಟೇ ಅಲ್ಲದೆ, ಮುಲಾಜಿಗಾಗಿ ಪ್ರವೇಶ ಗಿಟ್ಟಿಸಿಕೊಂಡ ಇನ್ನೂ ಸಾಕಷ್ಟು ಸಂಖ್ಯೆಯ ಹೊರ ವಿದ್ಯಾರ್ಥಿಗಳೂ ಕಾರಣ ಎಂಬುದು ಎಲ್ಲರೂ ಒಪ್ಪಿಕೊಂಡ ಸತ್ಯವಾಗಿತ್ತು.

ಎಚ್ಚೆನ್ ಅವರ ಛಾಪು ಮುಖ್ಯವಾಗಿ ಕಾಲೇಜು ಆಡಳಿತದ ಎಲ್ಲ ಪ್ರಕಾರಗಳಲ್ಲೂ ಮೂಡಿತ್ತು. Moral Education ನಂತಹ ಪಠ್ಯೇತರ ಹಾಗೂ ಅಷ್ಟೇನೂ ಆಸಕ್ತಿ ಕೆರಳಿಸದ ವಿಷಯಗಳ ಬಗ್ಗೆಯೂ ಎಚ್ಚೆನ್ ಶಿಸ್ತಿನಿಂದ, ಎಡೆಬಿಡದೆ ತರಗತಿಗಳನ್ನು ನಡೆಸುತ್ತಿದ್ದರು; NSS (ರಾಷ್ಟ್ರೀಯ ಸೇವಾ ಯೋಜನೆ)ನ ಉತ್ಸಾಹಭರಿತ ಚಟುವಟಿಕೆಗಳು, ವಿಜ್ಞಾನ ವೇದಿಕೆಯಡಿಯಲ್ಲಿ ನಿರಂತರವಾಗಿ ನಡೆಯುವ ಕಾರ್ಯಕ್ರಮಗಳು ಎಚ್ಚೆನ್ ಅವರ ಜೀವನಪ್ರೀತಿ ಹಾಗೂ ಶ್ರದ್ಧೆಗಳಿಗೆ ಮತ್ತಷ್ಟು ಉತ್ತಮ ಉದಾಹರಣೆಗಳು.

ನನಗೆ ಪ್ರಿಯವಾದ ನಾಟಕಗಳ ವಿಭಾಗಕ್ಕೆ ಬಂದರೆ, NC ಅಂದರೆ National Collegeಗಿಂತ ನಾಟಕಗಳ College ಎಂದು ತಮಾಷೆ ಮಾಡುವಷ್ಟು ನಾಟಕಗಳು ನಡೆಯುತ್ತಿದ್ದವು. ಒಂದೇ ವಿಚಿತ್ರವೆಂದರೆ ಹುಡುಗ-ಹುಡುಗಿಯರು ಒಟ್ಟಿಗೆ ಓದಲು ಅನುಮತಿ ನೀಡಿದ ಎಚ್ಚೆನ್ ಅವರು ನಾಟಕಗಳಲ್ಲಿ ಮಾತ್ರ ಒಟ್ಟಿಗೆ ಅಭಿನಯಿಸುವುದಕ್ಕೆ ಸುತರಾಂ ಒಪ್ಪಿಗೆ ನೀಡಲಿಲ್ಲ (ಅಂದು). ಯಾಕೆ ಎಂಬ ನಮ್ಮ ಪ್ರಶ್ನೆಗೆ ಮಾತ್ರ ''ಪ್ರಶ್ನಿಸದೇ ಒಪ್ಪಬೇಡಿ'' ಎನ್ನುವ ಎಚ್ಚೆನ್ ಅವರಿಂದ ಉತ್ತರ ಸಮಾಧಾನಕರವಾಗಿರಲಿಲ್ಲ.

ಇನ್ನು, ಅವರ ಬೋಧನಾ ವೈಖರಿಯ ಬಗ್ಗೆ ಎರಡು ಮಾತು. ಬಹಳಷ್ಟು ಜನರಿಗೆ ಅವರು ಬೋಧಕರೂ ಆಗಿದ್ದರು ಎಂಬುದು ತಿಳಿಯದಷ್ಟು ಅವರ ಇತರ ಗುಣಗಳು, ಸಾಹಸಗಳು, ಸಾಧನೆಗಳು ಜನಪ್ರಿಯವಾಗಿವೆ. ಆದರೆ ನನ್ನ ಮಟ್ಟಿಗೆ ಹೇಳುವುದಾದರೆ ಅವರು ಪರಿಣತಿಯುಳ್ಳ ಬೋಧಕರೂ ಆಗಿದ್ದರು. ನಮಗೆ ಬೋಧಿಸಿದ ಕೆಲವೇ ತರಗತಿಗಳಲ್ಲಿ ಅವರು ಸಾಕಷ್ಟು ಪ್ರಭಾವ ಬೀರಿದ್ದರು.

ಕಾಲೇಜಿನ ಹಿರಿಯ ವಿದ್ಯಾರ್ಥಿಗಳು ಕಾಲೇಜಿನೊಂದಿಗೆ ಸಂಪರ್ಕವನ್ನಿರಿಸಿಕೊಂಡು ಕೈಲಾದಷ್ಟು ಸೇವೆ ಸಲ್ಲಿಸಬೇಕೆಂಬುದು ಎಚ್ಚೆನ್ ಅವರ ಬಲವಾದ ಆಸೆ. ನಾನು ಕಾಲೇಜಿನಿಂದ ಹೊರಬಂದ ಕೆಲವು ವರ್ಷಗಳ ನಂತರ ಹಿರಿಯ ವಿದ್ಯಾರ್ಥಿಗಳ ಸಂಘ ಕ್ರಿಯಾಶೀಲವಾಗಿ, 'ಸಂಪರ್ಕ' ಎಂಬ ಪತ್ರಿಕೆಯ ಮೂಲಕ ಸೇತುವೆಯಂತೆ ಕಾರ್ಯ ನಿರ್ವಹಿಸುತ್ತಿದ್ದಾಗ ಎಚ್ಚೆನ್ ತುಂಬ ಉತ್ಸಾಹದಿಂದ ಪಾಲ್ಗೊಳ್ಳುತ್ತಿದ್ದರು. ಕಾರಣಾಂತರಗಳಿಂದ ಆ ಸಂಘ ನಂತರದಲ್ಲಿ ನಿಷ್ಕ್ರಿಯವಾಗಿ, ಈಗ ಮತ್ತೆ ಚಿಗುರೊಡೆದು ಸಕ್ರಿಯವಾಗಿದೆ.

ಹಲವು ವಿರೋಧಾಭಾಸಗಳ ನಡುವೆಯೂ ನಮ್ಮ ಹಾಗೂ ಕಾಲೇಜಿನ ಬಲವಾದ ಕೊಂಡಿಯಾಗಿ, ನಾವೆಲ್ಲ ಕಾಲೇಜಿನ ದಿನಗಳನ್ನು ನೆನಪಿಸಿಕೊಳ್ಳಲು ಸ್ಫೂರ್ತಿಯ ಸೆಲೆಯಾಗಿದ್ದ ಎಚ್ಚೆನ್ ಅವರು ಇನ್ನಿಲ್ಲ. ಅವರಂತಹವರು ಮತ್ತೆಲ್ಲಿ?

ಎಚ್. ವಿ. ನಟರಾಜ, ನಂ. ೨೧೦, ೪೫ನೇ ಅಡ್ಡರಸ್ತೆ, ೮ನೇ ಬ್ಲಾಕ್, ಜಯನಗರ, ಬೆಂಗಳೂರು-೮೨

# ಔದಾರ್ಯದ ವ್ಯಕ್ತಿತ್ವ

**ದೂ**ರವಾಣಿ ಸಂಖ್ಯೆ ೨೬೬೭೭೧೨೫ಗೆ ಇನ್ನು ಮುಂದೆ ನಾನು ಕರೆ ಮಾಡಲಾರೆ. ಆ ಸಂಖ್ಯೆಯಿಂದ ಇನ್ನು ಕರೆ ಬಾರದು. ನ್ಯಾಷನಲ್ ಕಾಲೇಜಿನ ಆವರಣದಲ್ಲೇ ನಾನು ಕೆಲಸ ಮಾಡುತ್ತಿರುವೆನಾದರೂ ಆ ಸಂಖ್ಯೆಯಿಂದ ನನಗೆ ಕನಿಷ್ಠ ವಾರಕ್ಕೆರಡು ಬಾರಿಯಾದರೂ ಕರೆ ಬರುತ್ತಿತ್ತು. ಫೋನ್ ರಿಂಗ್ ಆದಾಗ ರಿಸೀವರ್ ತಗೊಂಡ ಕೂಡಲೇ ಅದು ಎಚ್ಚೆನ್ ಆಗಿದ್ದರೆ ಆ ಕಡೆಯಿಂದ ''ನಾನಮ್ಮಾ...'' ಎಂಬ ಧ್ವನಿ ನನ್ನನ್ನು ಉತ್ಸಾಹಿತಳನ್ನಾಗಿ ಮಾಡುತ್ತಿತ್ತು. ಪರಸ್ಪರ ಕುಶಲೋಪರಿ, ಸುದ್ದಿ ಸಮಾಚಾರ, ಗುಳಪಾವಟೆ, ಚಟ್ನಿಪುಡಿ, ಗಸಗಸೆ ಪಾಯಸ... ಎಲ್ಲ ಚರ್ಚೆಯಾಗುವುದು.

ಸುಮಾರು ನಾಲ್ಕು ದಶಕಗಳಿಗೂ ಹತ್ತಿರ ನನ್ನ ಹಾಗೂ ಹೆಚ್ಚೆನ್‌ರವರ ಬಾಂಧವ್ಯದ ನಡುವಿನ ಕಾಲ. ಪ್ರಾಯಶಃ ನಾನು ಹೈಸ್ಕೂಲಿನಲ್ಲಿರುವಾಗ ಮೊದಲ ಬಾರಿಗೆ ಅವರನ್ನು ನಮ್ಮ ಮನೆಯಲ್ಲಿ ಕಂಡದ್ದು. ನನ್ನ ತಂದೆ ಪೂಜ್ಯ ಎಚ್. ಎನ್. ಕೆ. ರವರು ನ್ಯಾಷನಲ್ ಹೈಸ್ಕೂಲಿನಲ್ಲಿ ಉಪಾಧ್ಯಾಯರಾಗಿದ್ದರು. ಸಂಸ್ಕೃತ, ಕನ್ನಡ, ಇಂಗ್ಲಿಷ್‌ಗಳಲ್ಲಿ ಅಪಾರ ಪಾಂಡಿತ್ಯವಿದ್ದ ನನ್ನ ತಂದೆಯವರು ಜ್ಞಾನಸಂಪನ್ನರಾಗಿದ್ದರು. ಎಚ್ಚೆನ್‌ರವರಿಗೆ ಗುರು. ನನ್ನ ತಂದೆಯಲ್ಲಿ ಎಚ್ಚೆನ್‌ರವರಿಗೆ ತುಂಬ ಭಕ್ತಿ, ಗೌರವ, ಮೆಚ್ಚುಗೆ. ಎಚ್ಚೆನ್‌ರವರನ್ನು ಭೇಟಿ ಮಾಡಲು ಅನೇಕರು ಬರುತ್ತಿದ್ದರು. ಅಂಥ ಸಂದರ್ಭದಲ್ಲಿ ನಾನು ಆ ಸ್ಥಳದಲ್ಲಿದ್ದರೆ ನನ್ನನ್ನು ನನ್ನ ತಂದೆಯವರ ಹೆಸರು (ಕೆಲವು ವೇಳೆ ಪರಿಚಯ) ಹೇಳಿ ನನ್ನನ್ನು ಪರಿಚಯಿಸುತ್ತಿದ್ದರು. ಇದನ್ನು ಹೇಳುವ ಉದ್ದೇಶವಿಷ್ಟೆ: ಎಚ್ಚೆನ್ ವಿದ್ಯೆ, ಜ್ಞಾನಗಳ ಪಕ್ಷಪಾತಿ ಅಷ್ಟೇ ಅಲ್ಲ, ನನ್ನಂತಹ ಸಾಮಾನ್ಯ ವ್ಯಕ್ತಿಯನ್ನು ಗಣ್ಯರಿಗೆ ಪರಿಚಯಿಸಿ ನನಗೊಂದು ಸ್ಥಾನ ನೀಡುತ್ತಿದ್ದರು. ಈ ಬಗೆಯ ಔದಾರ್ಯ ಎಷ್ಟು ದೊಡ್ಡ ವ್ಯಕ್ತಿಗಳಲ್ಲಿರಲು ಸಾಧ್ಯ ?

ಎಚ್ಚೆನ್ ಒಂದು ವ್ಯಕ್ತಿಯಲ್ಲ, ಅವರು ಒಂದು ಶಕ್ತಿ, ಒಂದು ಸಂಸ್ಥೆ ಎಂದೇ ನನ್ನ ಭಾವನೆ. ತಮ್ಮ ಬದುಕನ್ನು ಸಮಾಜದ ಏಳ್ಗೆಗಾಗಿ, ಬೆಳವಣಿಗೆಗಾಗಿ, ಮೌಲ್ಯಗಳಿಗಾಗಿ ಅರ್ಪಿಸಿಕೊಂಡು ಬಾಳಿದ ನಿಷ್ಕಳಂಕ, ನಿರ್ಮಲ, ಶುದ್ಧ ಚಾರಿತ್ರ್ಯದ ವ್ಯಕ್ತಿ. ವಿಜ್ಞಾನ, ವೈಚಾರಿಕತೆ ಅವರ ಬದುಕಲ್ಲಿ ಎಷ್ಟು ಪ್ರಮುಖವಾಗಿದ್ದವೋ ಅಷ್ಟೇ ಪ್ರಾಮುಖ್ಯತೆ ಪಡೆದಿದ್ದ ಅಂಶಗಳೆಂದರೆ ಸಂಸ್ಕೃತಿ, ಪರಂಪರೆ, ಕಲೆ, ನಾಟಕ, ಸಂಗೀತ, ಸಾಮಾಜಿಕ ಕಳಕಳಿ. ಇದರ ಫಲಶ್ರುತಿಯೇ ಬೆಂಗಳೂರು ವಿಜ್ಞಾನ ವೇದಿಕೆ, ಬೆಂಗಳೂರು ಸಮಾಜವಿಜ್ಞಾನ ವೇದಿಕೆ, ಬೆಂಗಳೂರು ಲಲಿತ ಕಲಾ ಪರಿಷತ್ತು. ಬದುಕಿಗೆ ಅವಶ್ಯವಾದ ಎಲ್ಲ ಅಂಶಗಳಿಗೆ ಸಮಾನವಾದ ಒತ್ತು ನೀಡುತ್ತಿದ್ದುದು ಇವರ ವೈಶಿಷ್ಟ್ಯ. Small is not insignificant ಎಂಬಂತೆ ಪ್ರತಿ ಒಂದು ಸಣ್ಣ ವಿಷಯವನ್ನೂ ಕೂಲಂಕಷವಾಗಿ ವಿಚಾರಿಸಿ, ವಿಶ್ಲೇಷಿಸಿ ಅನಂತರವೇ ತೀರ್ಮಾನ ತೆಗೆದುಕೊಳ್ಳುತ್ತಿದ್ದುದು. ಯಾರಾದರೂ ಗಮನಿಸಬಹುದಾದಂತಹ ಚಿಕ್ಕ ವಿಚಾರಗಳಿಗೆ ತುಂಬಾ ಮಹತ್ವಕೊಟ್ಟು ಚಡಪಡಿಸುತ್ತಿದ್ದರು.

ಒಮ್ಮೆ ಭೋಜನಕೂಟವೊಂದು ಏರ್ಪಾಡಾಗಿತ್ತು. ತುಂಬ ಜನ ಊಟಕ್ಕೆ ಬರುವವರಿದ್ದರು. ಎಚ್ಚೆನ್ ಅವರ ತೀರ್ಮಾನದಂತೆ ಒಬ್ಬಟ್ಟಿನ ಏರ್ಪಾಡಾಗಿತ್ತು. (ಸಾಂಪ್ರದಾಯಿಕ ಊಟ, ತಿಂಡಿಗಳಿಗೆ ಮಹತ್ವ ನೀಡುತ್ತಿದ್ದರು.) ಒಬ್ಬಟ್ಟುಗಳ ಸಂಖ್ಯೆ, ಒಬ್ಬಟ್ಟು ಬರುವ ವೇಳೆ, ಅವುಗಳ ರುಚಿ ಪಾಕ ಇವುಗಳ ಬಗ್ಗೆ ತುಂಬ ತಲೆಕೆಡಿಸಿಕೊಂಡರು. ಭೋಜನದ ದಿನ ಯಾರೆಷ್ಟು ಹೇಳಿದರೂ ಕೇಳದೆ (ಕೈಲಾಗುತ್ತಿರಲಿಲ್ಲ, ಆದರೂ ಹಟ!) ಎರಡು ಮೂರು ಪಂಕ್ತಿಗೂ ತಾವೇ ಕೈಯಾರ ಭಕ್ಷ್ಯ ಬಡಿಸಿ ತೃಪ್ತಿಪಟ್ಟು ಎಲ್ಲರನ್ನೂ ಖುಷಿಪಡಿಸಿದರು. ಇಂತಹ ಒಂದು ಆತ್ಮೀಯತೆ, ಪ್ರೀತಿ, ಕೌಟುಂಬಿಕ ವಾತಾವರಣ, ಕಾಳಜಿಗಳನ್ನು ಅವರು ಎಲ್ಲರಲ್ಲೂ ತೋರುತ್ತಿದ್ದುದರಿಂದಲೇ ಅವರು ಎಲ್ಲರಿಗೂ 'ಪ್ರೀತಿಯ ಎಚ್ಚೆನ್' ಆಗಿದ್ದರು.

ನಾನು ಅವರ ವಿದ್ಯಾರ್ಥಿನಿಯಾಗಿದ್ದೆ, ಅರವತ್ತರ ದಶಕದಲ್ಲಿ. ಅವರೊಬ್ಬ ಪ್ರಾಮಾಣಿಕ ಶಿಷ್ಯವಾತ್ಸಲ್ಯ ತುಂಬಿದ್ದ, ಆದರ್ಶ ಅಧ್ಯಾಪಕರು. ಅವರ ತರಗತಿ ಎಂದರೆ ವಿದ್ಯಾರ್ಥಿಗಳಿಗೆಲ್ಲ ಒಂದು ರೀತಿ ಖುಷಿ, ಉತ್ಸಾಹ. ಎಂತಹ ಕ್ಲಿಷ್ಟಕರ ವಿಷಯವನ್ನೂ ಉದಾಹರಣೆ ಮೂಲಕ ಸರಳವಾಗಿಸಿಬಿಡುತ್ತಿದ್ದರು. ಒಂದೊಂದು ದಿನ ಅವರ ಇಡೀ ತರಗತಿಯಲ್ಲಿ ಪಾಠವೇ ನಡೆಯುತ್ತಿರಲಿಲ್ಲ. ಟೇಬಲ್ ಹತ್ತಿ ಚಕ್ಕಮಕ್ಕಳ ಹಾಕಿ ಕೂತು ನಮ್ಮನ್ನು ನಗಿಸುತ್ತಾ ಹಾಸ್ಯ ಮಾಡುತ್ತಾ ಅನೇಕ ಗಹನ ವಿಷಯಗಳನ್ನು ನಮ್ಮೊಂದಿಗೆ ಮುಕ್ತವಾಗಿ ಚರ್ಚಿಸುತ್ತಿದ್ದರು. ಒಂದು ರೀತಿಯಲ್ಲಿ 'ತೆರೆದ ಮನ' ಅವರೊಂದಿಗಿನ ಚರ್ಚೆ. ಒಂದೊಂದು ಬಾರಿ ನಾವು ಅವರನ್ನು ಹಾಡು ಹೇಳಲು ಪ್ರೇರೇಪಿಸಿ, ಪೀಡಿಸುತ್ತಿದ್ದೆವು. ಅವರು ತಮ್ಮ ಗೊಗ್ಗರು ಕಂಠದಲ್ಲಿ ಉತ್ಸಾಹದಿಂದ, ನಗುತ್ತಾ ''ನಮೋ ವೆಂಕಟೇಶಾ ನಮೋ ತಿರುಮಲೇಶಾ...'' ಹಾಡಲು ಪ್ರಾರಂಭಿಸುತ್ತಿದ್ದಂತೆ ಚಪ್ಪಾಳೆ ತಟ್ಟಿ ಗಲಾಟೆ ಎಬ್ಬಿಸಿ 'ಸಾಕು ಸಾಕು', 'ಒನ್ಸ್ ಮೋರ್' ಕೂಗುಗಳನ್ನೆಬ್ಬಿಸಿ ಗುಲ್ಲು ಮಾಡುತ್ತಿದ್ದೆವು. ಅವರೆಂದಿಗೂ ವಿದ್ಯಾರ್ಥಿಗಳನ್ನು ಕಠಿಣವಾಗಿ ಬೈದಿದ್ದೆ ಇಲ್ಲಾ! (ಅವರ ಬಗ್ಗೆ 'ವಿದ್ಯಾರ್ಥಿಗಳ ಪಕ್ಷಪಾತಿ' ಎಂಬ ನವಿರು ಆಕ್ಷೇಪಣೆಯೂ ಇತ್ತು.)

ತೆಳು ಹಾಸ್ಯ ಎಚ್ಚೆನ್‌ರವರ ಜೀವನದ ಅವಿಭಾಜ್ಯ ಅಂಗವಾಗಿತ್ತು. ಎಂತಹ ಗಂಭೀರ, ತೊಡಕು ಪ್ರಸಂಗಗಳನ್ನೂ ತಮ್ಮ ಹಾಸ್ಯದಿಂದ ದುರ್ಬಲಗೊಳಿಸಿ ಬಿಗುವನ್ನು ಸಡಿಲಿಸಿ ಸಮಸ್ಯೆ ಹೊತ್ತು ಬಂದವರಿಗೆ ಅಯ್ಯೋ ಇಷ್ಟೇನಾ ಎಂದು ನೆಮ್ಮದಿಯ ಉಸಿರು ಬಿಡುವಂತೆ ಮಾಡುವ ಮೋಡಿ ಅವರಿಗೆ ಕರಗತವಾಗಿತ್ತು. ಇದಕ್ಕೊಂದು ಉದಾಹರಣೆಯಾಗಿ ಪ್ರಸಂಗವೊಂದನ್ನು ಹೇಳಬಯಸುತ್ತೇನೆ. ತುಂಬ ಹಿಂದೆ, ನಾನು ಕೆಲಸಕ್ಕೆ ಕಾಲೇಜಿನಲ್ಲಿ ಸೇರಿದ ಹೊಸತು. ಚಿಕ್ಕ ವಯಸ್ಸು. ಪರೀಕ್ಷೆಯ ಮೇಲ್ವಿಚಾರಣೆ ಕೆಲಸವಿತ್ತು. ಆಗ ವಿದೇಶಿ ವಿದ್ಯಾರ್ಥಿಗಳು ನಮ್ಮ ಕಾಲೇಜಿನಲ್ಲಿದ್ದರು. ಒಬ್ಬ ವಿದೇಶಿ ವಿದ್ಯಾರ್ಥಿ ಚೀಟಿ ಇಟ್ಟುಕೊಂಡು ನಕಲು ಮಾಡುತ್ತಿದ್ದು, ನಾನು ಅವನನ್ನು ಹಿಡಿದು ಪ್ರಿನ್ಸಿಪಾಲರಿಗೆ ತಿಳಿಸಿದಾಗ ಆ ವಿದ್ಯಾರ್ಥಿ ಡಿಬಾರ್ ಆದ. ಅನಂತರ ಅವನು ನನ್ನ ಬಳಿ ಬಂದು ಹೆದರಿಸಿ ಧಮಕಿ ಹಾಕಿ ಹೋದ. ಧಾಂಡಿಗನಂತಿದ್ದ ಅವನ ವ್ಯಕ್ತಿತ್ವ, ಬೆದರಿಕೆ ನನ್ನಲ್ಲಿ ದಿಗಿಲು ಉಂಟುಮಾಡಿದವು. ಚಿಕ್ಕವಳಾಗಿದ್ದ ನನಗೆ ವಿಪರೀತ ಹೆದರಿಕೆ ಉಂಟಾಗಿತ್ತು. ಅವನನ್ನು ಹಿಡಿದಾಗಿನ ಧೈರ್ಯ ನನಗೆ ಆಮೇಲಿರಲಿಲ್ಲ. ನಾನು ತುಂಬ ಭಯಪಟ್ಟು ಗಾಬರಿ, ಕಳವಳಗಳಿಂದ ಎಚ್ಚೆನ್ ಬಳಿ ಧಾವಿಸಿ ವಿಷಯ ತಿಳಿಸಿದೆ. ನನ್ನ ಮೊಗದಲ್ಲಿ ತುಂಬಿದ್ದ ಭಯ, ಆತಂಕ, ಗಾಬರಿಗಳನ್ನು ಕಂಡು ಎಚ್ಚೆನ್ ನಕ್ಕುಬಿಟ್ಟು ''ಅವನೇನಮ್ಮಾ ಅವನಿಗೆ ಇಂಗ್ಲಿಷ್ ಸರಿಯಾಗಿ ಮಾತಾಡೋಕೆ ಬರಲ್ಲ, ನೀನ್ಯಾಕಮ್ಮ ಹೆದರತಿ'' ಎಂದು ಧೈರ್ಯ ಹೇಳಿ ಪ್ಯೂನ್ ಒಬ್ಬನನ್ನು ಜತೆ ಮಾಡಿ

ಮನೆವರೆಗೆ ಕಳುಹಿಸಿದರು. ಎಚ್ಚೆನ್ ಮಾತು ಕೇಳಿ ನನಗೆ ಎಷ್ಟೋ ಸಮಾಧಾನ ಉಂಟಾಯಿತು. ಇಂತಹ down to earth ಎನ್ನುವಂತಹ ವ್ಯಕ್ತಿ ಎಷ್ಟು ಆಡಳಿತ ಮಂಡಲಿಗಳಲ್ಲಿರಲು ಸಾಧ್ಯ ? ''ನಗುವು ಸಹಜ ಧರ್ಮ ನಗಿಸುವುದು ಪರಧರ್ಮ...'' ಎಂಬ ಕಗ್ಗದ ಮುಕ್ತಕಕ್ಕೆ ಎಚ್ಚೆನ್‌ರವರು ಒಂದು ಸಾಕ್ಷಿ.

ಮಹಿಳೆಯರೆಂದರೆ ಎಚ್ಚೆನ್‌ರವರಿಗೆ ತುಂಬ ಗೌರವ. ಮಾತೃಸ್ಥಾನವು ತುಂಬ ಅಮೂಲ್ಯವಾದುದು, 'ಕುಪುತ್ರೋ ಜಾಯೇತ ಕುಮಾತಾ ನ ಭವತಿ' ಎಂಬ ಸೂಕ್ತಿಯನ್ನು ಪದೇ ಪದೇ ಉದ್ಧರಿಸುತ್ತಿದ್ದರು. ''ಏನಮ್ಮಾ ನೀವುಗಳು ಮನೆ ಗಂಡ ಮಕ್ಕಳು ಅಂತ ಎಷ್ಟೊಂದು ಕೆಲ್ಸ ಮಾಡಿ ಇಲ್ಲೂ ದುಡೀತೀರಲ್ಲಮ್ಮ. ತಾಯಂದಿರು ಎಷ್ಟು ತ್ಯಾಗ ಮಾಡಿ ಮಕ್ಕಳನ್ನ ಬೆಳೆಸ್ತೀರಾ. ಅದಕ್ಕೇನಮ್ಮಾ ನಾನು ಹೇಳೋದು ತಾಯಿಗಿಂತ ಶ್ರೇಷ್ಠವಾದ ವ್ಯಕ್ತಿ ಯಾರೂ ಇಲ್ಲ ಅಂತ. ವಯಸ್ಸಾದ ಮೇಲೆ ತಾಯಿನ ಚೆನ್ನಾಗಿ ನೋಡ್ಕೋಬೇಕು'' ಎಂದು ತುಂಬು ಕಳಕಳಿಯಿಂದ ಸಮಾಜದಲ್ಲಿ ತಾಯಂದಿರಿಗೆ ಉನ್ನತ ಸ್ಥಾನವನ್ನು ಇತ್ತಿದ್ದರು. ಮಾತೃಋಣ ಹೆಚ್ಚಿನದು ಎನ್ನುತ್ತಿದ್ದರು.

ಎಲ್ಲರಲ್ಲೂ ಸ್ನೇಹ, ಸಲುಗೆ, ಪ್ರೀತಿ, ಆತ್ಮೀಯತೆಗಳನ್ನು ತೋರುತ್ತಿದ್ದ ಎಚ್ಚೆನ್ ಆಶಾವಾದಿ. ಅವರಿಗೆ ಬದುಕೆಂದೂ ಭಾರವಾಗಿರಲಿಲ್ಲ. ಬದುಕಿರುವವರೆಗೂ ದುಡಿಯಬೇಕು. ದುಡಿದು ಸುಸಮಾಜವನ್ನು ಕಟ್ಟಬೇಕು ಎನ್ನುತ್ತಿದ್ದರು. ನಾಡು, ನುಡಿ ಎರಡೂ ಅವರಿಗೆ ಮಹತ್ವವಾಗಿದ್ದವು. ತಮಗೆ ಪರಿಚಯದ ಯಾರೇ ಅನಾರೋಗ್ಯದಿಂದ ಬಳಲುತ್ತಿದ್ದರೂ ಅವರನ್ನೆಲ್ಲಾ ಭೇಟಿ ಮಾಡಿ ಸಾಂತ್ವನ ಹೇಳಿಬರುತ್ತಿದ್ದ ಹೃದಯವಂತ ಆತ.

''ಒಂದು ದಿನ ಮುಂಚೆ ಸಾಯೋಕೂ ನನಗಿಷ್ಟವಿಲ್ಲಮ್ಮ'' ಎಂದು ಬದುಕಿಗೆ ಅರ್ಥವಿದೆ ಎಂದು ಪ್ರತಿಪಾದಿಸಿದ್ದ ಎಚ್ಚೆನ್ ನಿರಾಶಾವಾದಿಗಳಿಗೆ ದಾರಿದೀಪವಾಗಿದ್ದರು.

'ಒಂದಗಳು ಹೆಚ್ಚಿರದು, ಒಂದಗಳು ಕೊರೆಯಿರದು
ತಿಂದು ನಿನ್ನನ್ನ ಋಣ, ತೀರುತಲೆ ಪಯಣ
ಹಿಂದಾಗದೊಂದು ಚಣ, ಮುಂದಕುಂ ಕಾದಿರದು
ಸಂದ ಲೆಕ್ಕವದೆಲ್ಲ– ಮಂಕುತಿಮ್ಮ'

ಎಂಬಂತೆ ಲೆಕ್ಕ ತೀರುತಲೆ ನಡೆದರು 'ಹೋರಾಟ ಹಾದಿಯಲ್ಲಿ' ಚಿರಶಾಂತಿಯ ಪಡೆಯಲು, ಸಾರ್ಥಕ ಜೀವಿತದ ಕಲಿ ಎಚ್ಚೆನ್.

ಎಲ್ಲರಿಗಮೀಗನಮೊ – ಬಂಧುಗಳೆ, ಭಾಗಿಗಳೆ
ಉಲ್ಲಾಸಪಿತ್ತವರೆ, ಮನವ ತೊಳೆದವರೆ ॥
ಟೊಳ್ಳು ಜಗ ಸಾಕು ಬಾಳ್ – ಎನಿಸಿ ಗುರುವಾದವರೆ ।
ಕೊಳ್ಳಿರೀ ನಮಸವನು – ಮಂಕುತಿಮ್ಮ
ಎಂದೆನ್ನುತ್ತ ಆಗಸದಲ್ಲೊಂದು ಮಿನುಗು ತಾರೆಯಾದರು.

ಎಚ್. ಕೆ. ಅಂಬಿಕಾ, ೧೯/೧, ೪ನೇ ಮುಖ್ಯರಸ್ತೆ, ೯ನೇ ಕ್ರಾಸ್, ಎನ್. ಆರ್. ಕಾಲೋನಿ, ಬೆಂಗಳೂರು - ೧೯

## ಎಚ್. ಎನ್. – ನಾನು ಕಂಡಂತೆ

ಎಚ್. ಎನ್. ಎಂದೇ ಪ್ರಸಿದ್ಧರಾಗಿದ್ದ ಡಾ॥ ಎಚ್. ನರಸಿಂಹಯ್ಯನವರ ಬಗ್ಗೆ ವಿವಿಧ ರೀತಿಯ ಅಭಿಪ್ರಾಯಗಳು ಪ್ರಕಟವಾಗಿರುವುದುಂಟು. ಈ ಅಭಿಪ್ರಾಯಗಳು ಅವುಗಳನ್ನು ವ್ಯಕ್ತಪಡಿಸುವವರ ಮನೋಭಾವವನ್ನಾಧರಿಸಿಯೇ ಇರುತ್ತವೆಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಅಪ್ಪಟ ಗಾಂಧಿವಾದಿ, ವಿಚಾರವಾದಿ, ಸರಳಜೀವಿ, ನಿಸ್ವಾರ್ಥಿ, ಅಪ್ರತಿಮ ಕ್ರಿಯಾಶೀಲ, ಛಲಗಾರ, ಉತ್ತಮ ನಾಯಕ ಮುಂತಾಗಿ ಅವರನ್ನು ಹೊಗಳಿದವರು ಕೆಲವರಾದರೆ ಹಠಮಾರಿ, ವ್ಯವಸ್ಥೆಯ ಪರ, ರಾಜಕಾರಣಿಗಳನ್ನೂ ಮೀರಿಸುವ ಚಾಣಾಕ್ಷ, ವೈರುಧ್ಯಗಳ ಗೂಡು ಎಂದು ಅವರನ್ನು ಟೀಕಿಸುವವರು ಮತ್ತೆ ಕೆಲವರು. ಎಚ್.ಎನ್. ಇವೆಲ್ಲವೂ ಆಗಿರಬಹುದು. ಅದಕ್ಕೆ ಕಾರಣಗಳೂ ಇರಬಹುದು. ಹಾಗಾಗಿ ಯಾವುದೇ ಪೂರ್ವಗ್ರಹವಿಲ್ಲದೇ ಅವರನ್ನು ವಸ್ತುನಿಷ್ಠವಾಗಿ ಅರ್ಥ ಮಾಡಿಕೊಳ್ಳುವ ಪ್ರಯತ್ನವಿಲ್ಲಿದೆ. (ನಾನು ಪೂರ್ವಗ್ರಹರಹಿತನೆಂದು ಭಾವಿಸುವುದೂ ಸಹ ಒಂದು ರೀತಿಯ ಪೂರ್ವಗ್ರಹವಾಗಿರಬಹುದೆಂಬ ಅರಿವೂ ನನಗಿದೆಯೆಂದು ಮೊದಲೇ ಸ್ಪಷ್ಟಪಡಿಸುತ್ತೇನೆ.)

## ಕೆಂಪು ತೋಟ ಮತ್ತು ಡಾ॥ ಎಚ್ಚೆನ್

೧

ಬಹಳ ದಿನಗಳ ಬಳಿಕ ಅಚಾನಕ ಸಿಕ್ಕಿದರು ಎಚ್ಚೆನ್
ಸಂಜೆ ಕೆಂಪು ತೋಟದಲ್ಲಿಂದು :
ಮಳೆ ಬಂದು ಇಳೆ ಮಿಂದು
ಮಡಿಯಾಗಿ ಮೈ ಮರೆಸಿತ್ತು
ಸುತ್ತಮುತ್ತಲಿನ ಅಚ್ಚ ಹಸಿರು ದುಂದು.
ಲಾಗಾಯ್ತಿನಿಂದಿವರಿಗೆ ನನ್ನ ಬಗೆಗೆ ಅಮಿತ ಕಕ್ಕುಲತೆ :
''ಬೆಳಿಗ್ಗೆಯಷ್ಟೇ ಭಾಷಣದಲ್ಲಿ ಉದ್ಧರಿಸಿದೆ ನಿಮ್ಮ ಕವಿತೆ''
ಎಂದರು. ಏನೊ ಹೊಳೆದಂತೆ ಗಹಗಹಿಸಿ ಮಾತು
ಮುಂದುವರಿಸಿದರು :
''ಇಲ್ಲಿನೊಂದೊಂದು ಮರ ಗಿಡ ಬಳ್ಳಿ ನನಗೆ
ಪರಿಚಯವುಂಟು,
ಇವಕು ನನಗು ಮೂವತ್ತೆಂಟು ವರ್ಷಗಳ ದೀರ್ಘ ನಂಟು.
ಮುಂಜಾನೆ ಪ್ರತಿನಿತ್ಯ ಇಲ್ಲಿ ವಾಕಿಂಗ್ ಬರುತ್ತಿದ್ದ ರೂಢಿ
ಅಸ್ವಸ್ಥತೆಯ ನಿಮಿತ್ತ ಕೆಲ ಸಮಯದಿಂದ ತಪ್ಪಿತ್ತು ನೋಡಿ,
ಅದರಿಂದ : 'ಈಚೆಗೇಕೋ ಮುದುಕ ಪಾದ
ಬೆಳಸಿಲ್ಲವೀ ಎಡೆಗೆ,
ಗೊಟಕ್ಕೆಂದು ಪಯಣಿಸಿದನೋ ಹೇಗೆ ಮೇಲುಗಡೆಗೆ ?'
ಎನುವ ಈ ತರು ಲತೆಗಳನುಮಾನ ನೀಗಲಿಕೆಂದೇ,
ಮಳೆಯಿದ್ದರೂ ಈ ಸಂಜೆ ಇಲ್ಲಿಗೆ ಬಂದೆ''
ಎನ್ನುತ್ತ , ನೆನಪುಗಳ ತೋಳ್ತೆಕ್ಕೆಗೆ ಸಂದರು;
ಹೌದೆಂಬಂತೆ ತೆಳ್ಳನೆಯ ಸುಯ್ಗಾಳಿ ಬೀಸಿ,
ಬದಿಯ ವೃಕ್ಷದಿಂದುದುರಿದಾಕಾಶ ಮಲ್ಲಿಗೆ ಬೆಳ್ನಗೆ ಸೂಸಿ,
ಅಡಿಯ ನೆಲ ಪೂರ್ತಿ ಕಣ್ಸೊಗದ ಬಂದರು.

೨

ಪಾಠ ಹೇಳದಿದ್ದರೂ ನನಗಿವರು ಕಾಲೇಜಿನಲ್ಲಿ
ಎಲ್ಲರ ಹಾಗೆ ನನ್ನ ಪಾಲಿಗು ಮೇಷ್ಟ್ರೆ
(ಇವರು ಬರುವುದ ಕಂಡು ಹಿಂದೆ ಸಿಗರೇಟನಾರಿಸಿ,
ದೂರ ಸರಿಸಿದ್ದುಂಟು ಆ್ಯಷ್ ಟ್ರೆ.)
ಮಾನಾಭಿಮಾನಗಳ ಪ್ರಶ್ನೆಯೆದುರಾದಾಗ
ಮಾಡಿಕೊಂಡಿದ್ದಿಲ್ಲ ಬಿಲ್‌ಕುಲ್ ರಾಜಿ,
ಹಲವು ಪೊಗದಸ್ತು ಹುದ್ದೆಗಳ ಈ ಮಾಜಿ.
ಹಾಗೆಯೇ, ಹಿರಿಯರೊ ಕಿರಿಯರೊ ಭೇದವೆಣಿಸದೆ,
ಅಂತಸ್ತು ಕುಲ ಆಚಾರ ಕಿಂಚಿತ್ತು ಗಣಿಸದೆ–
ಕಂಡಿತೇ ಅವರಲ್ಲಿ ಕಣದಷ್ಟು ಗುಣ,
ಹೊಗಳಿಕೆಯ ಹತ್ತು ಮಣ
ಹೊರೆಸಿದಲ್ಲದೆ ತಣಿವ ಕುಳವಲ್ಲ ಈ ಪರ ಹಿತೈಷಿ ;
ಅದಕಿಲ್ಲವೇ ನಾನೆ ಜ್ವಲಂತ ಸಾಕ್ಷಿ ?

೩

ಇದೆಲ್ಲ ಒತ್ತಟ್ಟಿಗಿರಲಿ.
ಲಾಲ್‌ಬಾಗಿಗೆ ಬರೋಣ ಮರಳಿ.
ಗಾದಿಗೆಂದೂ ತಾನೆ ಮುಂದಾಗಿ ಚೆತಾವಣಿಸದ
ಗಾಂಧಿಯನುಮೋದಿ,
ಷಾದಿಯಾಗದ ಈ ವಿಚಾರಪೂಜಕ 'ನಿರೀಶ್ವರವಾದಿ',
ದೈವಸೃಷ್ಟಿಯ ವಿವಿಧ ತರು ಸಂತತಿಯ ಚೆಲ್ವಿಕೆಗೆ
ಮನ ಸೋತು ಮೋಹಗೊಂಡಿರುವಮೋಘ ಪರಿ
ಬರಿಸುವುದು ಸಂಸಾರಿ ಆಸ್ತಿಕರಿಗೂ ಮಹದಚ್ಚರಿ.
ಜಂಗುಳಿಯಲ್ಲಿ ಗುರುತಿಸದಷ್ಟು ಸರಳ ಖಾದಿವ್ರತಸ್ಥ ಎಚ್ಚೆನ್
ಮತ್ತವರ ಬದುಕು ಸದಾ ಕಾಲಕ್ಕು ದೊಡ್ಡ ಕ್ವೆಶ್ಚನ್.

– ಕೆ ಎಸ್. ನಿಸಾರ್ ಅಹಮದ್ : ಪ್ರಾತಿನಿಧಿಕ ಕವನಗಳು ಸಂಕಲನದಿಂದ

೧೯೭೧ರ ಜೂನ್‌ನಲ್ಲಿ ಗೌರಿಬಿದನೂರಿನ ನ್ಯಾಷನಲ್ ಕಾಲೇಜಿನಲ್ಲಿ ಇಂಗ್ಲಿಷ್ ಅಧ್ಯಾಪಕನಾಗಿ ಸೇರುವ ಹೊತ್ತಿಗೆ ನನಗೆ ಎಚ್.ಎನ್.ರವರು ಅಷ್ಟು ಪರಿಚಿತರೂ ಅಲ್ಲ, ಅಥವಾ ಅಪರಿಚಿತರೂ ಅಲ್ಲ. ಗೌರಿಬಿದನೂರು ತಾಲೂಕಿನ ಮೂಲದವನೇ ಆದರೂ ಆಂಧ್ರದಲ್ಲಿಯೇ ಬೆಳೆದಿದ್ದ ನನಗೆ ಅವರ ಸಾಧನೆಗಳ ಬಗ್ಗೆ ಸ್ವಲ್ಪ ಮಾತ್ರದ ಪರಿಚಯವಿತ್ತು. ಆ ಕಾಲೇಜು ಪ್ರಾರಂಭಗೊಂಡ ಮೊದಲ ವರ್ಷದಲ್ಲಿ(೧೯೬೪-೬೫) ನನ್ನ ತಂದೆಯವರು ಅಲ್ಲಿ ತೆಲುಗು ಅಧ್ಯಾಪಕರಾಗಿ ಕೆಲಸ ಮಾಡಿದ್ದರಿಂದ ಆ ಪರಿಚಯ ಸಾಧ್ಯವಾಯಿತು.

೧೯೯೨ರ ಜೂನ್‌ವರೆಗೂ ಗೌರಿಬಿದನೂರಿನಲ್ಲಿ ಕೆಲಸ ಮಾಡುವ ಕಾಲದಲ್ಲಿ ಎಚ್.ಎನ್.ರವರ ಹತ್ತಿರದ ಪರಿಚಯವಾಯಿತು. ನನ್ನ ಹಾಗೂ ನನ್ನ ಕೆಲವು ಸಹೋದ್ಯೋಗಿ ಮಿತ್ರರ ಸಮಾಜಮುಖಿ ಕಾರ್ಯಕ್ರಮಗಳಿಗೆ ಅವರು ಬೆಂಬಲ ನೀಡಿದ್ದುಂಟು. ಅದೇ ಸಮಯದಲ್ಲಿ ಕಾಲೇಜಿನ ಕೆಲವು ವಿದ್ಯಮಾನಗಳ ವಿಷಯದಲ್ಲಿ ಅವರ ನಿರ್ಧಾರಗಳ ಬಗ್ಗೆ ನನ(ಮ)ಗೆ ಮತ್ತು ನನ್ನ(ಮ್ಮ) ನಿಲುವುಗಳ ಬಗ್ಗೆ ಅವರಿಗೆ ಅಸಮಾಧಾನವುಂಟಾಗಿದ್ದೂ ಇದೆ. ಕೆಲವು ಸಂದರ್ಭಗಳಲ್ಲಿ ಸಭೆಗಳಲ್ಲಿ ಅವರ ಜತೆ ವಾಗ್ವಾದದಲ್ಲಿ ತೊಡಗಿದ್ದೂ ನಡೆಯಿತು. ಆದರೆ ಇಂಥ ಚರ್ಚೆಗಳು ವೈಯಕ್ತಿಕ ನೆಲೆಯಲ್ಲಿ ಅಲ್ಲದೆ ನಿಲುವುಗಳಿಗೆ ಸಂಬಂಧಪಟ್ಟವು ಎನ್ನುವುದು ಇಬ್ಬರಿಗೂ ಸ್ಪಷ್ಟವಾಗಿತ್ತು.

೧೯೯೨ರಲ್ಲಿ ನನ್ನನ್ನು ಜಯನಗರದ ನ್ಯಾಷನಲ್ ಕಾಲೇಜಿಗೆ ವರ್ಗ ಮಾಡಲೇಬೇಕಾಗಿ ಬಂದು ಒಂದು ಗ್ರಾಮಾಂತರ ಪ್ರದೇಶದ ಕಾಲೇಜಿನಿಂದ ನಗರದ ಕಾಲೇಜಿಗೆ ಬಂದೆ. ನಂತರವೂ ನಾನು ಅವರ ಆಪ್ತವಲಯಕ್ಕೆ ಸೇರಿದವನೇನೂ ಆಗಿರಲಿಲ್ಲ. ೨೦೦೨ರ ಜನವರಿಯಲ್ಲಿ ಮತ್ತೆ ಗೌರಿಬಿದನೂರಿನ ಕಾಲೇಜಿಗೆ ಪ್ರಿನ್ಸಿಪಾಲನಾಗಿ ನನ್ನನ್ನು ನೇಮಿಸುವ ಹಿಂದೆ ನನ್ನ ಬಗ್ಗೆ ಅವರಿಗಿದ್ದ ನಂಬಿಕೆಯೇ ಕಾರಣವಾಗಿತ್ತು. ಅಂದಿನಿಂದ ಅವರನ್ನು ಇನ್ನೂ ಹತ್ತಿರದಿಂದ ನೋಡುವ ಅವಕಾಶ ಸಿಕ್ಕಿತು. ಈ ಸಮಯದಲ್ಲಿಯೂ ಅವರ ಬಗ್ಗೆ ನನಗಿದ್ದ ಅಭಿಪ್ರಾಯಗಳು ಅಷ್ಟೇನೂ ಬದಲಾಗಲಿಲ್ಲ.

ಅವರನ್ನು ಆರಂಭದಿಂದಲೂ ನಾನು ಗೌರವಿಸಿದ್ದು ಅವರ ವೈಚಾರಿಕತೆಗಾಗಿ, ಮೂಢ ನಂಬಿಕೆಗಳ ವಿರುದ್ಧ ಅವರು ಸಾರಿದ್ದ ಸಮರಕ್ಕಾಗಿ. ಅವರು ಉದ್ದೇಶಪೂರ್ವಕವಾಗಿಯೇ ಸರಳ ಜೀವನವನ್ನು ಆರಿಸಿಕೊಂಡು ತಮ್ಮ ಜೀವನವನ್ನು ಸಂಪೂರ್ಣವಾಗಿ ತಮ್ಮನ್ನು ಬೆಳೆಸಿದ ವಿದ್ಯಾಸಂಸ್ಥೆಯ ಏಳ್ಗೆಗಾಗಿ ಮುಡಿಪಾಗಿಟ್ಟರು. ತೀರ ಬಡತನವಿದ್ದರೂ ಏನಾದರೂ ಸಾಧಿಸಲೇಬೇಕೆಂಬ ಗಟ್ಟಿ ನಿರ್ಧಾರದೊಂದಿಗೆ ತಮಗೆ ಸಾಧ್ಯವಾಗಿದ್ದೆಲ್ಲವನ್ನೂ ಸಾಧಿಸಿದ ಛಲಗಾರ. ಅವರ ಸಾಧನೆಯನ್ನು ಮೀರಿಸಿದ ಹಲವರಿರಬಹುದು. ಆದರೆ ಹಲವಾರು ಅಡ್ಡಿ, ಆತಂಕಗಳ ನಡುವೆ ಅವರು ಮಾಡಿದ ಸಾಧನೆ, ವಿದ್ಯಾರ್ಥಿಗಳಿಗೆ ಅವರು ನೀಡಿದ ಪ್ರೀತಿ ಮತ್ತು ಅವರಿಂದ ಪಡೆದ ಪ್ರೀತಿ ಮತ್ತು ಗೌರವ – ಇವು ಅವರನ್ನು ವಿಶಿಷ್ಟವ್ಯಕ್ತಿಯಾಗಿಸುತ್ತವೆ.

ಇದೇ ಸಂದರ್ಭದಲ್ಲಿ ನಾನು ಅವರಲ್ಲಿ ಕಂಡ ಹಾಗೂ ಅವರೊಡನೆ ಚರ್ಚಿಸಿದ ವೈರುಧ್ಯಗಳ ಬಗೆಗೂ ಹೇಳಲೇಬೇಕು. ಪುನರ್ಜನ್ಮದಲ್ಲಿನ ಅವರ ನಂಬಿಕೆ, ಇಂಥ ದೇವರೇ ಎಂದಲ್ಲದಿದ್ದರೂ ಯಾವುದೋ ಒಂದು ಪ್ರಜ್ಞಾವಂತ ಶಕ್ತಿ ಈ ಜಗತ್ತಿನ ಹಿಂದಿದೆ ಎನ್ನುವ ಅವರ ಅಭಿಪ್ರಾಯ, ಎಲ್ಲ ನ್ಯಾಷನಲ್ ವಿದ್ಯಾಸಂಸ್ಥೆಗಳಲ್ಲಿಯೂ ನಡೆಯುವ ಸಾಮೂಹಿಕ ಪ್ರಾರ್ಥನೆ – ಇವೆಲ್ಲವೂ ನಮ್ಮ ನಡುವೆ ಚರ್ಚೆಗೆ ಬಂದಿದ್ದವು. ಪುನರ್ಜನ್ಮ ಹಾಗೂ ದೇವರ (ಅಥವಾ ಯಾವುದೋ ಶಕ್ತಿಯ) ಅಸ್ತಿತ್ವದ ಬಗೆಗಿನ ನನ್ನ ದೃಢವಾದ ಅಪನಂಬಿಕೆಯನ್ನು ಪ್ರಸ್ತಾಪಿಸುತ್ತಾ ''ಅಷ್ಟು ಖಡಾಖಂಡಿತವಾಗಿ ಇಲ್ಲ ಅನ್ನೋದಕ್ಕಾಗೊಲ್ಲಪ್ಪಾ'' ಎನ್ನುತ್ತಿದ್ದರು. ಅವರೊಬ್ಬ ಅಜ್ಞೇಯವಾದಿ ಎಂದು ನನಗನಿಸುತ್ತದೆ. ಇದನ್ನು ಅವರೂ ಒಂದು ರೀತಿಯಲ್ಲಿ ಒಪ್ಪುತ್ತಿದ್ದರು. ಪ್ರಾರ್ಥನೆಯ ವಿಚಾರದಲ್ಲಿ ಅವರೇ ಹಲವು ಬಾರಿ ಹೇಳಿದ್ದ ಮಾತು : "Prayer is a long distance call with no receiver at the other end." ಹಾಗಿದ್ದರೂ ನ್ಯಾಷನಲ್ ವಿದ್ಯಾಸಂಸ್ಥೆಗಳಲ್ಲಿ ಪ್ರಾರ್ಥನೆಯನ್ನು ಮುಂದುವರೆಸಿಕೊಂಡು ಹೋಗುವುದಕ್ಕೆ ಅವರು ಕೊಡುತ್ತಿದ್ದ ಕಾರಣ: ''ಹಾಗೆ ಮಾಡದಿದ್ದರೆ ನ್ಯಾಷನಲ್ ವಿದ್ಯಾಸಂಸ್ಥೆಯ ಬಗ್ಗೆ ಸಾರ್ವಜನಿಕರಲ್ಲಿ ಇದ್ದ ಒಳ್ಳೆಯ ಭಾವನೆ ಮಾಯವಾಗಬಹುದು'' ಎನ್ನುವುದು. "Prayer is not worth fighting over" ಎಂದಾಗ ಅವರು ಸಂತೋಷವಾಗಿ ಆ ಮಾತನ್ನು ಒಪ್ಪಿದರು. ಆದರೂ ಪ್ರಾರ್ಥನೆಯ ಬಗೆಗಿನ ಅವರ ನಿಲುವು ವೈರುಧ್ಯದಿಂದ ಕೂಡಿದೆ ಎಂದಾಗ ಅವರು ಅಲ್ಲಗಳೆಯುತ್ತಿರಲಿಲ್ಲ. Skeptical Inquirer ಎನ್ನುವ ಪತ್ರಿಕೆಯನ್ನು ಪ್ರಕಟಿಸುವ ಅಮೆರಿಕದ Committee for the Scientific Investigation of Claims of the Paranormalನಲ್ಲಿ ಭಾರತವನ್ನು ಪ್ರತಿನಿಧಿಸುವ ಏಕೈಕ ಸದಸ್ಯರಾಗಿದ್ದವರು, ವಿಜಯವಾಡದ ನಾಸ್ತಿಕ ಕೇಂದ್ರದ ಜತೆಯೂ ಸಂಪರ್ಕವನ್ನಿರಿಸಿಕೊಂಡಿದ್ದರು.

ಅವರು ಯಾವುದೇ ವಿಷಯದಲ್ಲಿ ರಾಜಿ ಮಾಡಿಕೊಳ್ಳಲಿ ಅದಕ್ಕೆ ನ್ಯಾಷನಲ್ ವಿದ್ಯಾಸಂಸ್ಥೆಗಳ ಒಳಿತೇ ಮುಖ್ಯ ಕಾರಣವಾಗಿರುತ್ತಿತ್ತು. ಅವರ ಪ್ರಥಮ ಹಾಗೂ ಏಕೈಕ ಆದ್ಯತೆ ನ್ಯಾಷನಲ್ ವಿದ್ಯಾಸಂಸ್ಥೆಗಳು. ಅವರ ಸಹೋದ್ಯೋಗಿಗಳಿಗೆಲ್ಲರಿಗೂ ಈ ವಿಷಯ ತಿಳಿದಿದ್ದರಿಂದಲೇ ಅವರ ಹಲವು ನಿರ್ಧಾರಗಳ ಬಗ್ಗೆ ಸಹಮತವಿಲ್ಲದಿದ್ದರೂ ಅವರ ಮಾತನ್ನು ಒಪ್ಪುತ್ತಿದ್ದರು. ಎಚ್.ಎನ್. ಅವರ ಛಲ ಒಂದೊಂದು ಬಾರಿ ಹಠಮಾರಿತನದಂತೆ ಕಂಡುಬರುತ್ತಿತ್ತು. ಕೊನೆಗೂ ಗೆಲುವು ಅವರದೇ.

ತಮ್ಮ ರಾಜಕೀಯ ನಿಲುವುಗಳನ್ನು ಸ್ಪಷ್ಟವಾಗಿ ಅನುಷ್ಠಾನಕ್ಕೆ ತರುವುದಕ್ಕೂ ಅವರ ಈ ಬದ್ಧತೆಯೇ ಅಡ್ಡಿ ಬರುತ್ತಿತ್ತು. ಉದಾಹರಣೆಗೆ, ಅವರ ನಾಯಕತ್ವದಲ್ಲಿ ಒಂದು ಪಕ್ಷಾತೀತ ರಾಜಕೀಯ ಚಳವಳಿಯನ್ನು ರೂಪಿಸಬಹುದಾಗಿತ್ತಲ್ಲ ಎಂದಾಗ ಅವರ ಉತ್ತರ ಸಿದ್ಧ – ''ಹಾಗೆ ಮಾಡಿದ್ದರೆ ಎನ್.ಇ.ಎಸ್. ಕಥೆ ಏನಾಗ್ತಿತ್ತು?'' ಕೋಮುವಾದದ ವಿರೋಧಿಯಾಗಿದ್ದ ಅವರು ಭಾಜಪ ಅಧಿಕಾರಕ್ಕೆ ಬಂದದ್ದು ಇತರ ಪಕ್ಷಗಳ ದೌರ್ಬಲ್ಯದಿಂದಾಗಿಯೇ ಎಂದು ನಂಬಿದ್ದರು. ಎಡಪಕ್ಷಗಳ ಬಗ್ಗೆ, ಆ ಪಕ್ಷಗಳ ನಾಯಕರ ಬಗ್ಗೆ, ಮುಖ್ಯವಾಗಿ ಇ.ಎಂ.ಎಸ್. ನಂಬೂದ್ರಿಪಾದ್ ಬಗ್ಗೆ ಅವರಿಗೆ ಗೌರವವಿತ್ತು. ಆದರೆ ಈ ಪಕ್ಷಗಳು ಒಡೆದು, ಜನರಿಂದಲೂ ದೂರವಾದ್ದರಿಂದಲೇ ಅಧಿಕಾರಕ್ಕೆ ಬರಲಾಗದೆ ಕೋಮುವಾದಿಗಳಿಗೆ ಜಾಗ ಮಾಡಿಕೊಟ್ಟರೆಂದು ಅವರ ಅಭಿಪ್ರಾಯವಾಗಿತ್ತು. ಸಾಮಾನ್ಯವಾಗಿ ಯಾರನ್ನು ಮಾಧ್ಯಮಗಳು ಹಾಗೂ ಆಳುವವರು 'ಉಗ್ರರು' ಎಂದು ಕರೆಯುತ್ತಾರೋ ಅವರನ್ನು ಎಚ್.ಎನ್. ಎಂದೂ ಉಗ್ರವಾದಿಗಳೆಂದು ಕರೆದದ್ದನ್ನು ನಾನಂತೂ ಕಂಡಿಲ್ಲ. ಅವರು ಆರಿಸಿಕೊಂಡ ಬಂದೂಕಿನ ಮಾರ್ಗದ ಬಗ್ಗೆ ಹೇಳುವಾಗ ಸರಕಾರದ ಮಿಲಿಟರಿ ಶಕ್ತಿಯ ಮುಂದೆ ಅವರು ನಿಲ್ಲಲಾರರು; ಅನ್ಯಾಯವಾಗಿ ಬುದ್ಧಿವಂತ, ಪ್ರಾಮಾಣಿಕ ಯುವಕ, ಯುವತಿಯರು ರಾಜ್ಯ ಹಿಂಸೆಗೆ ಬಲಿಯಾಗುತ್ತಾರೆಂಬ ಕಳಕಳಿಯನ್ನು ಅವರು ಹಲವು ಬಾರಿ ವ್ಯಕ್ತಪಡಿಸಿದ್ದರು.

ತಮ್ಮ ವಿದ್ಯಾಸಂಸ್ಥೆಗಳ ಉದ್ಯೋಗಿಗಳು ವಿಭಿನ್ನ ರಾಜಕೀಯ ಸಿದ್ಧಾಂತಗಳನ್ನು ನಂಬಿರುವ ಬಗ್ಗೆ ಅವರು ಆಕ್ಷೇಪ ವ್ಯಕ್ತಪಡಿಸುತ್ತಿರಲಿಲ್ಲ. ಈ ವಿಷಯದಲ್ಲಿ ಹಲವು ಖಾಸಗಿ ಆಡಳಿತ ಮಂಡಳಿಗಳ ವೈಖರಿಯ ಬಗ್ಗೆ ತಿಳಿದಿರುವವರಿಗೆ ಇದು ಆಶ್ಚರ್ಯಕರವಾಗಬಹುದು. ಎನ್.ಇ.ಎಸ್. ವಿಷಯದಲ್ಲಿ ಅವರದೇ ಅಂತಿಮ ತೀರ್ಮಾನ. ಆದರೆ ವ್ಯಕ್ತಿಗಳ ಸೈದ್ಧಾಂತಿಕ ನಿಲುವುಗಳ ಬಗ್ಗೆ ಅವರದು ಪ್ರಜಾತಾಂತ್ರಿಕ ನಿಲುವು.

ಎಚ್.ಎನ್. ತಾವು ಬದುಕಿದ್ದ ಕಾಲದಲ್ಲಿಯೇ ಒಂದು ದಂತಕತೆಯಾಗುವುದರಲ್ಲಿದ್ದರು. ಕೊನೆಯವರೆಗೂ ಉಪ್ಪಿಟ್ಟೇ ತಿನ್ನುತ್ತಿದ್ದರು, ಚಾಪೆಯ ಮೇಲೆಯೇ ಮಲಗುತ್ತಿದ್ದರು ಎಂಬ ಅತಿರಂಜಿತ ಅಭಿಪ್ರಾಯಗಳು ಜನಮನದಲ್ಲಿವೆ. ಇಂಥ ವಿಚಾರಗಳು ಇನ್ನೂ ಹಲವು ಇದೇ ರೀತಿಯ ಮಿಥ್ಯೆಗಳಿಗೆ ದಾರಿಮಾಡಿಕೊಟ್ಟಿದೆ. ಅವರು ಜನರಿಂದ ದೂರವಾಗುವ ಅಪಾಯವಿದೆ. ಅವರು ಸಹ ಎಲ್ಲರಂತೆಯೇ ಒಬ್ಬ ವ್ಯಕ್ತಿಯಾಗಿದ್ದರು, ಎಲ್ಲರಂತೆಯೇ ಅವರಿಗೂ ಇಷ್ಟಾನಿಷ್ಟಗಳಿದ್ದುವು. ಆದರೆ ಇವೆಲ್ಲವುಗಳ ನಡುವೆ ಅವರು ಒಬ್ಬ ವಿಶಿಷ್ಟ ವ್ಯಕ್ತಿಯಾಗಿದ್ದರು. ಅವರ ಈ ವೈಶಿಷ್ಟ್ಯವೇ ಅವರನ್ನು ಬಲ್ಲವರಿಗೆಲ್ಲ ಪ್ರೀತಿಯ ಎಚ್.ಎನ್. ಆಗುವಂತೆ ಮಾಡಿತು. ಅವರ ಎಲ್ಲ ವೈರುಧ್ಯಗಳ ನಡುವಿನ ಅವರ ಅನನ್ಯತೆಯನ್ನು ಗುರುತಿಸಿದಾಗ ಅವರನ್ನು ಇಂದಿನ ಪೀಳಿಗೆಯವರು ಗಂಭೀರವಾಗಿ ಪರಿಗಣಿಸಿ ಅವರ ಉದಾಹರಣೆಯನ್ನು ಕೆಲವು ವಿಷಯಗಳಲ್ಲಿಯಾದರೂ ಅನುಕರಿಸುವಂತಾಗಬಹುದು.

**ನಗರಗೆರೆ ರಮೇಶ್**, ನಂ. ೩೬೬, ೮ನೇ ಅಡ್ಡರಸ್ತೆ, ೮ನೇ ಮುಖ್ಯರಸ್ತೆ
ಪದ್ಮನಾಭನಗರ, ಬೆಂಗಳೂರು - ೫೬೦ ೦೭೦

# ಎಚ್.ಎನ್. – ಹತ್ತಿರದಿಂದ

ಜನವರಿ ೩೦ರ ಮಧ್ಯರಾತ್ರಿ, ಸರ್ವೋದಯದ ಕನಸಿನಲ್ಲೆ ಗಾಂಧೀಜಿ ಕಣ್ಣು ಮುಚ್ಚಿದ ದಿನ. ಅದೇ ದಿನದ ರಾತ್ರಿ ನನ್ನ ನೆಚ್ಚಿನ ಎಚ್.ಎನ್. ಕಣ್ಣುಮುಚ್ಚಿದವರು ಮತ್ತೆ ಕಣ್ಣು ತೆರೆಯಲಿಲ್ಲ. ಆಸ್ಪತ್ರೆಯ ಕೋಣೆಯಲ್ಲಿ ನಿಶ್ಚಲವಾಗಿ ಮಲಗಿದ್ದ ಅವರನ್ನೇ ನೋಡುತ್ತಾ, ನನಗರಿವಿಲ್ಲದೇ ಕಳೆದ ೫೦ ವರ್ಷಗಳ ಅವರೊಂದಿಗಿನ ಒಡನಾಟವನ್ನು ನೆನೆಯುತ್ತಾ ನಿಂತಿದ್ದೆ. ಕಣ್ಣಂಚಿನಲ್ಲಿ ಹನಿಗಳು ತೊಳಲಾಡುತ್ತಿದ್ದವು.

ಅವರನ್ನು ನಾನು ಮೊದಲು ಕಂಡದ್ದು ೧೯೫೧ರ ಮೇ ತಿಂಗಳಲ್ಲಿ. ಇಂಟರ್‌ಮೀಡಿಯೇಟ್‌ಗೆ ಸೇರಲು ಹಳ್ಳಿಯಿಂದ ಬಂದು ನಿರಾಶನಾಗಿ ಊರಿಗೆ ವಾಪಸಾಗುತ್ತಿದ್ದಾಗ ಕೈಹಿಡಿದು ಕರೆದುಕೊಂಡುಹೋಗಿ ಕಾಲೇಜಿಗೆ ಸೇರಿಸಿದ್ದರು. ಇಂತಹದೇ ಅನುಭವ ಅನೇಕರಿಗೆ ಆಗಿತ್ತು. ಅಂದಿನಿಂದ ನಾನು ಅವರಿಗೆ ಹಂತಹಂತವಾಗಿ ಹತ್ತಿರದವನಾಗುತ್ತಾ ಬಂದೆ. ಅವರ 'ಮರಣ ಶಾಸನ'ವನ್ನು ಜಾರಿಗೊಳಿಸಲು ಆರಿಸಿಕೊಂಡಿದ್ದ ಹಲವಾರು ಆಪ್ತರಲ್ಲಿ ನಾನೂ ಒಬ್ಬನಾದೆ.

ಎಚ್.ಎನ್. ಒಬ್ಬ ಪರಿಪೂರ್ಣ ಅಧ್ಯಾಪಕ. ಅವರು ಮಾಡುತ್ತಿದ್ದ ಫಿಸಿಕ್ಸ್ ಉಪನ್ಯಾಸ ಅಷ್ಟೇನೂ ವಿದ್ವತ್ಪೂರ್ಣವಾಗಿ ಇರುತ್ತಿರಲಿಲ್ಲ. ಆದರೆ ಚೆನ್ನಾಗಿ ಅರ್ಥವಾಗುತ್ತಿತ್ತು. ನಿರ್ಭಯವಾಗಿ ಯಾವ ಭಿಡೆಯೂ ಇಲ್ಲದೆ, 'ತಲೆಹರಟೆ' ಅನ್ನಲೂಬಹುದಾದಂತಹ ಪ್ರಶ್ನೆ ಕೇಳುತ್ತಿದ್ದೆವು. ನಾನು M.Sc.ಗೆ ಸೇರುವ ಮುಂಚೆ ಸಲಹೆ ಪಡೆಯಲು ಅವರ ಬಳಿ ಹೋಗಿದ್ದೆ. ''ನೋಡಪ್ಪಾ, ನನ್ನ ಹತ್ತಿರ ಮಾಡಿದ್ಹಾಗೆ ಅಲ್ಲಿ ಒಂದೇಸಮನೆ ಪ್ರಶ್ನೆ ಕೇಳ್ಬೇಡ. ಬರೆಹಾಕ್ಬಿಡ್ತಾರೆ. ಪ್ರೊಫೆಸರ್‌ಗಳು ನಕ್ಕಾಗ ನಗು, ಅತ್ತಾಗ ಅಳು. ಅವರು ಎಲ್ಲಾದ್ರು ಭಾಷಣ ಮಾಡಿದ್ರೆ (ಇದು ಸ್ವಲ್ಪ ಅಪರೂಪವೆ !) ಮುಂದಿನ ಸಾಲಿನಲ್ಲಿ ಕೂತು ನೀನು ಬಂದಿರೋದು



ಅವರ ಗಮನಕ್ಕೆ ಬರುವಂತೆ ನೋಡ್ಕೊ'' ಅಂತ ಕಿವಿಮಾತು ಹೇಳಿದರು. ಸಲಹೆಯ ಉಪಯುಕ್ತತೆಯನ್ನು ನಾನು ಸ್ವತಃ ಕಂಡು ಕೊಂಡೆ. ವಿದ್ಯಾರ್ಥಿ ಸಮುದಾಯಕ್ಕೆ ಅಧ್ಯಾಪಕ ಪರಿಣಾಮಕಾರೀ ನಾಯಕನಾಗಬೇಕು. ಆಗ ಮಾತ್ರ ಅವನು ಸಮರ್ಥ ''ಮೇಷ್ಟ್ರು''. ಅವರು ನಮ್ಮೊಡನೆ ಆಟ ಆಡ್ತಿದ್ರು, ನಾಟಕ ಆಡಿಸ್ತಿದ್ರು, ಚರ್ಚಾ ಕೂಟಕ್ಕೆ ನಾವು ಹೋದಾಗ ಮುಂದಿನ ಸಾಲಿನಲ್ಲಿ ಕೂತು ಪ್ರೋತ್ಸಾಹಿಸ್ತಾ ಇದ್ರು. ತಿಂಡಿ ಕೊಡಿಸ್ತಾ ಇದ್ರು, ಹಳ್ಳಿಯಿಂದ ಬಂದಿದ್ದ ನನ್ನಂಥವರನ್ನು ಪ್ರೀತಿಯಿಂದ ವಿಚಾರಿಸ್ತಾ ಇದ್ರು.

೧೯೭೫ರಲ್ಲಿ ಕರುಳುಹುಣ್ಣು ತೆಗೆಯಲು ಅವರಿಗೆ ಶಸ್ತ್ರಚಿಕಿತ್ಸೆ ಆದಾಗ ಅವರ ಬಳಿಯೇ ಇದ್ದು ಅವರನ್ನು ನೋಡಿಕೊಳ್ಳುವ ಭಾಗ್ಯ ನನ್ನದಾಗಿತ್ತು. ಆಪರೇಷನ್ ಹಿಂದಿನ ರಾತ್ರಿ ಬಹಳ ಹೊತ್ತಿನವರೆಗೂ ಮಾತಾಡ್ತಾ ಇದ್ರು, ಜೋಕ್ಸ್ ಹೇಳಿ ನಗಿಸ್ತಾ ಇದ್ರು. ''ನೋಡಪ್ಪಾ, ಆಪರೇಷನ್ ಆದಮೇಲೆ ಪೂರ್ತಿಜ್ಞಾನ ಬರೋವರ್ಗೆ ಯಾರನ್ನೂ ಸೇರಿಸ್ಬೇಡ. ಮಂಪರಿನಲ್ಲಿ ಏನೇನು ಮಾತಾಡ್ಕೊತೀನೊ ಏನೊ... ಜನ ಅದಕ್ಕೆ ಬಣ್ಣಕಟ್ಟಿ ಏನೇನೊ ಊಹಿಸ್ಬಿಡ್ತಾರೆ'' ಅಂತ ಹೇಳಿದ್ರು. ಪೂರ್ತಿ ಎಚ್ಚರಾದಮೇಲೆ, ''ಏನು ಮಾತಾಡ್ಕೊಂಡೆ, ನಿಸ್ಸಂಕೋಚವಾಗಿ ಹೇಳು'' ಎಂದರು ಎಚ್.ಎನ್. ''ಆಗಾಗ್ಗೆ ಅಮ್ಮ... ಅಮ್ಮ... ಹಲುಬ್ತಾ ಇದ್ರಿ. ಅನೇಕ ಬಾರಿ ಗಂಗಾ... ಗಂಗಮ್ಮ... ಅಂತಿದ್ರಿ'' ಎಂದು ಹೇಳಿ, ''ಗಂಗ ಅಂದ್ರೆ ಯಾರು ಸಾರ್ ?'' ಅಂತ ಕೇಳಿದೆ. ''ನನ್ನ ಒಬ್ಬೇ ತಂಗೀನಪ್ಪ... ಆಕೆ ತೀರಿಕೊಂಡು ಆರು ವರ್ಷ ಆಗಿರ್ಬೇಕು... ಅವಳಿಗೆ ಅಂತ ಮನಿಯಾರ್ಡರ್ ಕಳಿಸಿದ್ದೆ... ಅಡ್ರೆಸ್ ಸಿಕ್ಕಲಿಲ್ಲ ಅಂತ ವಾಪಸ್ ಬಂತು!'' ಸ್ವಲ್ಪ ಸಮಯ ತಡೆದು ''ನಾನು ಸತ್ತಾಗ ನನ್ನವರೂ ಅಂತ ಅಳೋಕ್ಕೆ ನನ್ನ ತಂಗಿ ಇಲ್ಲ, ನನಗಿಂತ ಮುಂಚೆನೆ ಸತ್ತುಹೋದಳು.'' ಈ ಮಾತು ಹೇಳೋವಾಗ ಅವರ ಕಣ್ಣಂಚಿನಲ್ಲಿ ನೀರಿತ್ತು. ಅಷ್ಟರಲ್ಲೆ ಒಂದು ಜೋಕ್ ! ''ಸಾವಿನ ವಿಷಯದಲ್ಲಿ ಮಾತ್ರ ಸೀನಿಯಾರಿಟಿ ಅಂತ ಯಾರೂ ಅಪೀಲ್ ಮಾಡಲ್ಲ'' ಅವರನ್ನು ಒತ್ತಡಗಳ ನಡುವೆಯೂ ಬದುಕುಳಿಸಿದ್ದೇ ಅವರ ಹಾಸ್ಯಪ್ರಜ್ಞೆ. ವೈಚಾರಿಕತೆ, ವೈಜ್ಞಾನಿಕ ಮನೋಭಾವ, ಪ್ರಶ್ನಿಸದೇ ಯಾವುದನ್ನೂ ಒಪ್ಪಬಾರದೆಂಬ ಚೌಕಟ್ಟಿನಲ್ಲಿ ಅವರ ಬದುಕು ಸಾಗಿದ್ದ ಮಾತ್ರಕ್ಕೆ ಅವರಲ್ಲಿ ನವುರಾದ ಮಾನವೀಯ ಸಂವೇದನೆಗಳು ಬತ್ತಿರಲಿಲ್ಲ.

''ಸಾರ್ ನಿಮ್ಮನ್ನು ಸಂಪೂರ್ಣವಾಗಿ ಗಾಂಧೀವಾದಿ ಅಂತಲೇ ಎಲ್ರೂ ಹೇಳ್ತಾರಲ್ಲ, ನಿಮಗೆ ಹಾಗನ್ಸುತ್ತಾ ?'' ಅಂತ ಒಮ್ಮೆ ಕೇಳಿದ್ದೆ. ''ಉತ್ತರ ಹೇಳೋದು ಸ್ವಲ್ಪ ಕಷ್ಟನಪ್ಪ. ಸರಳ ಜೀವನ, ಖಾದಿ, ನಿರ್ಭಯವಾದ ಸ್ವತಂತ್ರ ಚಿಂತನೆ, ಸಮಾಜಸೇವೆ ಮುಂತಾದ ವಿಷಯಗಳಲ್ಲಿ ನಾನು ಅಪ್ಪಟ ಗಾಂಧಿವಾದಿ. ಭೂಕಂಪ ಆಗಿ ಸಾವಿರಾರು ಜನ ಸತ್ತದ್ದಕ್ಕೆ ದೈವದ ಕೋಪನೇ ಕಾರಣ ಅನ್ನೋ ಗಾಂಧಿ ನಂಬಿಕೆ ನನಗೆ ಹಿಡಿಸೊಲ್ಲ''

ಕಳೆದ ವರ್ಷವಷ್ಟೆ ಒಂದು ರಾತ್ರಿ ಅವರನ್ನು ಕೇಳಿದ್ದೆ, ''ಸಮಾಜ ಸೇವೆಗೆ ವಿವಾಹ ಅಡ್ಡಿ ಅಂತ ನೀವು ಈಗಲೂ ನಂಬ್ತೀರಾ ?'' ''ಹೌದು, ವಿವೇಕಾನಂದರ ಪ್ರಭಾವಕ್ಕೊಳಗಾಗಿ ಆ ರೀತಿ ಬಲವಾಗಿ ನಂಬಿದ್ದೆ. ಈಗ ಹಾಗನ್ಸೊಲ್ಲ... ವೃದ್ಧಾಪ್ಯದಲ್ಲಿ ನನ್ನೋರು ಅಂತ ಇರಬೇಕು ಅನ್ಸುತ್ತೆ.''

ಅವರು ಸ್ಥಾಪಿಸಿದ ಹಲವಾರು ಕಾಲೇಜುಗಳು, ವಿಜ್ಞಾನ ಮತ್ತು ಕಲೆಗಾಗಿಯೇ ಮೀಸಲಾದ ಅನೇಕ ಸಂಸ್ಥೆಗಳು, ಸಹಸ್ರಾರು ವಿದ್ಯಾರ್ಥಿಗಳ, ಸಾರ್ವಜನಿಕರ ಪ್ರೀತಿ, ವಿಶ್ವಾಸ ಮತ್ತು ನಂಬಿಕೆಗಳಿಸಿದ್ದ ಅವರಿಗೆ ಕೋಟಿಗಟ್ಟಲೆ ವಂತಿಗೆ ಸಂಗ್ರಹಿಸುವುದು ಕಷ್ಟದ ಕೆಲಸವಾಗಿರಲಿಲ್ಲ. ಹೀಗೆ ಕಟ್ಟಿದ ಸಂಸ್ಥೆಗಳ ಆಡಳಿತ ವೈಖರಿ ಹಾಗೂ ಬದ್ಧತೆಯ ಬಗ್ಗೆ ಅವರಿಗೆ ತೃಪ್ತಿ ಇತ್ತೆ? ಇರಲಿಲ್ಲವೆಂದೇ ನಾನು ತಿಳಿದುಕೊಂಡಿದ್ದೇನೆ. ''ಏನಾದರೂ ಮಾಡಿ ಕೋಟಿಗಟ್ಟಲೆ ಹಣ ಸುರಿದು ಕಟ್ಟಿರೋ ಸಂಸ್ಥೆಗೆ ಜೀವ ತುಂಬಬೇಕಪ್ಪಾ'' ಅಂತ ಹಲವಾರು ಬಾರಿ ಹೇಳಿದ್ದಾರೆ. ತಾವು ನಂಬಿ ಆಚರಿಸುತ್ತಿದ್ದ ಸೇವಾ ಮನೋಭಾವ, ತ್ಯಾಗಬುದ್ಧಿ ಎಲ್ಲರಲ್ಲೂ (ಮುಖ್ಯವಾಗಿ ಅಧ್ಯಾಪಕರಲ್ಲಿ) ಇರಬೇಕೆಂದು ಅವರು ನಿರೀಕ್ಷಿಸುತ್ತಿದ್ದರು. ನಿರೀಕ್ಷೆ ಸಾಧುವೆ. ಅದು ಹುಸಿಯಾದಾಗ ? ಪರ್ಯಾಯ ವ್ಯವಸ್ಥೆಯ ಬಗ್ಗೆ ಚಿಂತಿಸಲೂ ಅವರು ಸಿದ್ಧರಿರಲಿಲ್ಲ.

ತಮ್ಮ ಆರೋಗ್ಯ ಹದಗೆಡುತ್ತಾ ಇರೋದು ಅವರಿಗೆ ಇಷ್ಟವಾಗಿರಲಿಲ್ಲ. ''ನಾನು ಇನ್ನೂ ಹತ್ತು ವರ್ಷವಾದ್ರೂ ಬದುಕಿರಬೇಕಪ್ಪಾ... ಮಾಡೋ ಕೆಲಸ, ಮುಗಿಸೋ ಜವಾಬ್ದಾರಿ ತುಂಬಾ ಇದೆ...'' ಅಂತ ಕಂಡಾಗಲೆಲ್ಲಾ ಹೇಳ್ತಾ ಇದ್ರು. ಅವರಿಗೆ ಬದುಕೋ ಆಸೆ ಇತ್ತು, ನಿಜ. ಆದರೆ ಸಾವಿನ ಭಯ ಇರಲಿಲ್ಲ.

ಬ್ರಿಟಿಷರ ದೌರ್ಜನ್ಯವನ್ನು ಖಂಡಿಸಿ ಅವರಿಂದ ವಿಮುಕ್ತಿ ಬಯಸುತ್ತಿದ್ದ ಗಾಂಧಿ ಅವರನ್ನು ದ್ವೇಷಿಸುತ್ತಿರಲಿಲ್ಲ. ಸಾಯಿಬಾಬಾರ ಪವಾಡವನ್ನು ಖಂಡಿಸುತ್ತಿದ್ದ ಎಚ್.ಎನ್, ಅವರ ಜನಪರ ಕಾರ್ಯಗಳನ್ನು ಮೆಚ್ಚಿ ಮಾತಾಡುತ್ತಿದ್ದರು.

ಅವರ ಪ್ರೀತಿಯ ನಗೆಯುಂಡಿದ್ದ ಮಕ್ಕಳಿಗೆ ಎಚ್.ಎನ್. ತಾತನನ್ನು ಮರೆಯುವುದು ಕಷ್ಟ. ''ಟಿ.ವಿ.ನಲ್ಲಿ ಎಷ್ಟು ಚೆಂದ ಕಾಣ್ತಿದ್ರಿ ನೀವು ತಾತ. ನಾವಂತೂ ದೃಷ್ಟಿ ತೆಗೆದ್ವಿ. ಕಡ್ಡಿಪೊರಕೆ ಮಾಯಾ ಆಗೋದೆ ನಿಮ್ಮ ಫೋಟೋ ಬಂದಾಗ'' ಅಂತ ಹೇಳಿದ್ದನ್ನು ನಾನು ಕೇಳಿದ್ದೇನೆ.

ನನ್ನ ಮೊಮ್ಮಗಳು ಪ್ರಣತಿಯ ಹುಟ್ಟು ಹಬ್ಬಕ್ಕೆ ಅವರು ಬಂದಿದ್ರು. ಮಗುವನ್ನು ಎತ್ತಿಕೊಂಡು ''ನಿಂಗೇನು ತರ್ಬೇಕೊ ಗೊತ್ತಾಗ್ಲಿಲ್ಲ...'' ಅಂತ ಹೇಳಿದ್ದಾಗ ಮಗು ಅವರ ಪೆನ್‌ಗೆ ಕೈಹಾಕಿ ಕಿತ್ತುಕೊಂಡಿದ್ದಳು. ಅದನ್ನು ಅವಳಿಗೇ ಕೊಟ್ಟಿದ್ದರು. ಎಚ್.ಎನ್. ಸತ್ತ ಸುದ್ದಿ ಕೇಳಿದ ಅವಳು ಪೆನ್ನನ್ನು ತೊಡೆಯ ಮೇಲಿಟ್ಟುಕೊಂಡು ಸವರುತ್ತಾ ಇದ್ದ ದೃಶ್ಯ ನನಗೆ ನೆನಪಿನಲ್ಲಿದೆ. ಅವಳಂತಹ ಸಾವಿರಾರು ಮಕ್ಕಳ ಮನೋನಂದನದಲ್ಲಿ ಹಸುರಾಗಿದ್ದಾರೆ, ಹಸುರಾಗಿಯೇ ಉಳಿಯುತ್ತಾರೆ ಎಚ್.ಎನ್.

ಎಚ್. ಆರ್. ರಾಮಕೃಷ್ಣರಾವ್, ನಂ. ೮೦೧, ೧೫ನೇ ಅಡ್ಡರಸ್ತೆ
೭ನೇ ಬ್ಲಾಕ್, ಜಯನಗರ, ಬೆಂಗಳೂರು - ೫೬೦ ೦೮೩

## 'ಎಚ್ಚೆನ್' ಈಗ ಬರೀ ನೆನಪು

**ಕೋ**ಟೆ ಹೈಸ್ಕೂಲಿನಿಂದ ನ್ಯಾಷನಲ್ ಕಾಲೇಜಿಗೆ ಸೇರಿದವರು ನಾನು ಮತ್ತು ಗೆಳೆಯ ಗೋಪಾಲಕೃಷ್ಣ ಇಬ್ಬರೆ. ನಾವು ಸೇರಿದ (೧೯೪೭) ಹಿಂದಿನ ವರ್ಷವಷ್ಟೆ ಇಂಟರ್‌ಮೀಡಿಯೆಟ್ (ಈಗಿನ ಪಿಯುಸಿ) ತರಗತಿಗಳು ಪ್ರಾರಂಭವಾಗಿದ್ದವು. ಹಿರಿಯ ಶಿಕ್ಷಣ ಮೇಷ್ಟ್ರು ಸಂಪದ್ಗಿರಿರಾಯರು ಪ್ರಾಂಶುಪಾಲರು. ಎರಡರೆಡೇ ತರಗತಿಗಳಿದ್ದುದರಿಂದ ವಿದ್ಯಾರ್ಥಿಗಳ ಸಂಖ್ಯೆ ಕಡಿಮೆ. ಹಾಗಾಗಿ ಅಧ್ಯಾಪಕರೊಂದಿಗೆ ವೈಯಕ್ತಿಕ ಸಂಪರ್ಕ ಇತ್ತು. ಅಧ್ಯಾಪಕರೂ ಹೊಸಬರೆ. ಎಚ್ಚೆನ್ ಭೌತವಿಜ್ಞಾನ ತೆಗೆದುಕೊಳ್ಳುತ್ತಿದ್ದರು. ಹಾಸ್ಟೆಲಿನಲ್ಲೇ ಅವರ ವಾಸ್ತವ್ಯ. ಆದರಿಂದಾಗಿ ಹೆಚ್ಚು ಸಮಯವನ್ನು ವಿದ್ಯಾರ್ಥಿಗಳ ಜೊತೆಯಲ್ಲೇ ಕಳೆಯುತ್ತಿದ್ದರು. ವಾಲಿಬಾಲ್, ಬ್ಯಾಸ್ಕೆಟ್‌ಬಾಲ್ ಮೊದಲಾದ ಕ್ರೀಡೆಗಳಲ್ಲಿ ನಮ್ಮ ಜೊತೆ ಪಾಲ್ಗೊಳ್ಳುತ್ತಿದ್ದರು. ಸ್ವಾತಂತ್ರ್ಯ ಬಂದ ಕೆಲವೇ ದಿನಗಳಲ್ಲಿ ರಾಜ್ಯದಲ್ಲಿ ಜವಾಬ್ದಾರಿ ಸರಕಾರಕ್ಕಾಗಿ ಹೋರಾಟ ಪ್ರಾರಂಭವಾಯಿತು. ಕಾಂಗ್ರೆಸ್ ನಾಯಕರ ಕರೆಗೆ ಮನ್ನಣೆ ನೀಡಿ ನಮ್ಮ ಕಾಲೇಜಿನಿಂದ ಎಚ್ಚೆನ್, ಕೆ. ಶ್ರೀನಿವಾಸನ್ ಮತ್ತು ಸೂರ್ಯನಾರಾಯಣ ಶಾಸ್ತ್ರಿ, ಈ ಮೂವರು ಅಧ್ಯಾಪಕರೂ ರಾಜೀನಾಮೆ ನೀಡಿ ಚಳವಳಿಯಲ್ಲಿ ಧುಮುಕಿದ್ದು ನಮಗೆಲ್ಲ ವಿಶೇಷ. ಅವರ ಬಗ್ಗೆ ಅಭಿಮಾನ. ಈ ಅಧ್ಯಾಪಕರುಗಳು ಹೇಳಿದ್ದಿಷ್ಟೆ, 'ಇಷ್ಟವಿರುವ ವಿದ್ಯಾರ್ಥಿಗಳು ಚಳವಳಿಯಲ್ಲಿ ಭಾಗವಹಿಸಬಹುದು !'

ಸರಳ ಉಡುಪಿನಲ್ಲಿ, ಅಂದರೆ ಖಾದಿ ಜುಬ್ಬ, ಪಾಯಿಜಾಮ, ಗಾಂಧಿ ಟೋಪಿಯಲ್ಲಿರುತ್ತಿದ್ದ ಎಚ್ಚೆನ್ ಬಗ್ಗೆ ವಿದ್ಯಾರ್ಥಿಗಳಲ್ಲಿ ಗೌರವ ಇತ್ತು. ಇಂಟರ್‌ನಲ್ಲಿ ಕಾಲೇಜಿಗೆ ಉತ್ತಮ ಫಲಿತಾಂಶ ತರುವುದಕ್ಕೇ ಪೂರ್ಣ ಗಮನ ಆಗ. ಅಂದಿನ ದಿನಗಳಲ್ಲಿ ಕಾಲೇಜಿನಲ್ಲಿ ವಿವಿಧ ಬಗೆಯ ಚಟುವಟಿಕೆಗಳಿರುತ್ತಿದ್ದುವು. ಆದರಿಂದ ಪರಸ್ಪರ ಮಿಲನಕ್ಕೆ ಒಳ್ಳೆಯ ಅವಕಾಶವಿರುತ್ತಿದ್ದುವು. ನಾವು ವಿದ್ಯಾರ್ಥಿ ಫೆಡರೇಶನ್ನಿನ ಚಟುವಟಿಕೆಗಳಲ್ಲಿ ತೊಡಗಿದ್ದುದು, ಕಮ್ಯುನಿಸ್ಟರ ಸಂಪರ್ಕದಲ್ಲಿರುವ ವಿಚಾರ ಹೇಗೋ ಎಚ್ಚೆನ್ ಗಮನಕ್ಕೆ ಬಂದಿತು. ಆದರೆ ಕಂಡಾಗ ಏನೂ ಹೇಳಲಿಲ್ಲ. ಪರೀಕ್ಷೆಯ ಕಡೆಗೆ ಗಮನ ಕೊಡಬೇಕೆಂದು ಹೇಳಿದರು. ಕಮ್ಯುನಿಸ್ಟ್ ಚಟುವಟಿಕೆಗಳಲ್ಲಿ ಭಾಗವಹಿಸುವುದರಿಂದ ಆಗಬಹುದಾದ ತೊಂದರೆಗಳ ಬಗ್ಗೆ ಎಚ್ಚರಿಸಿದರು.

ನ್ಯಾಷನಲ್ ಕಾಲೇಜು ಬಿಟ್ಟಮೇಲೂ ಎಚ್ಚೆನ್‌ರ ಸಂಪರ್ಕ ಮುಂದುವರಿಯಿತು. ವಿದ್ಯಾರ್ಥಿ ಫೆಡರೇಶನ್ನಿನ ಕಾರ್ಯಕ್ರಮಗಳಿಗೆ, ಇತರ ಚಟುವಟಿಕೆಗಳಿಗೆ ಕಾಲೇಜಿನ ಆವರಣ ಬೇಕಾದಾಗಲೆಲ್ಲ ಎಚ್ಚೆನ್ ನೆರವಿಗೆ ಬರುತ್ತಿದ್ದರು. ಮುಂದೆ ಕೆಲವು ವರ್ಷಗಳು ಅವರನ್ನು ಭೇಟಿಯಾಗಲಿಲ್ಲ. ಮಧ್ಯೆ ಒಮ್ಮೆ ಭೇಟಿಯಾದಾಗ ಅವರು ಬೆಂಗಳೂರು ವಿಶ್ವವಿದ್ಯಾನಿಲಯದ ಉಪಕುಲಪತಿ. ಉಭಯ ಕುಶಲೋಪರಿ ಆದಮೇಲೆ ಇನ್ನೂ ಪಾರ್ಟಿಯಲ್ಲಿದ್ದೀರಾ ಎಂದಷ್ಟೇ ಕೇಳಿದರು.

ಈಗ ಹತ್ತು ಹನ್ನೆರಡು ವರ್ಷಗಳಿಂದ ಎಚ್ಚೆನ್‌ರನ್ನು ಆಗಾಗ ಭೆಟ್ಟಿಯಾಗುತ್ತಿದ್ದೆ. ಯಾವಾಗ ಸಭೆಗಳಿಗೆ ಜಾಗ ಬೇಕೆಂದರೂ ಅವರು ಏರ್ಪಾಟು ಮಾಡುತ್ತಿದ್ದರು. ಕ್ಲಾಸ್ ರೂಮುಗಳನ್ನು ಬೇಕಾದಾಗ ಉಪಯೋಗಿಸಿಕೊಳ್ಳಬಹುದೆಂದು ಹೇಳಿದ್ದರು. ಯಾವಾಗಲೂ ಕಮ್ಯುನಿಸ್ಟ್ ಪಾರ್ಟಿಗಳು ಒಂದುಗೂಡಬೇಕೆಂದು ಹೇಳುತ್ತಿದ್ದರು. ಆರೆಸ್ಸೆಸ್ ಮತ್ತು ಭಾಜಪ ಬೆಳವಣಿಗೆ ಬಗ್ಗೆ ಅವರಿಗೆ ಕಳವಳ ಇತ್ತು. ಕಾಲೇಜಿನಲ್ಲೇ ಅವರು ಸಾಕಷ್ಟು ಸಂಖ್ಯೆಯಲ್ಲಿರುವುದೂ ತಿಳಿದಿತ್ತು. ಆದರೆ ಬಹಿರಂಗವಾಗಿ ಅವರ ವಿರುದ್ಧವಾಗಿ ಬಾರದೆ ದೂರ ಉಳಿಯುತ್ತಿದ್ದುದು, ಯಾಕೆ ಇಲ್ಲದ ತೊಂದರೆ, ಅವರನ್ನೇಕೆ ಎದುರು ಹಾಕಿಕೊಳ್ಳಬೇಕು ಎನ್ನುವ ಮನೋಭಾವ. ಎಲ್ಲರನ್ನೂ ತೃಪ್ತಿಗೊಳಿಸುವ, ಅದಕ್ಕೆ ತಕ್ಕಂತೆ ನಡೆದುಕೊಳ್ಳುವ ಪ್ರವೃತ್ತಿಯನ್ನು ಮೈಗೂಡಿಸಿಕೊಂಡಿದ್ದರು. ಇಕ್ಕಟ್ಟಿನಲ್ಲಿ ಸಿಕ್ಕು ಸಂದರ್ಭ

ಬಂದರೆ ಏನಾದರೊಂದು ಜೋಕ್ ಹೇಳಿ ಜಾರಿಕೊಳ್ಳುತ್ತಿದ್ದರು. ವಿಚಾರವಾದಿಯಾಗಿದ್ದರು ಎಚ್ಚೆನ್ ಎನ್ನುವುದರಲ್ಲಿ ಸಂಶಯವಿಲ್ಲ. ಆದರೂ ಕೆಲವೊಮ್ಮೆ ಅಸ್ಪಷ್ಟ ನಿಲುವು ತಳೆಯುತ್ತಿದ್ದರು.

ಎಚ್ಚೆನ್‌ರನ್ನು ಕೊನೆಯ ಸಲ ನಾನು ಭೆಟ್ಟಿಯಾದ್ದು ಅವರು ನಿಧನರಾಗುವುದಕ್ಕೆ ಕೆಲವು ವಾರಗಳ ಹಿಂದೆ. ಆಗಲೇ ಅವರ ಆರೋಗ್ಯ ಅಷ್ಟು ಚೆನ್ನಾಗಿರಲಿಲ್ಲ. ಕಮ್ಯುನಿಸ್ಟ್ ಪಾರ್ಟಿ ಕಟ್ಟಡ ನಿಧಿಗೆ ಐದು ಸಾವಿರ ರೂಪಾಯಿಗಳ ಚೆಕ್ ನೀಡಿ 'ಕೆಂಬಾವುಟ' ಪತ್ರಿಕೆಗೆ ಚಂದಾ ನೀಡಿದರು. ಗಾಂಧಿವಾದಿಯಾಗಿದ್ದರೂ ಕಮ್ಯುನಿಸ್ಟರ ಬಗ್ಗೆ ಒಳ್ಳೆ ಅಭಿಪ್ರಾಯವಿತ್ತು ಅವರಿಗೆ. 'ಏನಾದರೂ ಒಳ್ಳೆಯದಾಗುವುದಿದ್ದರೆ ಕಮ್ಯುನಿಸ್ಟರಿಂದಲೇ, ನೀವು ಒಂದಾಗಿ' ಎಂದು ಹೇಳಿದ್ದರು ಕೊನೆಯಲ್ಲಿ. ಎಲ್ಲ ಪ್ರಗತಿಪರ ಚಟುವಟಿಕೆಗಳಿಗೆ ಬೆಂಬಲ ನೀಡುತ್ತಿದ್ದ ಎಚ್ಚೆನ್ ಈಗ ಬರೀ ನೆನಪು.

ಸೀಯಾರ್ಕೆ, 'ಚೌಬೀನ' ೮೪೯, ೬ನೇ ಅಡ್ಡರಸ್ತೆ, ಬನಶಂಕರಿ ೩ನೇ ಹಂತ
೧ನೇ 'ಎ' ಮುಖ್ಯರಸ್ತೆ, ೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು-೫೬೦ ೦೮೫

# ವಿಜ್ಞಾನ ಚಳವಳಿಯ ಮಹಾಪೋಷಕ ಡಾ|| ಎಚ್ಚೆನ್

**ಬೆಂ**ಗಳೂರು ವಿಶ್ವವಿದ್ಯಾಲಯದ ಕುಲಪತಿಗಳಾಗಿದ್ದಾಗ ಡಾ|| ಎಚ್ಚೆನ್‌ರವರು 'ಪವಾಡ ಬಯಲು ಸಮಿತಿ' ರಚಿಸಿ ರಾಷ್ಟ್ರದ ಎಲ್ಲರ ಗಮನ ಸೆಳೆದರಾದರೂ ಸಹ ನನಗೆ ಅವರು 'ಜನಪ್ರಿಯ ವಿಜ್ಞಾನ' ಕನ್ನಡ ಮಾಸಿಕವನ್ನು ಹೊರತಂದಿದ್ದು ಹೆಚ್ಚು ಆಸಕ್ತಿ ಹುಟ್ಟಿಸಿತ್ತು. ಅಲ್ಲದೆ, ಕನ್ನಡ ಅಧ್ಯಯನ ಸಂಸ್ಥೆಯಿಂದ 'ವಿಚಾರ ಸಾಹಿತ್ಯ'ದ ಸಂಪುಟಗಳನ್ನು ಹೊರತರಲು ಪ್ರೇರೇಪಿಸಿದ್ದು ಹೆಚ್ಚಿನ ಗೌರವ ಮೂಡುವಂತೆ ಮಾಡಿತ್ತು. ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತಿನಲ್ಲಿ ನಾನು ಕೆಲಸಮಾಡಲು ಆರಂಭಿಸಿದ ನಂತರ ನನ್ನ ಮತ್ತು ಎಚ್ಚೆನ್‌ರವರ ಒಡನಾಟ ಹೆಚ್ಚಾಯಿತು. ಸುಮಾರು ಇಪ್ಪತ್ತು ವರ್ಷಗಳ ದೀರ್ಘ ಒಡನಾಟದಲ್ಲಿ ನಾನು ಅವರಿಂದ ಸಾಕಷ್ಟು ಕಲಿತಿದ್ದೇನೆ. ನನ್ನ ವ್ಯಕ್ತಿತ್ವ ಹಾಗೂ ವಿಜ್ಞಾನ ಚಳವಳಿಯು ಉತ್ತಮಗೊಳ್ಳಲು ಡಾ|| ಎಚ್ಚೆನ್ ನೀಡಿದ ಸಲಹೆ, ಮಾರ್ಗದರ್ಶನ ಸಹಾಯ ಮಾಡಿವೆ.

ಒಂದು ಖಾಸಗಿ ಕಾಲೇಜಿನ ಅಧ್ಯಾಪಕ ವಿಶ್ವವಿದ್ಯಾಲಯದ ಕುಲಪತಿಯಾಗಲು ಅಥವಾ ಶಾಸಕನಾಗಲು ಅಥವಾ ಪದ್ಮಭೂಷಣ ಪ್ರಶಸ್ತಿ ಪಡೆಯಲು ಎಚ್ಚೆನ್ ಗಾಂಧಿವಾದಿಯಾಗಿದ್ದುದು ಕಾರಣವೆನ್ನುವುದಕ್ಕಿಂತ ಅವರು ಜೀವನದಲ್ಲಿ ವಿಜ್ಞಾನದ ವಿಧಾನವನ್ನು ಅನುಸರಿಸಿದ್ದೇ ಪ್ರಮುಖ ಕಾರಣ. ಅವರು ಭೌತಶಾಸ್ತ್ರದ ಅಧ್ಯಾಪಕರಾಗಿ ಒಂದು ಮಾತನ್ನು ಅನೇಕ ವೇಳೆ ಹೇಳುತ್ತಿದ್ದರು : ''ನೋಡಪ್ಪಾ ಫಿಸಿಕ್ಸ್ ಬಗ್ಗೆ ಎಂ.ಎಸ್ಸಿ ಮಾಡಿರುವವರು, ಎಲ್ಲರೂ ಮಾತನಾಡ್ತಾರೆ, ನನಗಿಂತ ಚೆನ್ನಾಗಿ ಪಾಠ ಮಾಡ್ತಾರೆ, ಆದರೆ ಸೈಂಟಿಫಿಕ್ ಆ್ಯಟಿಟ್ಯೂಡ್ ಬಗ್ಗೆ ಮಾತನಾಡಲ್ಲ. ಇವತ್ತು ಬೇಕಾಗಿರುವುದು ನಾವು ಹುಡುಗರಲ್ಲಿ ಸೈಂಟಿಫಿಕ್ ಆ್ಯಟಿಟ್ಯೂಡ್ ಬೆಳೆಸೋದು.'' ಬಹುಶಃ ಅದಕ್ಕಾಗಿಯೇ ಎಚ್ಚೆನ್ ಅವರ ಜೀವನದ ಬಹುಪಾಲು ಸಮಯವನ್ನು ವೈಜ್ಞಾನಿಕ ಮನೋಭಾವದ ಪ್ರಚಾರಕ್ಕೆ ಮೀಸಲಿಟ್ಟರು. ಮೊದಮೊದಲಿಗೆ ತಾನು ಹೇಳುವ ಮಾತುಗಳಿಗಿಂತ ಹೆಸರಾಂತ ವಿಜ್ಞಾನಿಗಳು, ತತ್ವಜ್ಞಾನಿಗಳು ಹೇಳಿದ ಮಾತುಗಳಿಗೆ ಮನ್ನಣೆ ಸಿಗಬಹುದೆಂದು ಬುದ್ಧ, ಐನ್‌ಸ್ಟೀನ್ ಹಾಗೂ ನೆಹರೂರವರು ವೈಜ್ಞಾನಿಕ ಮನೋಭಾವದ ಬಗ್ಗೆ ಹೇಳಿರುವ ನುಡಿಗಳನ್ನು ಸಂಗ್ರಹಿಸಿ ಪ್ರಕಟಿಸಿದರು. 'ಬೆಂಗಳೂರು ಸೈನ್ಸ್ ಫೋರಂ'ನ್ನು ೧೯೬೬ರಲ್ಲಿ ಆರಂಭಿಸಿ ವಿಜ್ಞಾನಕ್ಕೆ ಒಂದು ವೇದಿಕೆ ಸೃಷ್ಟಿ ಮಾಡಿಕೊಂಡರು. ಪ್ರತಿ ಬುಧವಾರ ಒಂದು ವಿಜ್ಞಾನ ಉಪನ್ಯಾಸ, ಜುಲೈ ತಿಂಗಳಲ್ಲಿ ಪ್ರತಿದಿನ ಕಾರ್ಯಕ್ರಮ ಹಾಗೂ ಬೇಸಗೆಯಲ್ಲಿ ಮಕ್ಕಳಿಗೆ ವಿಜ್ಞಾನ ಶಿಬಿರಗಳನ್ನು ಏರ್ಪಡಿಸುತ್ತಾ ಬಂದರು. ನಾಡಿನ ಎಲ್ಲ ಪ್ರಖ್ಯಾತ ವಿಜ್ಞಾನಿಗಳು ಬೆಂಗಳೂರು ಸೈನ್ಸ್ ಫೋರಂನಲ್ಲಿ ಉಪನ್ಯಾಸ ನೀಡಿದ್ದಾರೆ ಮತ್ತು ಸ್ವಾಗತದಲ್ಲಿ ಎಚ್ಚೆನ್‌ರವರು ವೈಜ್ಞಾನಿಕ ಮನೋಭಾವದ ಪ್ರಾಮುಖ್ಯತೆಯ ಬಗ್ಗೆ ಹೇಳಿದುದನ್ನು ಕೇಳಿಸಿಕೊಂಡಿದ್ದಾರೆ. ಎಳೆಯ ಮನಸ್ಸುಗಳಲ್ಲಿ ವೈಜ್ಞಾನಿಕ ಮನೋಭಾವ ಬೆಳೆಸುವಲ್ಲಿ ಬೇಸಗೆ ವಿಜ್ಞಾನ ಶಿಬಿರಗಳು ಯಶಸ್ವಿಯಾಗಿವೆ ಎಂಬುದರಲ್ಲಿ ಎರಡು ಮಾತಿಲ್ಲ. ಬಹುಶಃ ಬೆಂಗಳೂರು ಸೈನ್ಸ್ ಫೋರಂನ ಚಟುವಟಿಕೆಗಳು ಬೆಂಗಳೂರಿನ ಜನತೆಗೆ ಸೀಮಿತವಾಗಿವೆ ಎಂಬ ಕಾರಣಕ್ಕೆ ಅಥವಾ ರಾಜ್ಯದ ಎಲ್ಲರಲ್ಲಿಯೂ ವಿಜ್ಞಾನದಲ್ಲಿ ಆಸಕ್ತಿ ಹಾಗೂ ವೈಜ್ಞಾನಿಕ ಮನೋಭಾವ ಬೆಳೆಸಬೇಕೆಂದು ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತನ್ನು ಪೋಷಿಸಿದರು. ೧೯೮೦ರಲ್ಲಿ ಕರಾವಿಪದ ಸ್ಥಾಪಕ ಅಧ್ಯಕ್ಷರಾಗಿ ಭದ್ರ ಬುನಾದಿ ಹಾಕಿದರು.

ಕರಾವಿಪಕ್ಕೆ ಒಂದು ಸಾಂಸ್ಥಿಕ ರೂಪ ಬರುತ್ತಿದ್ದ ಸಂದರ್ಭದಲ್ಲಿ ನಾನು ತುಮಕೂರಿನ ಸಂಘಟಕನಾಗಿ ಎಚ್ಚೆನ್‌ರವರ ಸಂಪರ್ಕಕ್ಕೆ ಬಂದೆ. ಸಮಾನ ಆಸಕ್ತಿ, ಸ್ವಭಾವ ಹಾಗೂ ಮನೋಭಾವದಿಂದ ಪರಿಚಯವು ಆತ್ಮೀಯ ಸಂಬಂಧವಾಗಿ ವಿಕಾಸಗೊಂಡಿತು. ಅವರ ಸಲಹೆ ಕೇಳುವ, ಚರ್ಚೆ ಮಾಡುವ, ಭಿನ್ನಾಭಿಪ್ರಾಯ ವ್ಯಕ್ತಪಡಿಸುವ ಹಾಗೂ ಜೊತೆಯಲ್ಲಿ ಪ್ರಯಾಣಿಸುವ ಅನೇಕ ಅವಕಾಶಗಳು ನನಗೆ ಒದಗಿಬಂದಿದ್ದವು. ಸುಮಾರು ಎರಡು ದಶಕಗಳಿಗೂ ಹೆಚ್ಚಿನ ಒಡನಾಟದಲ್ಲಿ ನಾನು ಎಚ್ಚೆನ್‌ರವರಿಂದ ಪ್ರಭಾವಿತಗೊಂಡಿದ್ದೇನೆ. ಅವರ ವ್ಯಕ್ತಿತ್ವವನ್ನು ನನ್ನ ಸೀಮಿತ ಅನುಭವ, ಜ್ಞಾನದಿಂದ ಅಳೆಯಲು ಪ್ರಯತ್ನಿಸಿದ್ದೇನೆ.

ಅವರದು ಬಹುಮುಖ ಪ್ರತಿಭೆ. ಕೋಲಾರ ಜಿಲ್ಲೆಯ ಭಾಷೆಯ ಸೊಗಡು, ತೆಲುಗು ಮಾತೃಭಾಷೆಯಾದರೂ ಕನ್ನಡದ ಬಗ್ಗೆ ತೀವ್ರ ಪ್ರೀತಿ, ಅಭಿಮಾನ ಅವರಲ್ಲಿ ಎದ್ದು ಕಾಣುತ್ತಿತ್ತು. ಬಡಕುಟುಂಬ, ಹಿಂದುಳಿದ ಜನಾಂಗದಿಂದ ಬಂದ ಎಚ್ಚೆನ್‌ರವರು ಬಡವರನ್ನು, ಭಿಕ್ಷುಕರನ್ನು ಕಂಡರೆ ಅನುಕಂಪ ತೋರುತ್ತಿದ್ದರು. ತನ್ನ ಹಳ್ಳಿಯ ಬಗ್ಗೆ ತುಂಬ ಅಭಿಮಾನ. ಹಾಗಾಗಿಯೇ ತನ್ನ ಹಳ್ಳಿಗೆ ಸರ್ಕಾರದಿಂದ ಸಿಗಬಹುದಾದ ಎಲ್ಲ ಅನುಕೂಲಗಳನ್ನು ಒದಗಿಸಿಕೊಟ್ಟಿದ್ದಾರೆ. ಕೋಲಾರ ಜಿಲ್ಲೆಗೆ ಯಾರೇ ಜಿಲ್ಲಾಧಿಕಾರಿ ಅಥವಾ ಜಿಲ್ಲಾ ಪಂಚಾಯಿತಿಯ ಕಾರ್ಯನಿರ್ವಹಣಾಧಿಕಾರಿ ಬಂದರೂ ಪರಿಚಯ ಮಾಡಿಕೊಳ್ಳುತ್ತಿದ್ದರು. ಅವರಲ್ಲಿ ಹಿಡಿದ ಕೆಲಸವನ್ನು ಸಾಧಿಸುವ ಹಠ, ಛಲ ತೀವ್ರವಾಗಿತ್ತು. ಕರಾವಿಪಕ್ಕೆ ಒಂದು ನಿವೇಶನ ಬೇಕು ಎಂಬ ಸಲಹೆ ಬಂದಾಗ ಅದರ ಜವಾಬ್ದಾರಿ ಸ್ವೀಕರಿಸಿದರು. ತಾವೇ ಸ್ವತಃ ಬಿ.ಡಿ.ಎ. ಕಚೇರಿಗೆ ಆಟೋನಲ್ಲಿ ಹೋಗುತ್ತಿದ್ದರು. ಯಾವ ಅಧಿಕಾರಿಯಿರಲಿ, ಪರಿಚಯ ಮಾಡಿಕೊಂಡು, ಹಾಸ್ಯ ಚಟಾಕಿಗಳನ್ನು ಹಾರಿಸಿ ಕಾರ್ಯ ಸಾಧಿಸುತ್ತಿದ್ದರು. ರಾತ್ರಿ ೧೨ ಆಗಲಿ ಅಥವಾ ಮುಂಜಾನೆ ೫ ಗಂಟೆಯಾಗಲಿ ಫೋನ್ ಮಾಡಿ ಕಾರ್ಯ ಯಾವ ಹಂತದಲ್ಲಿದೆ ಎಂಬುದನ್ನು ತಿಳಿಸುತ್ತಿದ್ದರು. ಅವರಿಗೆ ಜೀವನದ ಬಗ್ಗೆ ತೀವ್ರ ಆಸಕ್ತಿಯಿತ್ತು. ತಾನು ದೀರ್ಘಕಾಲ ಬದುಕಬೇಕೆಂಬ ಬಯಕೆಯಿತ್ತು. ''ನೋಡಪ್ಪಾ, ನನಗೆ ಸಕ್ಕರೆ ಕಾಯಿಲೆ ಇಲ್ಲ, ರಕ್ತದ ಒತ್ತಡ ಇಲ್ಲ, ಕೊಲೆಸ್ಟೆರಾಲ್ ಅಂಶ ಸಹಜ ಪ್ರಮಾಣಕ್ಕಿಂತ ಕಡಿಮೆ ಇದೆ. ಈಗೂ ಲಾಲ್‌ಬಾಗ್‌ನಲ್ಲಿ ಎರಡು ಸುತ್ತು ನಡೆಯುತ್ತೇನೆ. ನೀನೇನೂ ಹೆದರಬ್ಯಾಡ, ವಿಜ್ಞಾನಭವನ ಪೂರೈಸಿಕೊಡ್ತೀನಿ'' ಎಂದು ನಗುತ್ತಾ ಹೇಳುತ್ತಿದ್ದರು.

ಅವರ ಕೊಠಡಿಗೆ ಭೇಟಿ ನೀಡಿದಾಗ ಅವರ ಸರಳ ಜೀವನ, ಸಜ್ಜನಿಕೆಯ ಪರಿಚಯವಾಗುತ್ತಿತ್ತು. ಕಡು ಬೇಸಗೆಯಲ್ಲಿಯೂ ಫ್ಯಾನ್ ಇಲ್ಲದೆ ಮಲಗುವುದು ನನಗೆ ಆಶ್ಚರ್ಯ ಉಂಟುಮಾಡಿತ್ತು. ಪ್ರಶ್ನಿಸಿದೆ. ''ಅಲ್ಲಪ್ಪಾ, ಬೆಳಿಗ್ಗೆ ೫ರಿಂದ ರಾತ್ರಿ ೧೦ರವರೆಗೆ ದುಡಿದರೆ ನಿದ್ದೆ ಬಂದೇ ಬರುತ್ತೆ. ನಿದ್ದೆ ಬಂದ ಮೇಲೆ ಫ್ಯಾನ್ ಯಾಕೆ ಬೇಕು. ಬೀದೀಲಿ ಮಲಗುವವರಿಗೆ ಫ್ಯಾನ್ ಎಲ್ಲಿದೆ ?'' ಎಂದು ಮರುಪ್ರಶ್ನಿಸಿದರು. ಪ್ರೀತಿಯಿಂದ ತನ್ನ ಹಳ್ಳಿಯಿಂದ ತಂದ ಕಡಲೇಕಾಯಿ ಅಥವಾ ಬಾಳೆಹಣ್ಣು ಕೊಡುತ್ತಿದ್ದರು. ಮಾತಾಡಿದ ಸಮಯ ಹೆಚ್ಚಾದರೆ ಹೋಟೆಲಿನಿಂದ ಇಡ್ಲಿ, ವಡೆ ತರಿಸಿ, ನಾವು ತಿನ್ನುವುದನ್ನು ನೋಡಿ ಸಂಭ್ರಮಿಸುತ್ತಿದ್ದರು. ಜೋಕುಗಳನ್ನು ಹೇಳಿ ನಗುವ, ನಗಿಸುವ ಹಾಗೂ ಹಾಸ್ಯ ಚಟಾಕಿಗಳಿಂದಲೇ ನಮ್ಮ ವ್ಯಕ್ತಿತ್ವದ ಓರೆಕೋರೆಗಳನ್ನು, ಸಮಾಜದ ವಿಲಕ್ಷಣ ಸ್ವಭಾವಗಳನ್ನು ಲೇವಡಿ ಮಾಡುವ ಪರಿ ಎಚ್ಚೆನ್‌ರವರಿಗೆ ಕರಗತವಾಗಿತ್ತು.

ಎಚ್ಚೆನ್‌ರವರು ಎಲ್ಲ ಪ್ರಗತಿಪರ ಧೋರಣೆಗಳ ಪರವಾಗಿದ್ದರು. ಆದರೆ ನೇರವಾಗಿ ಪ್ರಗತಿಪರ ಅಥವಾ ಕ್ರಾಂತಿಕಾರಿ ಚಳವಳಿಗಳ ನಾಯಕತ್ವ ವಹಿಸುತ್ತಿರಲಿಲ್ಲ. ಎಐಎಸ್‌ಎಫ್, ಎಸ್‌ಎಫ್‌ಐ, ಎಐಡಿಎಸ್‌ಒ, ಡಿಎಸ್‌ಎಸ್‌ಗಳ ಸದಸ್ಯರಿಗೆ ಬೆಂಬಲ ನೀಡಲು ಹಾಗೂ ಅವರ ಸಭೆಗಳಲ್ಲಿ ಮುಖ್ಯ ಅತಿಥಿಯಾಗಿ ಭಾಗವಹಿಸಲು ಸಿದ್ಧವಿರುತ್ತಿದ್ದರು. ಅವರು ವಿಜ್ಞಾನದ ಪಕ್ಷಪಾತಿಯಾಗಿದ್ದುದರಿಂದ ಅಲ್ಲಿಯೂ ವೈಜ್ಞಾನಿಕ ಮನೋಭಾವದ ಬಗ್ಗೆ ಮಾತನಾಡುತ್ತಿದ್ದರು. ವಿಜ್ಞಾನ ಜನರಿಗೆ ತಲುಪಬೇಕೆಂಬ ಮಹದಾಸೆಯಲ್ಲಿ ವಿಜ್ಞಾನ ಸಂಘಟನೆಗಳ, ವಿಜ್ಞಾನಿಗಳ ಸಣ್ಣ ಪುಟ್ಟ ಅವೈಜ್ಞಾನಿಕ ಅಂಶಗಳನ್ನು ಗಮನಿಸದೆ ಸುಮ್ಮನಾಗುತ್ತಿದ್ದರು. ಎಚ್ಚೆನ್‌ರವರು ಉಡುಗೆಯಲ್ಲಿ, ಆಹಾರದಲ್ಲಿ, ಸರಳತೆಯಲ್ಲಿ ಗಾಂಧಿವಾದಿಯಾಗಿದ್ದರೂ ಮನಸ್ಸಲ್ಲಿ ನೆಹರೂರವರ ಚಿಂತನೆ ಹಾಗೂ ವಿಜ್ಞಾನ ಶಿಕ್ಷಣಕ್ಕೆ ನೆಹರೂ ನೀಡಿದ ಪ್ರಾಮುಖ್ಯತೆಯನ್ನು ಮೆಚ್ಚುತ್ತಿದ್ದರು. ರಾಮಕೃಷ್ಣ ಮಠದ ವಿದ್ಯಾರ್ಥಿಯಾಗಿದ್ದುದರಿಂದ ಪ್ರಾರ್ಥನೆ, ಸಂಗೀತದಲ್ಲಿ ಆಸಕ್ತಿ ಬೆಳೆಸಿಕೊಂಡಿದ್ದರೂ ಸಹ ಪ್ರಾರ್ಥನೆಯಿಂದ ಪ್ರಯೋಜನವಿಲ್ಲವೆಂದು ಹೇಳುತ್ತಿದ್ದರು. ವಿಜ್ಞಾನ, ಶಿಕ್ಷಣ ಎಲ್ಲರಿಗೂ ದೊರಕಬೇಕೆಂಬ ಕಾಳಜಿ ಇದ್ದ ಎಚ್ಚೆನ್ ವಿಜ್ಞಾನ, ತಂತ್ರಜ್ಞಾನದ ವಾಣಿಜ್ಯೀಕರಣವನ್ನು ವಿರೋಧಿಸುತ್ತಿದ್ದರು. ಗ್ರಾಮಾಂತರ ಪ್ರದೇಶಗಳಲ್ಲಿ ವಿಜ್ಞಾನ ಶಿಕ್ಷಣ ದೊರಕುವಂತಾಗಬೇಕೆಂದು ಆಗಾಗ್ಗೆ ಹೇಳುತ್ತಿದ್ದರು.

"The world will not perish for lack of wonders, but the world will perish for lack of wonder" ಎಂಬ ಜೆ.ಬಿ.ಎಸ್. ಹಾಲ್ಡೇನ್‌ರವರ ಮಾತುಗಳನ್ನು ಅನೇಕ ವೇಳೆ ಪ್ರಸ್ತಾಪಿಸುತ್ತಿದ್ದರು. ಮಕ್ಕಳಲ್ಲಿ ವಿಜ್ಞಾನದ ಬಗ್ಗೆ ಆಸಕ್ತಿ ಮೂಡಿಸುವ ಸಲುವಾಗಿಯೇ ಎಚ್ಚೆನ್ ನ್ಯಾಷನಲ್ ಪ್ರೌಢಶಾಲೆ ಬಸವನಗುಡಿ ಹಾಗೂ ಹೊಸೂರಿನಲ್ಲಿ ವಿಜ್ಞಾನಕೇಂದ್ರಗಳನ್ನು ಸ್ಥಾಪಿಸಿದರು. ಜಯನಗರ ನ್ಯಾಷನಲ್ ಕಾಲೇಜಿನಲ್ಲಿಯೂ ವಿಜ್ಞಾನ ಕೇಂದ್ರವನ್ನು ಸ್ಥಾಪಿಸಿದ್ದಾರೆ. ಕರಾವಿಪ ಪ್ರಕಟಿಸುವ 'ಬಾಲವಿಜ್ಞಾನ'ದ ಹಳೆಯ ಪ್ರತಿಗಳನ್ನು ಸಗಟಾಗಿ ಖರೀದಿಸಿ ತಮ್ಮ ಸಂಸ್ಥೆಯ ಶಾಲೆಗಳ ವಿದ್ಯಾರ್ಥಿಗಳಿಗೆ ಉಚಿತವಾಗಿ ಹಂಚುತ್ತಿದ್ದರು. ಕರಾವಿಪದಿಂದ ಎಲ್ಲ ಜಿಲ್ಲೆಗಳಲ್ಲಿಯೂ ವಿಜ್ಞಾನ ಕೇಂದ್ರಗಳು ಅಸ್ತಿತ್ವಕ್ಕೆ ಬರುತ್ತಿರುವುದನ್ನು ಕಂಡು ಸಂತಸಪಡುತ್ತಿದ್ದರು. ಬೆಳಗಾವಿ, ರಾಯಚೂರು, ತುಮಕೂರು, ವಿಜ್ಞಾನ ಕೇಂದ್ರಗಳಿಗೆ ಭೇಟಿ ನೀಡಿ ಪ್ರೋತ್ಸಾಹ ನೀಡಿದ್ದರು. ವಿಜ್ಞಾನ ಎಲ್ಲರಿಗೂ ದೊರಕುವಂತಾಗಬೇಕೆಂಬ ಮುಂದಾಲೋಚನೆಯಿಂದ

ಅಖಿಲ ಕರ್ನಾಟಕ ವಿಜ್ಞಾನ ಭವನ ನಿರ್ಮಿಸಲು ಆರಂಭಿಸಿದ್ದರು. ''ಮಕ್ಕಳಲ್ಲಿ ವಿಜ್ಞಾನದ ಬಗ್ಗೆ ನಿರಂತರ ಆಸಕ್ತಿ ಮೂಡಿಸುವ ಎಲ್ಲ ಕಾರ್ಯಗಳಿಗೂ ಅಗತ್ಯವಿರುವ ಸಂಪನ್ಮೂಲಗಳನ್ನು ವಿಜ್ಞಾನಭವನ ಹೊಂದಿರಬೇಕು. ಅದರಲ್ಲಿ ಪ್ರದರ್ಶನಗಳು, ಪ್ರಯೋಗಾಲಯಗಳು ಮುಕ್ತವಾಗಿರಬೇಕು. ವಿಜ್ಞಾನ ಶಿಕ್ಷಕರಿಗೆ ಸನಿವಾಸ ತರಬೇತಿ ನೀಡುವ ಅವಕಾಶವಿರಬೇಕು. ವಿಜ್ಞಾನ ಗ್ರಂಥಾಲಯ, ಪುಸ್ತಕ ಪ್ರದರ್ಶನ ಹಾಗೂ ಊಟಾಟ ವ್ಯವಸ್ಥೆಯಿರಬೇಕು'' ಎಂದು ಕನಸು ಕಟ್ಟಿದ್ದರು.

ಅವರ ಕನಸನ್ನು, ಅಭಿಲಾಷೆಯನ್ನು ಸಾಕಾರಗೊಳಿಸಲು ವಿಜ್ಞಾನ ಪರಿಷತ್ತು ಐದು ಕೋಟಿ ರೂಪಾಯಿಗಳ ವೆಚ್ಚದ 'ವಿಜ್ಞಾನ ಭವನ'ದ ನಿರ್ಮಾಣ ಆರಂಭಿಸಿತು. ಮೊದಲಿಗೆ ಸರ್ಕಾರವೂ ಈ ಯೋಜನೆಗೆ ಬೆಂಬಲ ಸೂಚಿಸಿ ಮೂರು ಕೋಟಿಗಳ ಸಹಾಯಧನ ನೀಡುವ ಭರವಸೆ ನೀಡಿತ್ತು. ಆದರೆ ಕಾರಣಾಂತರಗಳಿಂದ ಸರ್ಕಾರ ತನ್ನ ಭರವಸೆಯಿಂದ ಹಿಂದಕ್ಕೆ ಸರಿಯಿತು. ಆ ಸಂದರ್ಭದಲ್ಲಿ ಜನಸಾಮಾನ್ಯರಿಂದಲೇ ಹಣ ಸಂಗ್ರಹಿಸಿ ವಿಜ್ಞಾನ ಭವನ ನಿರ್ಮಿಸೋಣ ಎಂದು 'ಆಶಾಕಿರಣ' ಎಂಬ ಯೋಜನೆಗೆ ಪ್ರೇರಣೆ ನೀಡಿದರು. ದಾನಿಗಳಿಂದ, ಉದ್ಯಮಿಗಳಿಂದ, ವಿಜ್ಞಾನ ಆಸಕ್ತರಿಂದ ಧನ ಸಹಾಯ ಪಡೆದು ಜನರಿಗಾಗಿ ವಿಜ್ಞಾನ ತಲುಪಿಸೋಣ ಎನ್ನುತ್ತಿದ್ದರು. ದುರದೃಷ್ಟವಶಾತ್ ಎಚ್ಚೆನ್ ತಮ್ಮ ಕನಸನ್ನು ನನಸಾಗಿಸುವ ಮೊದಲು ಹೋರಾಟದ ಹಾದಿಯ ಪಯಣ ಮುಗಿಸಿದರು. ಆತ್ಮವಿಲ್ಲದ ಕಾರಣ ಅವರ ಆತ್ಮಕ್ಕೆ ಶಾಂತಿ ಕೋರುವುದರಲ್ಲಿ ಅರ್ಥವಿಲ್ಲ. ಅವರ ಅಪೂರ್ಣ ಕನಸನ್ನು ನನಸಾಗಿಸಲು, ಕರ್ನಾಟಕ ರಾಜ್ಯದ ಮಕ್ಕಳಲ್ಲಿ ವಿಜ್ಞಾನದ ಬಗ್ಗೆ ಆಸಕ್ತಿ ಮೂಡಿಸಲು, ಎಲ್ಲ ಸೌಕರ್ಯಗಳಿರುವ ವಿಜ್ಞಾನಭವನ ಪೂರೈಸಿ ವೈಜ್ಞಾನಿಕ ಮನೋಭಾವ ಬೆಳೆಸುವುದರಲ್ಲಿ ತೊಡಗಿಕೊಳ್ಳುವುದೇ ಇಂದು ನಾವು ಎಚ್ಚೆನ್‌ರವರಿಗೆ ನೀಡಬಹುದಾದ ಉತ್ತಮ ಕಾಣಿಕೆ.

ಡಾ|| ಎಚ್. ಎಸ್. ನಿರಂಜನಾರಾಧ್ಯ, ಪ್ರಾಧ್ಯಾಪಕ, ಶ್ರೀ ಸಿದ್ಧಗಂಗಾ ಮಹಿಳಾ ಕಾಲೇಜು, ತುಮಕೂರು

## ಡಾ|| ಎಚ್.ಎನ್.ರವರ ಕ್ರೀಡಾ ಮುಖ

''ಶಿಕ್ಷಣವೆಂದರೆ ಅದು ಬರೀ ನಾಲ್ಕು ಗೋಡೆಗಳ ಮಧ್ಯೆ ಮೆದುಳಿಗೆ ನೀಡುವ ಕಸರತ್ತಲ್ಲ'' ಎಂಬುದು ಸಂಪೂರ್ಣ ಶಿಕ್ಷಣದ ಬಗ್ಗೆ ಪರಿಪೂರ್ಣ ಅರಿವು ಹೊಂದಿದ್ದ ಎಚ್.ಎನ್.ರವರ ಮಾತು. ಡಾ|| ಎಚ್.ಎನ್. ನಂಬಿದ್ದ ಶಿಕ್ಷಣ ವ್ಯವಸ್ಥೆ– ಒಬ್ಬ ವ್ಯಕ್ತಿಯ ಬದುಕನ್ನ ಹಸನುಗೊಳಿಸಲು ಬೇಕಾದ ದೇಹ, ಆತ್ಮ ಮತ್ತು ಮನಸ್ಸಿಗೆ ನೀಡುವ ಶಿಕ್ಷಣವಾಗಬೇಕು ಎಂಬುದು. ಏಕೆಂದರೆ, ಆಟೋಟಗಳ ಮೂಲಕ ದೇಹವನ್ನು, ರಂಗ ಚಟುವಟಿಕೆಗಳ ಮೂಲಕ ಮನಸ್ಸನ್ನು ವೈಜ್ಞಾನಿಕ ಪ್ರಯೋಗಾಲಯಗಳುಳ್ಳ ಜ್ಞಾನದ ಮೂಲಕ ಬೌದ್ಧಿಕತೆಯನ್ನು ಬೆಳೆಸುವುದರೊಂದಿಗೆ ವಿದ್ಯಾರ್ಥಿಗಳಲ್ಲಿ ಶಕ್ತಿ, ಸಾಮರ್ಥ್ಯ, ಸ್ವಾವಲಂಬನೆ, ಆತ್ಮಸ್ಥೈರ್ಯ ಹಾಗೂ ಆತ್ಮಸಾಕ್ಷಿಗಳನ್ನು ಸಿದ್ಧಿಸಿಕೊಳ್ಳುವುದು. ಇದೇ ಡಾ|| ಎಚ್.ಎನ್. ರವರ ಶಿಕ್ಷಣದ ರೂಪ.

ಡಾ|| ಎಚ್.ಎನ್. ಬರೀ ವಿಜ್ಞಾನದ ಮೇಷ್ಟ್ರು – ಅಷ್ಟೇ ಅಲ್ಲದೆ ಉತ್ತಮ ಕ್ರೀಡಾಪಟು ಎಂಬುದು ಬಹಳಷ್ಟು ಜನಕ್ಕೆ ತಿಳಿಯದ ವಿಚಾರ. ನ್ಯಾಷನಲ್ ಕಾಲೇಜಿನ ಆರಂಭದ ದಿನಗಳ ಸಂದರ್ಭದಲ್ಲಿ ಕಾಲೇಜಿನ ಬ್ಯಾಸ್ಕೆಟ್‌ಬಾಲ್ ತಂಡದ ಆಟಗಾರರಾಗಿದ್ದ ಇವರು ಹಲವಾರು ಪಂದ್ಯಗಳಲ್ಲಿ ಆಟವಾಡಿ ಎಲ್ಲರ ಮೆಚ್ಚುಗೆಗೆ ಪಾತ್ರರಾಗಿದ್ದರು. ಈ ಆಟದ ಸೊಬಗನ್ನು ೭೦ರ ದಶಕದಲ್ಲೇ ಗೌರಿಬಿದನೂರಿನ ನ್ಯಾಷನಲ್ ಕಾಲೇಜಿಗೆ ಕೊಂಡೊಯ್ದ ಹೆಗ್ಗಳಿಕೆ ಇವರದು. ಇದು ಗ್ರಾಮಾಂತರ ಪ್ರದೇಶದ ಹಲವಾರು ವಿದ್ಯಾರ್ಥಿಗಳು ರಾಷ್ಟ್ರ-ಅಂತರರಾಷ್ಟ್ರೀಯ ಮಟ್ಟಕ್ಕೇರಲು ಅನುವು ಮಾಡಿಕೊಟ್ಟಿತು. ಇಷ್ಟೇ ಅಲ್ಲದೆ ೨೦೦೪ರಲ್ಲಿ ಬಾಗೇಪಲ್ಲಿಯ ನ್ಯಾಷನಲ್ ಕಾಲೇಜಿನಲ್ಲಿ ಸುಸಜ್ಜಿತವಾದ ಬ್ಯಾಸ್ಕೆಟ್‌ಬಾಲ್ ಅಂಗಳವನ್ನು ನಿರ್ಮಿಸಿ, ಬೆಂಗಳೂರು ವಿಶ್ವವಿದ್ಯಾಲಯ ಅಂತರ ಕಾಲೇಜು ಬ್ಯಾಸ್ಕೆಟ್‌ಬಾಲ್ ಪಂದ್ಯಾವಳಿಗಳನ್ನು ಅಲ್ಲಿಯೇ ನಡೆಸಿದ್ದಷ್ಟೇ ಅಲ್ಲದೆ, ಸ್ವತಃ ತಾವೇ ಖುದ್ದು ನಾಲ್ಕು ದಿನಗಳ ಕಾಲ ಆಟವನ್ನು ವೀಕ್ಷಿಸಿ ಸಂಭ್ರಮಿಸಿದ್ದು ಆ ಹಿರಿಯ ವಯಸ್ಸಿನ ಕ್ರೀಡಾಸಕ್ತಿಯ ಒಂದು ಅಪರೂಪದ ಉದಾಹರಣೆ.

ಸೆಂಟ್ರಲ್ ಕಾಲೇಜಿನ ವಿದ್ಯಾರ್ಥಿಯಾಗಿದ್ದಾಗಿನ ಸಂದರ್ಭದಲ್ಲಿ ಸೆಂಟ್ರಲ್ ಕಾಲೇಜಿನಿಂದ ಮದ್ರಾಸ್ ವಿಶ್ವವಿದ್ಯಾಲಯಕ್ಕೆ ಹಾಕಿ ಆಟಗಾರರಾಗಿ ಆಯ್ಕೆಯಾಗಿ ಆಟವಾಡಿದ ಮಧುರ ಕ್ಷಣಗಳನ್ನು ನೆನೆಯುತ್ತಲೇ ಭಾರತದ ಹಾಕಿಯ ಅವಸ್ಥೆಯನ್ನು ಕಂಡು ಮರುಗಿದ್ದೂ ಉಂಟು. ಇದರೊಂದಿಗೆ ಅಧ್ಯಾಪಕರಾಗಿದ್ದಾಗ ಎಂ.ಜಿ.ಎಸ್. ಅಂತರ ಕಾಲೇಜು ಅಧ್ಯಾಪಕರುಗಳ ಕ್ರೀಡಾಕೂಟಗಳಲ್ಲಿ ಬಾಲ್ ಬ್ಯಾಡ್‌ಮಿಂಟನ್‌ನಲ್ಲಿ 'ಸೆಂಟರ್ ಪ್ಲೇಯರ್' ಆಗಿ ಇತರರೊಂದಿಗೆ ಆಟವಾಡುತ್ತಿದ್ದುದು ಇಂದಿಗೂ ನ್ಯಾಷನಲ್ ಕಾಲೇಜಿನ ಹಾಗೂ ಹೊಸೂರಿನ ಅಧ್ಯಾಪಕರು ಮರೆತಿಲ್ಲ.

೧೯೭೪ರ ಸಂದರ್ಭದಲ್ಲಿ ಇವರ ಮತ್ತೊಬ್ಬ ಆತ್ಮೀಯರಾದ ಪ್ರೊ|| ಎಸ್. ಸಿ. ಪರಪ್ಪನವರು ಅಧ್ಯಕ್ಷರಾಗಿದ್ದ (ಬಸಪ್ಪ ಪಾರ್ಕಿನಲ್ಲಿರುವ) ದೇವಾಂಗ ಯೂನಿಯನ್ ಬ್ಯಾಸ್ಕೆಟ್‌ಬಾಲ್ ಅಂಗಳದ ಉದ್ಘಾಟನೆಯ ಸಂದರ್ಭ ಕುಲಪತಿಗಳಾಗಿದ್ದ ಡಾ|| ಎಚ್.ಎನ್. ಉದ್ಘಾಟನೆಯನ್ನು ನೆರವೇರಿಸಿ, ತಮ್ಮ ಖಾದಿ ಪಂಚೆಯನ್ನು ಬಿಡಿಗಿಟ್ಟು ಖಾದಿ ಬನಿಯನ್‌ನೊಂದಿಗೆ ಬ್ಯಾಸ್ಕೆಟ್‌ಬಾಲ್ ಆಟಗಾರರೊಂದಿಗೆ ಆಟವಾಡಿದ ಆ ಕ್ಷಣ ನೆರೆದಿದ್ದ ಯುವಕರನ್ನು ದಂಗಾಗಿಸಿತು. ಅಷ್ಟೇ ಅಲ್ಲ, ಬಹಳಷ್ಟು ಜನಕ್ಕೆ ಇವರು ಬ್ಯಾಸ್ಕೆಟ್‌ಬಾಲ್ ಆಟಗಾರರು ಎಂಬುದು ಅರಿವಾಯ್ತು. ಆಟಗಳ ಮೂಲಕ ಮನುಷ್ಯ ಸಂಬಂಧವನ್ನು ಗಟ್ಟಿಗೊಳಿಸುವ ನೆಲೆ ಅವರದಾಗಿತ್ತು.

ಡಾ|| ಎಚ್.ಎನ್. ಒಬ್ಬ ಆಟಗಾರನಾಗಿದ್ದುದರಿಂದಲೇ ಬರುವ ಎಲ್ಲಾ ಕ್ಷಣಗಳನ್ನು ಬಹಳ ಸಂತೋಷದಿಂದ ಸ್ವೀಕರಿಸುತ್ತಿದ್ದರು. ಅವರ ವಿದ್ಯಾರ್ಥಿ ಜೀವನದ ಆಟಗಳ ಕಸರತ್ತು ಅವರಿಗೆ ನೋವು, ನಲಿವು, ದುಃಖ, ಅಪಮಾನ, ಸಂತೋಷಗಳನ್ನು ಒಟ್ಟಿಗೆ ಸ್ವೀಕರಿಸುವ, ಅವುಗಳನ್ನು ಎದುರಿಸುವ ಜಾಣ್ಮೆ, ಶಕ್ತಿ, ಸಾಮರ್ಥ್ಯಗಳನ್ನು ಮೈಗೂಡಿಸಿಕೊಟ್ಟವು. ಇವರ ಕ್ರೀಡಾ ಸ್ಫೂರ್ತಿ ಹಾಗೂ ದೈಹಿಕ ಶಿಕ್ಷಣದ ಮೇಲಿನ ಇವರ ಒಲವು ಇಷ್ಟಕ್ಕೆ ನಿಲ್ಲಲಿಲ್ಲ. ೧೯೭೩-೭೪ರಲ್ಲಿ ಎನ್.ಐ.ಎಸ್. ತರಬೇತಿ ಕೇಂದ್ರ ಪ್ರಾರಂಭಗೊಂಡಾಗ ಎಲ್ಲಾ ಸೌಲಭ್ಯಗಳಿಂದ ಕಂಠೀರವ ಕ್ರೀಡಾಂಗಣದಲ್ಲಿ ಕಾರ್ಯನಿರ್ವಹಿಸುತ್ತಾ ಬಂದಿದ್ದ ಸರ್ಕಾರಿ ದೈಹಿಕ ಶಿಕ್ಷಣ ಕಾಲೇಜನ್ನು ಮೈಸೂರು ವಿಶ್ವವಿದ್ಯಾಲಯಕ್ಕೆ ವರ್ಗಾಯಿಸಬೇಕೆಂಬ ಚಿಂತನೆ ನಡೆಯಿತು. ಆಗ ಬೆಂಗಳೂರು ವಿಶ್ವವಿದ್ಯಾಲಯದ ಕುಲಪತಿಗಳಾಗಿದ್ದ ಡಾ|| ಎಚ್. ಎನ್. ಅವರು ಸರ್ಕಾರಿ ದೈಹಿಕ ಶಿಕ್ಷಣ ಕಾಲೇಜನ್ನು ಜ್ಞಾನಭಾರತಿಗೆ ಸ್ಥಳಾಂತರಿಸಿ, ವಿಶ್ವವಿದ್ಯಾಲಯದ ದೈಹಿಕ ಶಿಕ್ಷಣ ಕಾಲೇಜೆಂದು ಮರುನಾಮಕರಣ ಮಾಡಿದರು. ಡಾ|| ಎಚ್.ಎನ್.ರವರ ಶ್ರಮದ ಫಲವಾಗಿ ಆರಂಭವಾದ ಈ ದೈಹಿಕ ಶಿಕ್ಷಣ ಕಾಲೇಜು, ಶಿಕ್ಷಕರನ್ನು ತರಬೇತುಗೊಳಿಸಿ ಶಾಲಾ ಕಾಲೇಜುಗಳಲ್ಲಿ ಇರುವ ದೈಹಿಕ ಶಿಕ್ಷಣ ಶಿಕ್ಷಕರ ಕೊರತೆಯನ್ನು ತುಂಬುವುದರ ಮೂಲಕ ಇಂದು ಸಾವಿರಾರು ಕ್ರೀಡಾಪಟುಗಳ ಉದ್ಭವಕ್ಕೆ ನಾಂದಿಯಾಯಿತು. ಅವರು ಕಟ್ಟಿದ ದೈಹಿಕ ಶಿಕ್ಷಣ ಕಾಲೇಜು ಇಂದು ಭವ್ಯವಾದ ಕಟ್ಟಡ, ವಿದ್ಯಾರ್ಥಿ ನಿಲಯ, ಈಜುಕೊಳ, ವ್ಯಾಯಾಮ ಶಾಲೆ ಹಾಗೂ ಪ್ರೊ|| ಎಂ. ಎಸ್. ತಿಮ್ಮಪ್ಪನವರ ಸಹಕಾರದೊಂದಿಗೆ ಒಂದು ಕೋಟಿ ರೂಪಾಯಿಗಳ ವೆಚ್ಚದ ಒಂದು ಕ್ರೀಡಾಂಗಣವನ್ನು ಹೊಂದಿದೆ.

ಈ ಮೇಲಿನ ಎಲ್ಲಾ ಘಟನೆಗಳನ್ನು ನೆನೆಯುವುದರ ಮೂಲಕವೇ ಡಾ|| ಎಚ್. ಎನ್. ರವರ ಕ್ರೀಡಾ ಮುಖವನ್ನು ನಾವು ಕಾಣಲು ಸಾಧ್ಯ. ಈ ಮುಖ ನೋವು-ನಲಿವು, ದುಃಖ-ದುಮ್ಮಾನಗಳ ಪ್ರತೀಕ. ಆದರೂ ಒಮ್ಮೆಯೂ ಡಾ|| ಎಚ್.ಎನ್. ಇವುಗಳನ್ನು ತಮ್ಮ ಮುಖದಲ್ಲಿ ಕಟ್ಟಿಹಾಕಿದವರಲ್ಲ. ಬೇರೆಯವರನ್ನು ತಮ್ಮ ತಿಳಿ ಹಾಸ್ಯದ ಮೂಲಕ ನಗಿಸುತ್ತಲೇ ತನ್ನ ಏಕಾಂಗಿತನವನ್ನು ಮರೆಯುತ್ತಿದ್ದ ಡಾ|| ಎಚ್.ಎನ್. ಒಬ್ಬ ಕ್ರೀಡಾಪಟುವಾಗಿ ಎಲ್ಲವನ್ನೂ ಸಮಾನವಾಗಿ ಸ್ವೀಕರಿಸುವ ಅದಮ್ಯ ಚೇತನವಾದರು.

ಡಾ|| ಸುಂದರ್‌ರಾಜ್ ಅರಸ್, ನಿರ್ದೇಶಕರು, ದೈಹಿಕ ಶಿಕ್ಷಣ ನಿರ್ದೇಶನಾಲಯ, ಬೆಂ.ವಿ.ವಿ., ಬೆಂಗಳೂರು

## ಕಮ್ಯುನಿಸ್ಟ್ ಪಕ್ಷಗಳು ಮಾತ್ರ ಆಶಾಕಿರಣ

ಸ್ವಾತಂತ್ರ್ಯಪೂರ್ವ ಹಾಗೂ ನಂತರದ ಬದುಕಿಗೆ ಸಾಕ್ಷಿಯಾಗಿದ್ದ ಕೆಲವೇ ಕೆಲವು ಜನರಲ್ಲಿ ಬಹುತೇಕ ಜನರನ್ನು ಕಳೆದುಕೊಳ್ಳುತ್ತಿದ್ದೇವೆ. ಡಾ|| ಎಚ್. ನರಸಿಂಹಯ್ಯನವರು ಅಂಥವರಲ್ಲಿ ಒಬ್ಬರು. ಅವರ ಅಂಥವರ ಸಾವು ಕೇವಲ ಒಬ್ಬ ವ್ಯಕ್ತಿಯ ಸಾವಾಗುವುದಿಲ್ಲ. ನಿರ್ದಿಷ್ಟ ಸಂದರ್ಭದ, ಇತಿಹಾಸದ ಸಾಕ್ಷಿಯ ಕಣ್ಮರೆಯಾಗುತ್ತದೆ. ಡಾ|| ಎಚ್. ಎನ್. ಅವರ ಜೊತೆ ನಾಲ್ಕಾರು ಬಾರಿ ಭೇಟಿಯಾಗುವ ಸಂದರ್ಭ ಬಂದಿದ್ದರೂ ಎರಡು ಸಲ ಅವರ ಜೊತೆಗಿನ ಸಂಭಾಷಣೆ ಮರೆಯಲಾಗದಂಥಾದ್ದು. ದೇವೇಗೌಡರು ಮುಖ್ಯಮಂತ್ರಿಯಾಗಿದ್ದಾಗ ಡಾ|| ಎಚ್. ಎನ್. ಅವರು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾಗಿದ್ದರು. ಆಗ ಒಂದು ಸಲ ಪುಟ್ಟಪರ್ತಿಯ ಸಾಯಿಬಾಬಾ ಕರ್ನಾಟಕಕ್ಕೆ ಬಂದಾಗ ಮುಖ್ಯಮಂತ್ರಿ ದೇವೇಗೌಡರು ವೇದಿಕೆಯ ಮೇಲೆ ಅವರ ಪಾದಕ್ಕೆರಗಿದ್ದು ಮಾಧ್ಯಮಗಳಲ್ಲಿ ನೋಡಿದ ನಮಗೆಲ್ಲ ಬೇಸರವುಂಟುಮಾಡಿತ್ತು. ಅದಾದ ಕೆಲವೇ ದಿನಗಳಲ್ಲಿ ಡಾ|| ಎಚ್. ಎನ್. ಅವರು ನೇರವಾಗಿ ಸಿಕ್ಕಿದ್ದರು. ಸಾಯಿಬಾಬಾನ ಡಂಭಾಚಾರಗಳನ್ನು ಬಯಲಿಗೆಳೆಯುವುದರಲ್ಲಿ ಎಚ್.ಎನ್. ಪಾತ್ರ ದೊಡ್ಡದು. ನಾನು ಅಂದು ಎಚ್.ಎನ್. ಅವರನ್ನು ಕೇಳಿದೆ. ನಿಮ್ಮನ್ನ ಪ್ರಾಧಿಕಾರದ ಅಧ್ಯಕ್ಷರನ್ನು ಮಾಡಿದ ಮುಖ್ಯಮಂತ್ರಿ ನೀವು ವಿರೋಧಿಸುವ ನಂಬಿಕೆಯ ವ್ಯಕ್ತಿ ಸಾಯಿಬಾಬಾನಿಗೆ ಪಾದಕ್ಕೆರಗಿದರು. ನೀವೇಕೆ ಅದನ್ನು ಖಂಡಿಸಲಿಲ್ಲ? ಎಂಬ ನೇರ ಪ್ರಶ್ನೆಗೆ ಡಾ|| ಎಚ್. ಎನ್. ಎರಡು ಕ್ಷಣ ಮೌನವಾಗಿ ನಂತರ ''ಕೆಲವೊಂದನ್ನು ಸಾಧಿಸಬೇಕಾದಾಗ ಕೆಲವೊಂದನ್ನು ಕಳೆದುಕೊಳ್ಳಬೇಕಾಗುತ್ತದೆ. ಕಳೆದುಕೊಳ್ಳುತ್ತಿರುವುದು, ಸಾಧಿಸುವುದರಲ್ಲಿ ಯಾವುದು ಅವಶ್ಯಕ ಎಂದು ನೋಡಿ ಆಯ್ಕೆಮಾಡಿಕೊಳ್ಳಬೇಕಾಗುತ್ತದೆ'' ಎಂದು ಹೇಳಿ ಮತ್ತೊಂದು ಕ್ಷಣಬಿಟ್ಟು 'ಇದು ನೋವಿನ ಸಂಗತಿ, ನಿಮ್ಮಂಥ ಯುವಕರು ಇಂಥ ಅನಿವಾರ್ಯತೆಗೊಳಗಾಗಬೇಡಿ' ಎಂದು ಹೇಳಿ ಮೌನವಾದರು. ಅವರ ಎದೆಯಾಳದ ನೋವು ಅವರ ಮುಖದ ಮೇಲೆ ಕಾಣುತ್ತಿತ್ತು.

ಇನ್ನೊಮ್ಮೆ ಅವರ ನಿಧನಕ್ಕೆ ಕೆಲವೇ ದಿನಗಳ ಮೊದಲು, ನಮ್ಮ ಆಫೀಸಿಗೆ ಐದು ಸಾವಿರ ರೂಪಾಯಿಯ ಒಂದು ಚೆಕ್ ಮತ್ತು ನಾಲ್ಕು ಮಾತುಗಳ ಒಂದು ಪತ್ರ ಬಂತು. ಪಕ್ಷ ಜಿಲ್ಲಾ ಕಾರ್ಯಾಲಯ ಮತ್ತು ಎಂ. ಎಸ್. ಕೃಷ್ಣನ್ ಸಭಾಂಗಣ ಕಟ್ಟಿಸಲು ಸಹಾಯಧನ ಕೇಳಿ ಕೆಂಬಾವುಟದ ಪತ್ರಿಕೆಯಲ್ಲಿ ಬರೆದಿದ್ದೆವು. ಅದನ್ನೋದಿದ ಡಾ|| ಎಚ್. ನರಸಿಂಹಯ್ಯನವರು ಐದು ಸಾವಿರ ರೂಪಾಯಿ ಕಳಿಸಿದ್ದರು. ಅವರ ಚೆಕ್ ಮತ್ತು ಪುಟ್ಟ ಪತ್ರ ನೋಡಿದ ತಕ್ಷಣ ನಾನು ಅವರಿಗೆ ಫೋನ್ ಹಚ್ಚಿ ಧನ್ಯವಾದ ಹೇಳಿದೆ. ಅಂದು ''ಈ ದೇಶದಲ್ಲಿ ನನ್ನಂಥವನಿಗೆ ಕಮ್ಯುನಿಸ್ಟ್ ಪಕ್ಷಗಳು ಮಾತ್ರ ಆಶಾಕಿರಣಗಳಾಗಿವೆ. ನೀವು ಬೆಳೆಯಬೇಕು. ಅದಕ್ಕಾಗಿ ನನ್ನ ಚಿಕ್ಕ ಕಾಣಿಕೆ'' ಎಂದರು. ಆ ಹಿರಿಯಜೀವ ನನ್ನ ಪಕ್ಷದ ಬಗ್ಗೆ ಇಟ್ಟುಕೊಂಡ ಭರವಸೆ ನನ್ನಲ್ಲಿ ಹೆಮ್ಮೆ ಮೂಡಿಸಿತು. ಸ್ವಲ್ಪ ಭಾವುಕನಾದೆ. ತಾವು ನಮ್ಮ ಕೆಂಬಾವುಟ ಪತ್ರಿಕೆಗೆ ಬರೆಯಬೇಕೆಂದು ಕೇಳಿದೆ. ಬರೆಯಬೇಕಾದ ವಿಷಯಗಳಿವೆ, ಬರೆಯುತ್ತೇನೆಂದರು. ಅದೇ ಕೊನೆ, ಅವರು ತೀರಿಹೋದ ದಿನ ಬೆಳಿಗ್ಗೆ ನ್ಯಾಶನಲ್ ಕಾಲೇಜಿನಲ್ಲಿ ಅವರ ದೇಹದ ಮುಂದೆ ನಿಂತಾಗ ಅವರ ಮಾತುಗಳು ನೆನಪಾದವು. ಮನದಲ್ಲೇ ಹೇಳಿಕೊಂಡೆ, ''ನಿಮ್ಮ ಆಶಯವನ್ನು ಪೂರೈಸುತ್ತೇವೆ'' ಎಂದು.

ಡಾ|| ಎಚ್.ಎನ್. ಸಹಾಯ ಮಾಡಿದ ಎಂ.ಎಸ್.ಕೆ. ಸಭಾಂಗಣ ಉದ್ಘಾಟನೆಯಾಗುವ ದಿನ ಎಚ್.ಎನ್. ಕೋಮಾದಲ್ಲಿದ್ದರು. ಅದು ಉದ್ಘಾಟನೆಯಾದ ಮಾರನೆ ದಿನ ಬೆಳಿಗ್ಗೆಯೇ ಅವರು ಕಣ್ಣು ಮುಚ್ಚಿದರು. ಅವರ ಕನಸುಗಳು, ಆದರ್ಶಗಳು ನಮ್ಮ ಜೊತೆಗಿವೆ. ನಮ್ಮೆಲ್ಲರಿಗೆ ಒಂದು ಮಾದರಿ ಬದುಕನ್ನು ತೋರಿಸಿಹೋದ ಆ ಚೇತನ, ತನ್ನ ಬದುಕಿನ ವಿಧಾನದಲ್ಲಿಯೇ ನಮಗೆ ಆದೇಶ, ಸಂದೇಶಗಳನ್ನು ಬಿಟ್ಟುಹೋಗಿದ್ದಾರೆ. ಅವರ ಆಶಯಗಳನ್ನು ಮುಂದುವರೆಸುವುದೇ ನಾವು ಅವರಿಗೆ ಸಲ್ಲಿಸುವ ಶ್ರದ್ಧಾಂಜಲಿ.

ಡಾ|| ಸಿದ್ದನಗೌಡ ಪಾಟೀಲ, ಘಾಟೆ ಭವನ, ಬೆಂಗಳೂರು

## ಇದ್ದದ್ದು ಹೋಗಲ್ಲ, ಇಲ್ಲದ್ದು ಬರಲ್ಲ

**ಬೆಂ**ಗಳೂರು ಬಸವನಗುಡಿ ನ್ಯಾಷನಲ್ ಕಾಲೇಜಿನ ಕಡೆ ಹೋದಾಗಲೆಲ್ಲ ಎಚ್ಚೆನ್ ಅವರನ್ನು ನೋಡಿಕೊಂಡು, ಮಾತನಾಡಿಸಿಕೊಡು ಬರುವುದು ವಾಡಿಕೆ. ಅವರ ಕೊಠಡಿಗೆ ನುಗ್ಗಿದಾಗಲೆಲ್ಲಾ ಬರ್ಫಿಗಳನ್ನು, ಕಡ್ಲೆಕಾಯಿ ಬೀಜವನ್ನು ಲೂಟಿ ಮಾಡಿಬಿಡುತ್ತಿದ್ದೆವು. ಎಚ್ಚೆನ್ ಕ್ರೀಡಾಪ್ರೇಮಿ, ಅವರು ಕೊನೆಕೊನೆಯಲ್ಲಿ ಬಾಲ್ ಬ್ಯಾಟ್‌ಮಿಂಟನ್ ಆಟದಲ್ಲಿ 'ಸೆಂಟರ್' ಆಡುತ್ತಿದ್ದರು. ಅವರಲ್ಲಿ ಕ್ರೀಡಾಮನೋಭಾವ ಎದ್ದು ಕಾಣುತ್ತಿತ್ತು. ಪರಿಚಿತರ ಮದುವೆಗೆ, ಸಾವಿಗೆ ಸಾಮಾನ್ಯವಾಗಿ ಹೋಗುತ್ತಿದ್ದರು. ತಮ್ಮ ಹಿರಿಯ ವಿದ್ಯಾರ್ಥಿಗಳೊಂದಿಗಿನ ಒಡನಾಟ ಅವರಿಗೆ ಮುದ ನೀಡುತ್ತಿತ್ತು, ತೃಪ್ತಿ ತರುತ್ತಿತ್ತು.

ಎಚ್ಚೆನ್ ಎಷ್ಟು ಸರಳವಾಗಿ ಕಾಣುತ್ತಿದ್ದರೊ ಅಷ್ಟೇ ಸಂಕೀರ್ಣ ವ್ಯಕ್ತಿತ್ವ ಉಳ್ಳವರು. ಅವರನ್ನು ಒಂದು ಪಕ್ಷದ, ಒಂದು ವಾದದ ಪ್ರತಿನಿಧಿ ಎಂದು ಖಚಿತವಾಗಿ ಗುರುತಿಸಲು ಸಾಧ್ಯವಾಗುತ್ತಿರಲಿಲ್ಲ. ಅವರು ನೋಡುವುದಕ್ಕೆ ಗಾಂಧಿವಾದಿಯಾಗಿ ಕಂಡರೂ ಒಮ್ಮೊಮ್ಮೆ ಲೋಹಿಯಾವಾದಿಯಾಗಿ, ಅಂಬೇಡ್ಕರ್‌ವಾದಿಯಾಗಿ, ಮಾರ್ಕ್ಸ್‌ವಾದಿಯಾಗಿ ಗೋಚರಿಸುತ್ತಿದ್ದರು. ಈ ರೀತಿಯ ಎಲ್ಲ ವಾದಗಳ ಸಾರವನ್ನು ಹೀರಿಕೊಂಡು ತಮ್ಮದೇ ಆದ ಎಚ್ಚೆನ್ ವಾದವನ್ನು ಕಂಡುಕೊಂಡಿದ್ದರು. ತಾವು ಅಂದುಕೊಂಡದ್ದನ್ನು ಸಾಧಿಸಿಬಿಡುತ್ತಿದ್ದರು. ಎಚ್ಚೆನ್ ದುಡಿದಿದ್ದೆಲ್ಲಾ ಎನ್.ಇ.ಎಸ್. ವಿದ್ಯಾಸಂಸ್ಥೆಗಳಿಗೆ. ತಮಗಾಗಿ ಎಂದೂ ಲೇವಾದೇವಿಯನ್ನು ಮಾಡಿದವರಲ್ಲ.

ಸುಮಾರು ಇಪ್ಪತ್ತು ವರ್ಷಗಳ ಹಿಂದಿನ ಮಾತು. ಬೆಂಗಳೂರಿಗೆ ಆಗತಾನೆ ಟೀವಿ ಬಂದಿತ್ತು. ಆಗ ಬಣ್ಣದ ಟೀವಿ ಬಂದಿರಲಿಲ್ಲ. ಕಪ್ಪು-ಬಿಳುಪು ಟೀವಿ ಮಾತ್ರ. ಅಂದಿನ ದೂರದರ್ಶನಕ್ಕೆ ತನ್ನದೇ ಆದ ಕಟ್ಟಡವೂ ಇರಲಿಲ್ಲ. ವಿಧಾನ ವೀದಿಯಲ್ಲಿರುವ ವಿಶ್ವೇಶ್ವರಯ್ಯ ಟವರ್ಸ್‌ನ ಇಪ್ಪತ್ತೊಂದನೆಯ ಮಹಡಿಯಲ್ಲಿ ಕಾರ್ಯಾರಂಭ ಮಾಡಿತ್ತು. ನಾನು ಎಚ್ಚೆನ್ ಅವರನ್ನು ಮೊದಲಬಾರಿಗೆ ಟೀವಿಯಲ್ಲಿ ಸಂದರ್ಶನ ನಡೆಸುವ ಅವಕಾಶ ಒದಗಿಬಂದಿತ್ತು. ಅಲ್ಲೇ ಕಾರ್ಯನಿರ್ವಹಿಸುತ್ತಿದ್ದ ಗೆಳೆಯ ಮೋಹನ್‌ರಾಮ್ ಅಂದು ನಮ್ಮೊಂದಿಗೆ ಇದ್ದರು. ನನಗೂ ಎಚ್ಚೆನ್‌ಗೂ ಟೀವಿ ಹೊಸದು. ಅದರ ಅಂತರಂಗ, ಬಹಿರಂಗದ ಬಗ್ಗೆ ಇಬ್ಬರಿಗೂ ಕುತೂಹಲ. ಟೀವಿ ಸ್ಟೇಷನ್‌ನಲ್ಲೇ ಅದರ ಆಗುಹೋಗುಗಳ ಬಗ್ಗೆ ಹರಟೆ ಹೊಡೆದವು. ಸಂದರ್ಶನದ ಅವಧಿ ಹತ್ತಿರವಾಯಿತು. ಟೀವಿಯಲ್ಲಿ ಕಾಣಿಸಿಕೊಳ್ಳುವ ಮೊದಲು ಸೂಕ್ತ ಸಿದ್ಧತೆಗಳಿಗೆ ಗೆಳೆಯ ಮೋಹನ್‌ರಾಮ್ ಸೂಚಿಸಿದರು. ಆಗ ಶುರುವಾಯ್ತು ಪೀಕಲಾಟ. ಎಚ್ಚೆನ್ ಅವರದು ಬಿಳಿ ಖಾದಿ ಅಡ್ಡ ಪಂಚೆ, ತುಂಬು ತೋಳಿನ ಖಾದಿ ಷರಟು, ಹೆಗಲಮೇಲೊಂದು ಖಾದಿವಲ್ಲಿ, ಜೊತೆಗೆ ಗರಿಗರಿಯಾದ ಬಿಳಿಟೋಪಿ. ಕಪ್ಪು-ಬಿಳಿ ಟೀವಿಯಲ್ಲಿ ಬಿಳಿಬಣ್ಣ ಅಷ್ಟು ಚೆನ್ನಾಗಿ ಬರುವುದಿಲ್ಲ. ಆದ್ದರಿಂದ ಎಚ್ಚೆನ್ ಬಣ್ಣದ ಬಟ್ಟೆ ಹಾಕಿಕೊಳ್ಳಬೇಕೆಂಬ ವಾದ ಪ್ರಾರಂಭವಾಯಿತು. ಎಚ್ಚೆನ್ ಇದು ಬೇಡವೆಂದು, ದೂರದರ್ಶನದ ಸಿಬ್ಬಂದಿ ಬೇಕೆಂದು ಮಾತುಕತೆ ಮುಂದುವರಿಯಿತು. ಬಣ್ಣದ ಜುಬ್ಬ, ಬಣ್ಣದ ಟೋಪಿ ಹಾಕಿಕೊಳ್ಳಲು ಮೊದಮೊದಲು ನಿರಾಕರಿಸಿದರು. 'ಹ್ಯಾಗೆ ಬರುತ್ತೋ ಹಾಗೇ ಇರ್‍ಲಿ ಬಿಡಪ್ಪ. ಇದರಿಂದ ನನಗೂ ತೊಂದರೆ ನಿಮಗೂ ತೊಂದರೆ' ಎಂದರು. ದೂರದರ್ಶನದ ಸಿಬ್ಬಂದಿ 'ಸಾರ್ ನೀವ್ ಚೆನ್ನಾಗಿ ಕಾಣ್‌ಬೇಕು. ಇದು ಷೋಕಿ ಅಲ್ಲಾ ಸಾರ್. ಮಾಧ್ಯಮದ ಆವಶ್ಯಕತೆ' ಎಂಬ ವಾದವನ್ನು ಮುಂದಿಟ್ಟರು. ಆಗ ಎಚ್ಚೆನ್ 'ಈ ನನ್ನ ಬಣ್ಣ, ಈ ನನ್ನ ಖಾದಿ ನನ್ನ ಟ್ರೇಡ್ ಮಾರ್ಕ್' ಎಂದು ವಾದಿಸಿದರು. 'ನೀವ್ ಏನೇ ಮಾಡಿದ್ರೂ ಇದ್ದದ್ದು ಹೋಗಲ್ಲ ಇಲ್ಲದ್ದು ಬರಲ್ಲ' ಎಂದರು. ಸಿಬ್ಬಂದಿ ಇವರ ಮನಃಪರಿವರ್ತನೆಗೆ ಪ್ರಯತ್ನಿಸುತ್ತಲೇ ಇದ್ದರು. ಎಚ್ಚೆನ್ ಅವರ ಮನದಾಳದಲ್ಲೂ ದೂರದರ್ಶನದಲ್ಲಿ ಕಾಣಿಸಿಕೊಳ್ಳುವ ಸಣ್ಣ ಬಯಕೆಯೂ ಇದ್ದಂತೆ ಭಾಸವಾಯಿತು. ಕೊನೆಗೆ ಕ್ಯಾಮರಾ ಹಿಡಿದಿದ್ದ ವ್ಯಕ್ತಿಯೇ ಮುಂದೆ ಬಂದು, ಬಿಳಿ ಬಣ್ಣದ ಬಟ್ಟೆ ಹೊಂದಿಕೊಳ್ಳುವುದಿಲ್ಲ ಬಣ್ಣದ ಬಟ್ಟೆ ಹಾಕಿಕೊಂಡರೆ ಒಳ್ಳೆಯದು, ಜೊತೆಗೆ ವೀಕ್ಷಕರ ದೃಷ್ಟಿಯಿಂದ ಈ ಬದಲಾವಣೆ ಅಗತ್ಯ ಎಂಬ ವಾದವನ್ನು ಮಂಡಿಸಿದನು. ಹಾಗೂ ಹೀಗೂ ಗೆಳೆಯ ಮೋಹನ್‌ರಾಮ್ ಮತ್ತು ದೂರದರ್ಶನದ ಸಿಬ್ಬಂದಿ ನಿಧಾನವಾಗಿ ಎಚ್ಚೆನ್ ಅವರನ್ನು ಹದಗೊಳಿಸಿದರು. ತಮ್ಮ ತರ್ಕಕ್ಕೆ ತಕ್ಕಂತೆ ಒಪ್ಪಿಸಿದರು. ಎಚ್ಚೆನ್ ಬಿಳಿಜುಬ್ಬ ತೆಗೆದು ಕಂದು ಬಣ್ಣದ ಜುಬ್ಬ ಹಾಕಿಕೊಂಡರು. ಅನಂತರದ ಸರದಿ ಗಾಂಧಿ ಟೋಪಿಯದು. 'ಬಿಳಿಯ ಟೋಪಿಯೇ ಇರಲಿ' ಎಂದು ಎಚ್ಚೆನ್. ಬಣ್ಣದ ಟೋಪಿ ಬೇಕೆಂದು ಸಿಬ್ಬಂದಿ ಪಟ್ಟುಹಿಡಿಯಿತು. ಮತ್ತೆ ಸಂಧಾನ ಪ್ರಾರಂಭವಾಯಿತು. ಈಗ ಹಾಕಿಕೊಂಡಿರುವ ಕಂದು ಬಣ್ಣದ ಜುಬ್ಬಕ್ಕೂ, ಬಿಳಿ ಗಾಂಧಿ ಟೋಪಿಗೂ ಹೊಂದಿಕೆಯಾಗುವುದಿಲ್ಲ ಎಂಬ ವಾದವನ್ನು ಮುಂದಿಟ್ಟು, ಅದನ್ನೂ ಬದಲಾಯಿಸುವಂತೆ ಮನವೊಲಿಸಲಾಯಿತು. ತಲೆಯ ಮೇಲೆ ಬೂದು ಬಣ್ಣದ ಟೋಪಿ ಹಾಜರಾಯಿತು.

ಎಚ್ಚೆನ್ ಕಂದು ಬಣ್ಣದ ಜುಬ್ಬ, ಬೂದು ಬಣ್ಣದ ಟೋಪಿ ಹಾಕಿಕೊಂಡಿರುವುದನ್ನು ನೋಡಿ ನಮಗೆ ಒಳ ಒಳಗೇ ನಗು. ತಮ್ಮ ದಿರಿಸನ್ನು ಕನ್ನಡಿಯಲ್ಲಿ ನೋಡಿಕೊಂಡಾಗ ಎಚ್ಚೆನ್ ಅವರ ಮುಖದಲ್ಲಿ ಒಂದು ರೀತಿಯ ಸಂಕೋಚದ ನಗು. ಮತ್ತೆ ಶುರುವಾಯಿತು ಮೇಕಪ್ ವ್ಯಕ್ತಿಯ ಕಾಟ. ಎಚ್ಚೆನ್ ಮುಖದ ಮೇಲೆ ಪೌಡರ್ ಹಾಕಲು ಆ ವ್ಯಕ್ತಿ ಮುಂದಾದ. ಅವರು ಮುಖವನ್ನು ಹಿಂದಕ್ಕೆ ಸರಿಸಿ 'ಇದೆಲ್ಲಾ ಏಕಪ್ಪಾ, ನನ್ನ ಮುಖಕ್ಕೆ ಸುಣ್ಣ ಹೊಡೆದರೂ ರಿಪೇರಿ ಆಗೊಲ್ಲ' ಎಂದರು. 'ಹೆಚ್ಚೇನು ಮಾಡಲ್ಲ ಸಾರ್. ಸ್ವಲ್ಪ 'ಟಚ್' ಮಾಡ್ತೇನೆ' ಎಂದು ಬಲವಂತವಾಗಿ ಪೌಡರ್ ಹಚ್ಚಿ, ತುಟಿಗಳಿಗೆ ರಂಗುತುಂಬಿ ಸಂದರ್ಶನಕ್ಕೆ ಸಿದ್ಧ ಮಾಡಿದನು. ಹೊಸವೇಷದಲ್ಲಿ ಎಚ್ಚೆನ್ ಮತ್ತೊಮ್ಮೆ ಕನ್ನಡಿಯಲ್ಲಿ ನೋಡಿಕೊಂಡರು. ಅವರಿಗೂ ನಗು, ನಮಗೂ ನಗು. 'ನನ್ನ ಬಣ್ಣ ಬದಲಾಯಿಸಿಬಿಟ್ರಿ' ಎಂದು ಸಂದರ್ಶನಕ್ಕೆ ಸಿದ್ಧರಾದರು. ಅಲ್ಲಿ ಪಠ್ಯಕ್ರಮದ ಬಗ್ಗೆ ವಿದ್ಯಾರ್ಥಿಗಳ ಅಶಿಸ್ತಿನ ಬಗ್ಗೆ ಕನ್ನಡ ಮಾಧ್ಯಮದ ಬಗ್ಗೆ ವೈಜ್ಞಾನಿಕ ಮನೋಧರ್ಮದ ಬಗ್ಗೆ ತಮ್ಮ ವಿಚಾರಲಹರಿಯನ್ನು ಹರಿಸಿದರು. ಈ ಪ್ರಸಂಗವನ್ನು ಮತ್ತೆ ಮತ್ತೆ ಜ್ಞಾಪಿಸಿಕೊಂಡು ನಾವು ನಕ್ಕಿದ್ದೇವೆ.

ಹಳ್ಳಿಯ ಈ ಸರಳ ವ್ಯಕ್ತಿ ಎಚ್ಚೆನ್, ನಗರದ ಜನರ ಮಧ್ಯದಲ್ಲಿ, ಉನ್ನತ ವರ್ಗದವರ ಒಡನಾಟದಲ್ಲಿ ಬದುಕಬೇಕಾಗಿ ಬಂದಾಗ ಕೆಲವು ಹೊಂದಾಣಿಕೆಗಳನ್ನು ಮಾಡಿಕೊಳ್ಳಲೇಬೇಕಾಯಿತು. ಅತ್ಯಂತ ಕಠಿಣ ನಿಲುವನ್ನು ತಳೆಯಬೇಕಾದ ಸಂದರ್ಭಗಳಲ್ಲಿ ಮೃದುವಾಗಿ ಬಿಡುತ್ತಿದ್ದರು. ಎಚ್ಚೆನ್ ಅವರ ಈ ಉಭಯ ಸಂಕಟ ಸ್ಥಿತಿಯನ್ನು ಅವರ ಆತ್ಮಕಥನ 'ಹೋರಾಟದ ಹಾದಿ'ಯಲ್ಲಿ ಕಂಡುಕೊಳ್ಳಬಹುದು. ಅವರು ಸಂಕಟವನ್ನು ಅನುಭವಿಸಿ, ಎನ್.ಇ.ಎಸ್. ವಿದ್ಯಾಸಂಸ್ಥೆಗಳಿಗೆ ಒಳಿತನ್ನು ಮಾಡುವ ಕಠೋರವ್ರತವನ್ನು ಕೈಗೊಂಡಿದ್ದರು. ಆದ್ದರಿಂದ ಎಚ್ಚೆನ್ ಸುಲಭವಾಗಿ ಅರ್ಥವಾಗುವುದಿಲ್ಲ. ಅನೇಕ ಸಂದರ್ಭಗಳಲ್ಲಿ ಅವರೇ ಒಂದು ಪ್ರಶ್ನೆಯಾಗಿಬಿಡುತ್ತಿದ್ದರು. ಎಷ್ಟೋ ವೇಳೆ ಅವರ ಹತ್ತಿರವಿದ್ದವರು ದೂರ ಸರಿಯುತ್ತಿದ್ದರು, ದೂರವಿದ್ದವರು ಹತ್ತಿರವಾಗುತ್ತಿದ್ದರು. ಅವರು ಕಾಲೇಜಿನಲ್ಲಿ ಸಹಶಿಕ್ಷಣವನ್ನು ಜಾರಿಗೆ ತಂದರು, ನಾಟಕಗಳಲ್ಲಿ ಸಹ-ಅಭಿನಯಕ್ಕೆ ಅವಕಾಶವಿರಲಿಲ್ಲ; ಕ್ರೈಸ್ಟ್ ಕಾಲೇಜಿನ ಕನ್ನಡ ಸಂಘದ ಬಗ್ಗೆ ಮುಕ್ತವಾಗಿ ಹೊಗಳುತ್ತಿದ್ದವರು, ತಮ್ಮದೇ ಕಾಲೇಜಿನಲ್ಲಿ ಪ್ರಕಾಶನ ಪ್ರಾರಂಭಿಸಲಿಲ್ಲ; ಪ್ರಗತಿಪರ ಚಿಂತನೆಗಳನ್ನು ಎತ್ತಿ ಹಿಡಿಯುತ್ತಿದ್ದರೂ ಬೀದಿಗಿಳಿಯುತ್ತಿರಲಿಲ್ಲ. ಅನೇಕ ಸಂದರ್ಭಗಳಲ್ಲಿ ಅವರ ಜೋಕ್ಸ್ ಮತ್ತು ತುಂಬುನಗೆಗಳನ್ನು ಅವರ ಒಂಟಿತನವನ್ನು ಮರೆಮಾಚಲು, ಹಾಗೇ ಬೇಡದವರು ಬಂದಾಗ ತಪ್ಪಿಸಿಕೊಳ್ಳಲು ಮುಖವಾಡವಾಗಿ ಬಳಸುತ್ತಿದ್ದರು. ಎಚ್ಚೆನ್ ಅವರನ್ನು ಬಸವಣ್ಣನ ಬದುಕು, ಅಂಬೇಡ್ಕರ್ ಅಂತಃಕರಣ, ರಾಮಕೃಷ್ಣ ಆಶ್ರಮದ ನಿಲುವು ಮತ್ತು ಗಾಂಧೀಜಿಯವರ ಜೀವನಶೈಲಿ ರೂಪಿಸಿತ್ತು. ಬದುಕಿನಲ್ಲೇ ದಂತಕಥೆಯಾಗಿದ್ದ ಎಚ್ಚೆನ್ ಈಗ ನಮ್ಮ ಜೊತೆಗಿಲ್ಲ. ಸರಳತೆ, ಸತ್ಯ, ಪ್ರಾಮಾಣಿಕತೆಯನ್ನುಳ್ಳ ವ್ಯಕ್ತಿಗಳಲ್ಲಿ ಕೆಲವು ಸಲ ಅಹಂಕಾರ ಮೊಳೆಯುತ್ತದೆ. ನಾನೇ ಸತ್ಯಸಂಧನೆಂದೂ ಬೀಗುತ್ತಾರೆ. ಅದರಲ್ಲೇ ತೃಪ್ತಿ ಪಟ್ಟುಕೊಳ್ಳುತ್ತಾರೆ. ಆದರೆ ಎಚ್ಚೆನ್ ಅಹಂಕಾರದಿಂದ ಬೀಗಿದವರಲ್ಲ. ಪ್ರೀತಿ-ವಾತ್ಸಲ್ಯಗಳನ್ನು ನೀಡಿದವರು. ನಾವು ಕೆಲವರ ಜೊತೆಯೊಳಗಿದ್ದರೆ ಕೀಳರಿಮೆ, ನಿರಾಶೆ, ಬೇಸರದಿಂದ ನರಳುತ್ತೇವೆ. ಇನ್ನೂ ಕೆಲವರ ಜೊತೆಗಿದ್ದರೆ ಆತ್ಮವಿಶ್ವಾಸದಿಂದ, ಉಲ್ಲಾಸದಿಂದ ಬದುಕಿಗೊಂದು ಅರ್ಥವನ್ನು ಕಂಡುಕೊಳ್ಳುತ್ತೇವೆ. ಎಚ್ಚೆನ್ ಎರಡನೆಯ ಗುಂಪಿಗೆ ಸೇರಿದವರು.

ಚಿ. ಶ್ರೀನಿವಾಸರಾಜು, ೨೧(೮) 'ಚಿರಂಜೀವಿ', ಹಳೇ ಈಜುಕೊಳದ ರಸ್ತೆ
ಕೋದಂಡರಾಮಪುರ, ಬೆಂಗಳೂರು-೫೬೦ ೦೦೩

ಬ್ಯಾಂಕುಗಳಂತಹ ಕೇಂದ್ರ ಸರ್ಕಾರದ ಸಂಸ್ಥೆಗಳಲ್ಲಿ ಹಿಂದಿಯನ್ನು ಕಲಿಸಲು ವಿಶೇಷ ವ್ಯವಸ್ಥೆ ಮಾಡಲಾಗಿದೆ; ಪ್ರತ್ಯೇಕ ವಿಭಾಗಗಳನ್ನು ತೆರೆಯಲಾಗಿದೆ; ಮತ್ತು ಅದನ್ನು ಕಲಿತವರಿಗೆ ವಿಶೇಷ ಮಾನ್ಯತೆ ನೀಡಲಾಗುತ್ತಿದೆ. ಈ 'ಅತಿರೇಕ' ದಿಂದಾಗಿ ಮುಂಬರುವ ದಿನಗಳಲ್ಲಿ ಹಿಂದಿಯೇತರ ಭಾಷೆಗಳನ್ನಾಡುವ ಜನರಲ್ಲಿ ತೀವ್ರ ಅಸಮಾಧಾನ ಮೂಡುವುದು ಸಹಜವೇ ಆಗಿದೆ.

# ದೇಶಕ್ಕೊಂದು ಸೂಕ್ತ ಭಾಷಾನೀತಿ

ಡಾ|| ಪಿ. ವಿ. ನಾರಾಯಣ

ಭಾರತ ಸಂವಿಧಾನದ ಪೀಠಿಕೆಯಲ್ಲಿ ಸಮಾನತೆಯ ಮಂತ್ರವಿದ್ದರೂ, ಅದರಲ್ಲಿನ ಕೆಲವು ವಿಧಿಗಳು ತಾರತಮ್ಯದ ಬೀಜಗಳನ್ನು ಬಿತ್ತಿವೆ. ಉದಾಹರಣೆಗೆ, ಸಂವಿಧಾನದ ಹದಿನೆಂಟನೆಯ ಭಾಗ; ಇದು ೩೪೩ನೇ ವಿಧಿಯಿಂದ ೩೫೧ರವರೆಗಿನ (೩೫೦ ಎ ಮತ್ತು ಬಿ ಸೇರಿ) ಹತ್ತು ವಿಧಿಗಳನ್ನು ಒಳಗೊಂಡಿದೆ. ಇಲ್ಲಿನ ಹಲವು ವಿಧಿಗಳು ಭಾರತದ ಭಾಷೆಗಳಲ್ಲಿ ತಾರತಮ್ಯವನ್ನು ಮಾಡಿ ವಿವಿಧ ಭಾಷಿಕ ವಲಯಗಳಲ್ಲಿ ಅಸಮಾಧಾನವನ್ನು ಉಂಟು ಮಾಡುವಂತಹವು. ಭಾಷಾವಾರು ಪ್ರಾಂತಗಳ ರಚನೆಗೆ ಮುಂಚೆ ಪ್ರಸ್ತುತವೆನಿಸಿದ್ದ ಕೆಲವು ವಿಧಿಗಳನ್ನು ಭಾಷೆಗಳ ಆಧಾರದ ಮೇಲೆ ಪ್ರಾಂತಗಳ ಪುನರ್ವಿಂಗಡಣೆಯಾದ ಮೇಲೂ ಉಳಿಸಿಕೊಂಡಿರುವುದು ಅಪ್ರಸ್ತುತವಾಗಿದೆ. ಈಗಿನ ಸಂದರ್ಭಕ್ಕೆ ಅನುಗುಣವಾಗಿ ಇಡೀ ಅಧ್ಯಾಯವನ್ನೇ ಪುನಾರಚಿಸುವ, ಹೊಸ ವಿಧಿಗಳನ್ನು ಅಳವಡಿಸುವ ಆವಶ್ಯಕತೆಯಿದೆ.

೩೪೩ನೇ ವಿಧಿಯು, ''ದೇವನಾಗರಿ ಲಿಪಿಯನ್ನು ಬಳಸುವ ಹಿಂದಿಯು ಕೇಂದ್ರದ ಏಕೈಕ ಅಧಿಕೃತ ಭಾಷೆ'' ಎಂದು ಘೋಷಿಸುತ್ತದೆ. ಸಂವಿಧಾನವು ಇದನ್ನು ಸ್ವೀಕರಿಸಿದ ಹಿನ್ನೆಲೆ ಜಗಜ್ಜಾಹೀರಾದದ್ದೇ; ಇದರ ಪರ-ವಿರೋಧ ಮತಗಳು ಸಮಾನವಾಗಿ ಬಂದಾಗ, ಅಧ್ಯಕ್ಷರಾಗಿದ್ದ ರಾಜೇಂದ್ರ ಪ್ರಸಾದರ ಮತದಿಂದಾಗಿ ಇದು ಸ್ವೀಕೃತವಾಯಿತು. ಇದು ವಿಧಿ ಸ್ವೀಕಾರದ ತಾಂತ್ರಿಕ ಅಂಶವಾಯಿತು. ಹಿಂದೆಂದೂ ಒಂದು ಘಟಕವಾಗಿರದಿದ್ದ, ವಿವಿಧ ಭಾಷೆಗಳ ಪ್ರದೇಶಗಳು ಹೊಸತಾಗಿ ಸೇರಿ ಆದ ಭಾರತದ ಒಕ್ಕೂಟ ರಚನೆಯಲ್ಲಿ ಒಂದೇ ಭಾಷೆಗೆ ಹೆಚ್ಚಿನ ಮಹತ್ವ ನೀಡಿದರೆ, ಅದನ್ನಾಡುವ ಜನರಿಗೆ ವಿಶೇಷ ಮಾನ್ಯತೆ ನೀಡಿದಂತಾಗುವುದೆಂಬ ಕಲ್ಪನೆ ಸಂವಿಧಾನ ರಚಕರಿಗೆ ಬಾರದಿದ್ದುದು ವಿಷಾದಕರ. ಹಿಂದಿಯು ಒಂದು ಭಾಷೆಯೆಂದು ಹಿಂದೆಂದೂ ಪರಿಗಣಿತವಾಗಿರಲಿಲ್ಲ; ಭೋಜ್‌ಪುರಿ, ಖಡೀಬೋಲಿ, ಬ್ರಜ್‌ಭಾಷಾ, ಅವಧ್, ಕನೌಜೀ, ಮೈಥಿಲೀ ಮುಂತಾದ ಹತ್ತಾರು ಭಾಷೆಗಳನ್ನು ಹಿಂದಿ ಎಂದು ಕರೆದಿರುವುದು ಇತ್ತೀಚೆಗೆ. ರಾಜಾಸ್ತಾನೀ, ಮೈಥಿಲಿ ಮುಂತಾದ ಭಾಷೆಗಳನ್ನು ಪ್ರತ್ಯೇಕ ಸಾಹಿತ್ಯವಿರುವ ಭಾಷೆಗಳೆಂದು ಕೇಂದ್ರ ಸಾಹಿತ್ಯ ಅಕಾಡೆಮಿಯು ಮಾನ್ಯ ಮಾಡಿದೆ. ಆದರೆ ಅವುಗಳನ್ನೂ ಹಿಂದಿ ಎಂದೇ ವ್ಯವಹರಿಸಲಾಗುತ್ತಿದೆ. ಇದು ದ್ವಂದ್ವನೀತಿಯಲ್ಲವೇ ? ಒಟ್ಟಾರೆ ಈ ಭಾಷೆಗಳನ್ನಾಡುವ ಜನರು ದೇಶದಲ್ಲಿ ಅತ್ಯಧಿಕ ಗುಂಪು ಎಂದು ಪರಿಗಣಿಸಿ ಹಿಂದಿಗೆ ಸಲ್ಲದ ಮಾನ್ಯತೆ ನೀಡಲಾಗಿದೆ. ಅಲ್ಲದೆ, ಸಂವಿಧಾನದಲ್ಲಿ ಎಲ್ಲೂ ಹಾಗೆಂದು ಕರೆಯದಿದ್ದರೂ, ಅದನ್ನು ರಾಷ್ಟ್ರಭಾಷೆಯೆಂದು ಬಿಂಬಿಸುತ್ತ ಅದರ ಬಗ್ಗೆ ಜನರಲ್ಲಿ ಭಾವನಾತ್ಮಕ ಹಿರಿಮೆಯನ್ನು ಬಿತ್ತಲು ಹುನ್ನಾರಗಳು ನಡೆಯುತ್ತ ಬಂದಿವೆ.

ಗಾಯದ ಮೇಲೆ ಉಪ್ಪು ಸವರಿದಂತೆ, ಹಿಂದಿಯು ಒಳಗೊಳ್ಳುವ ಎಲ್ಲ ಭಾಷೆಗಳಿಗಿಂತ ಪ್ರಾಚೀನವೂ, ಶ್ರೀಮಂತವೂ, ಸಾವಿರಾರು ವರ್ಷಗಳಿಂದ ಆಯಾ ಜನರ ಎಲ್ಲ ಅಭಿವ್ಯಕ್ತಿಗಳಿಗೆ ಮಾಧ್ಯಮವೂ ಆದ ಕನ್ನಡ, ತಮಿಳಿನಂತಹ ಭಾಷೆಗಳನ್ನು ಇದೇ ಭಾಗದ ಎರಡನೇ ಅಧ್ಯಾಯದಲ್ಲಿನ ೩೪೫ನೇ ವಿಧಿಯಲ್ಲಿ ''ಪ್ರಾದೇಶಿಕ ಭಾಷೆ''ಗಳೆಂದು ಕರೆಯಲಾಗಿದೆ. ಹೀಗಾಗಿ 'ಹಿಂದಿ' ಮಾತನಾಡುವವನು 'ರಾಷ್ಟ್ರಮಟ್ಟದ ವ್ಯಕ್ತಿ', ಇತರ ಭಾಷೆಗಳನ್ನಾಡುವವನು 'ಪ್ರಾದೇಶಿಕ ವ್ಯಕ್ತಿ' ಎಂದು ಬಿಂಬಿಸಲಾಗುತ್ತಿದೆ. ಇದರಿಂದಾಗಿ ಹಿಂದಿಯಾಡುವ ಸಾಮಾನ್ಯ ರಾಜಕಾರಣಿಯು ರಾಷ್ಟ್ರನಾಯಕನೆನ್ನಿಸಿಕೊಳ್ಳುವ ವೈಪರೀತ್ಯವನ್ನು ನಾವು ಕಾಣುತ್ತಲೇ ಇದ್ದೇವೆ. ಹಿಂದಿಯವನು ಎಲ್ಲಿ ಹೋದರೂ ಇತರರು ತನ್ನೊಡನೆ ಹಿಂದಿಯಲ್ಲಿ ವ್ಯವಹರಿಸಬೇಕೆಂದು ಅವನು ನಿರೀಕ್ಷಿಸುತ್ತಾನೆ. ಏಕೆಂದರೆ ಅದು ರಾಷ್ಟ್ರ ಭಾಷೆ !

ಈ ಭಾಗದ ನಾಲ್ಕನೆಯ ಅಧ್ಯಾಯದಲ್ಲಿನ ೩೫೧ನೇ ವಿಧಿಯು ''ಹಿಂದಿಯನ್ನು ಉತ್ತೇಜಿಸುವುದು ಕೇಂದ್ರದ ಕರ್ತವ್ಯ'' ಎಂದು ಆದೇಶಿಸುತ್ತದೆ. ಅದಕ್ಕನುಗುಣವಾಗಿ ಕೇಂದ್ರ ಸರ್ಕಾರವು ಇತರ ಎಲ್ಲ ಭಾಷೆಗಳನ್ನು ಅವಗಣಿಸಿ ಹಿಂದಿಯ ಪ್ರಚಾರಕ್ಕೆಂದು ಪ್ರತಿವರ್ಷ ಸಾವಿರಾರು ಕೋಟಿ ರೂಪಾಯಿಗಳನ್ನು ವ್ಯಯಿಸುತ್ತಿದೆ. ಹಿಂದಿಯನ್ನು ಕಲಿಯುವುದು ರಾಷ್ಟ್ರಭಕ್ತಿಯ ಸೂಚಕವೆಂದು ಭಾವಿಸಿ ಕರ್ನಾಟಕವೂ ಸೇರಿದಂತೆ ಬಹು ಸಂಖ್ಯೆಯ ರಾಜ್ಯಗಳು ತ್ರಿಭಾಷಾಸೂತ್ರದ ಹೆಸರಿನಲ್ಲಿ ಹಿಂದಿಯನ್ನು ''ನೀರಿಳಿಯದ ಗಂಟಲೊಳ್ ಕಡುಬ''ನ್ನು ತುರುಕಿದಂತೆ ನಮ್ಮ ವಿದ್ಯಾರ್ಥಿಗಳಿಗೆ ಉಣಿಸುತ್ತಿವೆ. ಬ್ಯಾಂಕುಗಳಂತಹ ಕೇಂದ್ರ ಸರ್ಕಾರದ ಸಂಸ್ಥೆಗಳಲ್ಲಿ ಹಿಂದಿಯನ್ನು ಕಲಿಸಲು ವಿಶೇಷ ವ್ಯವಸ್ಥೆ ಮಾಡಲಾಗಿದೆ; ಪ್ರತ್ಯೇಕ ವಿಭಾಗಗಳನ್ನು ತೆರೆಯಲಾಗಿದೆ; ಮತ್ತು ಅದನ್ನು ಕಲಿತವರಿಗೆ ವಿಶೇಷ ಮಾನ್ಯತೆ ನೀಡಲಾಗುತ್ತಿದೆ. ಈ 'ಅತಿರೇಕ' ದಿಂದಾಗಿ ಮುಂಬರುವ ದಿನಗಳಲ್ಲಿ ಹಿಂದಿಯೇತರ ಭಾಷೆಗಳನ್ನಾಡುವ ಜನರಲ್ಲಿ ತೀವ್ರ ಅಸಮಾಧಾನ ಮೂಡುವುದು ಸಹಜವೇ ಆಗಿದೆ. ವಿಘಟನೆಗೆ ಮುಂಚಿನ ಸೋವಿಯತ್ ಒಕ್ಕೂಟದಲ್ಲಿಯೂ ರಷ್ಯನ್ ಭಾಷೆಯ ಹೇರಿಕೆಯ ವಿರುದ್ಧ ಪ್ರತಿಭಟನೆಗಳು ನಡೆದಿದ್ದವು. ಇಲ್ಲಿಯೂ ಹಿಂದಿ ವಿರುದ್ಧದ ಮನೋಭಾವ ಪುನರವತಾರಗೊಳ್ಳುವುದರಲ್ಲಿ ಸಂಶಯವಿಲ್ಲ.

ಸಮಾನತೆಯನ್ನು ಕಾಪಾಡಿಕೊಳ್ಳುವ ಪರಿಣಾಮಕಾರಿ ಮಾರ್ಗವೆಂದರೆ ಕೇಂದ್ರದಲ್ಲಿ ಎಲ್ಲ ರಾಜ್ಯಭಾಷೆಗಳನ್ನು ಅಧಿಕೃತ ಭಾಷೆಗಳೆಂದು ಮಾನ್ಯ ಮಾಡುವುದು. ಮೊದಲ ಬಾರಿಗೆ ಬಿಜೆಪಿ ಜೊತೆಗೂಡಿದಾಗ ಎಐಎಡಿಎಂಕೆ ನಾಯಕಿ ಶ್ರೀಮತಿ ಜಯಲಲಿತಾ ಅವರು ಇಂತಹ ಸಲಹೆಯನ್ನು ಮುಂದಿಟ್ಟಿದ್ದು, ಬಿಜೆಪಿ ಅದಕ್ಕೆ ಸಮ್ಮತಿಸಿತ್ತು. ಮುಂದೆ ಆ ಮೈತ್ರಿ ಒಡೆದು ಆ ಸಲಹೆ ಹಿಂದೆ ಸರಿಯಿತು. ನಮ್ಮ ಸಂಸತ್ತಿನಲ್ಲಿ ಸದಸ್ಯರು ತಮ್ಮ ತಮ್ಮ ಮಾತೃಭಾಷೆಯಲ್ಲಿಯೇ ಮಾತನಾಡುವ ಅವಕಾಶವಿರಬೇಕು. ವಿಶ್ವಸಂಸ್ಥೆಯಲ್ಲಿಯೂ, ಯುರೋಪಿಯನ್ ಒಕ್ಕೂಟದ ಪಾರ್ಲಿಮೆಂಟಿನಲ್ಲಿಯೂ ಅನುಷ್ಠಾನದಲ್ಲಿರುವ ಈ ನೀತಿಯನ್ನು ಇಲ್ಲಿ ಅಳವಡಿಸುವುದು ಕಷ್ಟವೇನಲ್ಲ; ಒಂದು ಭಾಷೆಯ ಮಾತುಗಳನ್ನು ಸಮಾನಾಂತರವಾಗಿ ಯಾಂತ್ರಿಕ ಭಾಷಾಂತರ ಮಾಡುವ ಸಾಫ್ಟ್‌ವೇರ್‌ಗಳಿಂದ ಇದನ್ನು ಆಗ ಮಾಡಬಹುದು. ಕೇಂದ್ರ ಸರ್ಕಾರದ ಕಚೇರಿಗಳಲ್ಲಿಯೂ ಈ ನೀತಿಯನ್ನು ಅಳವಡಿಸಿಕೊಳ್ಳುವುದರ ಮೂಲಕ ವಿವಿಧ ರಾಜ್ಯಗಳಲ್ಲಿನ ಜನ ತಮ್ಮ ಭಾಷೆಯಲ್ಲಿಯೇ ವ್ಯವಹಾರ ಮಾಡುವ ಅವಕಾಶ ಕಲ್ಪಿಸಬಹುದು. ಪ್ರಜಾಪ್ರಭುತ್ವದ ಮೂಲ ಉದ್ದೇಶವೇ ಇದಲ್ಲವೇ ?

ರಾಜ್ಯಗಳ ಮಟ್ಟದಲ್ಲಿ ಎಲ್ಲರೂ, ತಮಿಳುನಾಡು ಅನುಸರಿಸುತ್ತಿರುವ, 'ದ್ವಿಭಾಷಾನೀತಿ'ಯನ್ನು ಅಳವಡಿಸಿಕೊಳ್ಳಬೇಕು. ಹಿಂದಿಯನ್ನು ಬಲವಂತವಾಗಿ ಕಲಿಯಬೇಕಾಗದೇ ಇರುವ ತಮಿಳು ಜನರನ್ನು ರಾಷ್ಟ್ರಭಕ್ತಿಯಲ್ಲಿ ಎರಡನೇ ದರ್ಜೆಯವರು ಎಂದು ಹೇಳಲಾದೀತೇನು ? ಸಾಕ್ಷರತೆಗೆ ಒಂದು ಭಾಷೆ ಆವಶ್ಯಕವಾದುದರಿಂದ, ಆಯಾ ರಾಜ್ಯಭಾಷೆಯನ್ನು ಕಡ್ಡಾಯವಾಗಿ ಕಲಿಸಬೇಕು; ಜೊತೆಗೆ, ವಿದ್ಯಾರ್ಥಿಗೆ ಬೇಕಾದ ಮತ್ತೊಂದು ಭಾಷೆಯನ್ನು ಕಲಿಯುವ ಅವಕಾಶ ಕಲ್ಪಿಸಬೇಕು. ಕುವೆಂಪು ಅವರು ಪ್ರತಿಪಾದಿಸುತ್ತಿದ್ದ ''ಬಹುಭಾಷೆಗಳಲ್ಲಿ ದ್ವಿಭಾಷೆ'' ಎಂಬ ನೀತಿ ಇದೇ. ವ್ಯಕ್ತಿಯೊಬ್ಬ ಬೇರೆಡೆ ಹೋದರೆ, ಬದುಕಲು ಆವಶ್ಯಕವಾದ ಅಲ್ಲಿನ ಪರಿಸರ ಭಾಷೆಯನ್ನು ತಾನಾಗಿ ಕಲಿಯುತ್ತಾನೆ. 'ಹಿಂದಿ' ವಲಯಕ್ಕೆ ಹೋದರೆ ಅದನ್ನು ಕಲಿಯುತ್ತಾನೆ; ಆದರೆ ರಾಷ್ಟ್ರಭಾಷೆಯ ಹೆಸರಿನಲ್ಲಿ ಅದನ್ನು ಕಡ್ಡಾಯ ಮಾಡುವುದು ಕ್ರೂರತನ. ತ್ರಿಭಾಷಾ

ಸೂತ್ರವನ್ನು ಅನುಸರಿಸುವ ರಾಜ್ಯಗಳಲ್ಲಿ ಮಕ್ಕಳು ಮೂರು ಭಾಷೆಗಳನ್ನು ಕಡ್ಡಾಯವಾಗಿ ಕಲಿಯಬೇಕಾದ ದೌರ್ಜನ್ಯಕ್ಕೆ ಒಳಗಾಗಿ, 'ಹಿಂದಿ' ರಾಜ್ಯಗಳವರು ಈ ವಿಷಯದಲ್ಲಿ ಹೆಚ್ಚು ಅನುಕೂಲ ಪಡೆದಿರುವ ಸನ್ನಿವೇಶವು ಅಸಮಾನತೆಗೆ ಅವಕಾಶವಿತ್ತಿದೆ. ಸಮಾನತೆ ಎಂದರೆ ಸಮಾನ ಅನುಕೂಲ ಅನನುಕೂಲಗಳೇ ಅಲ್ಲವೇ ?

ಈ ಭಾಗದ ೩೫೦ ಬಿ ವಿಧಿಯು ಭಾಷಾ ಅಲ್ಪಸಂಖ್ಯಾತರನ್ನು ಕುರಿತು ಮಾತನಾಡುತ್ತದೆ. ಭಾಷಾವಾರು ಪ್ರಾಂತಗಳ ರಚನೆಗೆ ಮುಂಚೆ ರಾಜ್ಯದ ಭಾಷೆಯನ್ನಾಡದ ಇತರ ಭಾಷಿಕರು ಸಾಕಷ್ಟು ಸಂಖ್ಯೆಯಲ್ಲಿರುತ್ತಿದ್ದರು. ಅದಕ್ಕೆ ಕಾರಣ ಬ್ರಿಟಿಷರು ಆಕ್ರಮಿಸಿಕೊಂಡಂತೆಲ್ಲ ರಚಿತವಾದ ಹೊಸ ರಾಜ್ಯಗಳು. ಹಾಗಾಗಿ ಆಗ ಭಾಷಾ 'ಅಲ್ಪಸಂಖ್ಯಾತ' ವರ್ಗದ ಪರಿಕಲ್ಪನೆಗೆ ಅವಕಾಶವಿತ್ತು. ಭಾಷೆಗಳ ಆಧಾರದ ಮೇಲೆಯೆ ರಾಜ್ಯಗಳ ವಿಂಗಡಣೆಯಾಗಿರುವುದರಿಂದ ಅಲ್ಲಿ ವಾಸಿಸುವವರೆಲ್ಲ ಆಯಾ ರಾಜ್ಯದ ಭಾಷಿಕರು ಎಂದೇ ಪರಿಗಣಿತರಾಗಬೇಕು. ಉದಾಹರಣೆಗೆ, ಕರ್ನಾಟಕದಲ್ಲಿರುವವರೆಲ್ಲ ಕನ್ನಡಿಗರೇ; ಅವರಲ್ಲಿ ಕೆಲವರ ಮನೆಮಾತು ಬೇರೆಯಾಗಿರಬಹುದು. ಜೀವನೋಪಾಯಕ್ಕಾಗಿ ಇತರ ಕಡೆಗಳಿಂದ ಈಚೆಗೆ ವಲಸೆ ಬಂದವರನ್ನು 'ಭಾಷಾ ಅಲ್ಪಸಂಖ್ಯಾತ'ರೆಂದು ಕರೆದು, ಅವರಿಗೆ ವಿಶೇಷ ಸವಲತ್ತುಗಳನ್ನು ಒದಗಿಸುತ್ತ ಹೋದರೆ, ಅವರು ಭಾಷಿಕ ಸಹಜೀಕರಣಕ್ಕೆ ಒಳಗಾಗದೆ, ತಮ್ಮ ಹಕ್ಕು ಪ್ರತಿಪಾದನೆಯ ನೆಪದಲ್ಲಿ, ಸ್ಥಳೀಯರೊಂದಿಗೆ ಸಂಘರ್ಷಕ್ಕಿಳಿಯುವ ಸಾಧ್ಯತೆಗಳು ಹೆಚ್ಚು.

ಇನ್ನು ಶಾಸ್ತ್ರೀಯ ಭಾಷೆಯ ಬಗ್ಗೆ. ಈ ಪರಿಕಲ್ಪನೆಯು ಹಿಂದೆ ಇರದಿದ್ದರೂ ತಮಿಳಿನವರ ಪ್ರಾಚೀನತೆಯ ಗೀಳಿನ ಕಾರಣದಿಂದ ಇತ್ತೀಚೆಗೆ ಕೇಂದ್ರ ಸರ್ಕಾರ ತಮಿಳನ್ನು 'ಶಾಸ್ತ್ರೀಯ ಭಾಷೆ' ಎಂದು ಘೋಷಿಸಿದೆ. ಚುನಾವಣಾಪೂರ್ವದಲ್ಲಿ ಡಿಎಂಕೆ ಮತ್ತು ಕಾಂಗ್ರೆಸ್ ಪಕ್ಷಗಳ ನಡುವಣ ಒಪ್ಪಂದದಲ್ಲಿ ಈ ಅಂಶವಿದ್ದುದರಿಂದ ಅದನ್ನು ಜಾರಿಗೊಳಿಸಲೋಸುಗ ಕೇಂದ್ರ ಸರ್ಕಾರವು ಸಾಹಿತ್ಯ ಅಕಾಡೆಮಿಗೆ ಸೂಚಿಸಿ ಈ ಸ್ಥಾನಮಾನ ನೀಡಲು ನಿಯಮಗಳನ್ನು ರೂಪಿಸಲು ಕೇಳಿತು. ಆ ಪರಿಕಲ್ಪನೆಯೇ ಇಲ್ಲದಿದ್ದ ಕಾರಣ, ಅಕಾಡೆಮಿಯು ತಮಿಳಿಗೆ ಆ ಸ್ಥಾನ ಸಿಕ್ಕಲು ಅನುಕೂಲಕರವಾದ ನಿಯಮಾವಳಿಯನ್ನು ಕೇಂದ್ರ ಸರ್ಕಾರದ ಒತ್ತಾಯದ ಮೇಲೆ ರೂಪಿಸಿತು. ಹೋಗಲಿ, ಆಮೇಲಾದರೂ ಕೇಂದ್ರ ಸರ್ಕಾರಕ್ಕೆ ಒಂದು ನೈತಿಕ ನಿಲುವು ಇರಬೇಡವೇ ? ತನ್ನ ಆಜ್ಞೆಯಂತೆ ಅಕಾಡೆಮಿ ರೂಪಿಸಿದ ಅರ್ಹತೆಗಳನ್ನು ಪಡೆದ ಇತರ ಭಾಷೆಗಳಿಗೂ ಆ ಸ್ಥಾನವನ್ನು ನೀಡಬೇಡವೇ ? ಪರೀಕ್ಷೆಯಲ್ಲಿ ತೇರ್ಗಡೆಯಾಗಲು ಶೇಕಡ ೩೫ ಅಂಕ ಪಡೆಯಬೇಕೆಂದು ನಿಯಮ ಮಾಡಿದ ಮೇಲೆ, ಅಷ್ಟು ಅಂಕವನ್ನು ಪಡೆದವರನ್ನೆಲ್ಲ ತೇರ್ಗಡೆಯಾದವರೆಂದು ಘೋಷಿಸಬೇಡವೇ ? ಅಕಾಡೆಮಿಯು ನಿಗದಿಪಡಿಸಿದ ಅರ್ಹತೆ ಇರುವ ಕನ್ನಡ ಮತ್ತು ಸಂಸ್ಕೃತಗಳನ್ನು ತಕ್ಷಣದಿಂದ 'ಶಾಸ್ತ್ರೀಯ ಭಾಷೆ'ಗಳೆಂದು ಘೋಷಿಸಬೇಕಾದದ್ದು ಕೇಂದ್ರ ಸರ್ಕಾರದ ಕರ್ತವ್ಯ.

ಅಂದರೆ ಇಲ್ಲಿ ಕೆಲಸ ಮಾಡಿರುವುದು ತರ್ಕವಲ್ಲ, ರಾಜಕೀಯ ಎಂಬುದು ಸ್ಪಷ್ಟ. ಭಾಷೆಯ ರಾಜಕಾರಣ ಇಂದು ನಿನ್ನೆಯದಲ್ಲ. ಅದರಿಂದ ಆಗಿರುವ ಅನಾಹುತಗಳೂ ಕಡಿಮೆಯವಲ್ಲ. ಹೀಗಿದ್ದೂ ನಾವು ಸ್ಪಷ್ಟವೂ ಸಮಾನತೆಯ ಆಧಾರವುಳ್ಳದೂ ಆದ ಭಾಷಾ ನೀತಿಯನ್ನು ಅಳವಡಿಸಿಕೊಳ್ಳದಿದ್ದರೆ ದೇಶದಲ್ಲಿ ಅಶಾಂತಿಯ ಹೊಗೆ ಇಂದಲ್ಲ ನಾಳೆ ಭುಗಿಲೇಳುತ್ತದೆ. ನಮ್ಮ ರಾಜಕಾರಣಿಗಳು ದೇಶದ ಹಿತದ ಬಗ್ಗೆ ಕಿಂಚಿತ್ತಾದರೂ ದೂರದರ್ಶಿತ್ವವನ್ನು ಪ್ರದರ್ಶಿಸಬೇಕಾಗಿದೆ. ಬುದ್ಧಿಜೀವಿಗಳು ಈ ದಿಸೆಯಲ್ಲಿ ಅವರಿಗೆ ಸೂಕ್ತ ಮಾರ್ಗದರ್ಶನ ಮಾಡಬೇಕಾಗಿದೆ.

**ಡಾ|| ಪಿ. ವಿ. ನಾರಾಯಣ**
'ತಂಗಾಳಿ', ನಂ. ೩೦, ಆರ್‌ಬಿಐ ಕಾಲೋನಿ
ಜಯನಗರ ೩ನೇ ಬ್ಲಾಕ್ ಪೂರ್ವ
ಬೆಂಗಳೂರು - ೫೬೦ ೦೧೧

## ನಗರದ ಕವಿಗಳು



**ಅಂಕುರ್ ಬೆಟಗೇರಿ, ೧೧೬, ಇ. ಎ. ಟಿ. ರಸ್ತೆ, ಬಸವನಗುಡಿ, ಬೆಂಗಳೂರು -೫೬೦ ೦೦೪**

೧

ದಪ್ಪ ಚರ್ಮದ ಜಗತ್ತಿನೊಂದಿಗೆ
ಗುದ್ದಾಡುವ ಕವಿಗಳು
ನನಗೆ ಸಿಗುತ್ತಾರೆ

ಅವರು ಪಾರ್ಕುಗಳಲ್ಲಿ ಒಬ್ಬರೇ ಕುಳಿತು
ನಡುಗುತ್ತಾರೆ
ಅಥವಾ ಒಂದೇ ಎಲೆಯನ್ನು
ಆಳವಾಗಿ ನಿಟ್ಟಿಸುತ್ತಾರೆ

ಸುಸ್ತಾದಂತೆ ಕಾಲೆಳೆದುಕೊಂಡು ನಡೆಯುತ್ತಾರೆ
ಸಿಟ್ಟಾಗಿ, ಸಿಗರೇಟು ಹಚ್ಚಿ
ಆಕಾಶದಲ್ಲಿ ಕೆಂಪು ಛಿದ್ರಕ್ಕಾಗಿ ಕಾಯುತ್ತಾರೆ

ಅವರ ಮಾತು ಒಂಟಿ ಎಲೆಗಳಂತೆ
ಬೀಳುತ್ತವೆ ಹುಲ್ಲ ಮೇಲೆ

೨

ದಪ್ಪ ಚರ್ಮದ ಜಗತ್ತಿನೊಂದಿಗೆ
ಗುದ್ದಾಡುತ್ತಲೇ
ಅವರು ಚೌಕದ ಮಧ್ಯೆ
ಕಲ್ಲಿನ ಮೂರ್ತಿಯಾಗಿಬಿಡುತ್ತಾರೆ

ಕ್ಷಿತಿಜದ ಪಕ್ಷಿಗಳು
ಹಾಗೂ ಕಣ್ಣು ಪಿಟುಕಿಸುವ ಬೆಳಕುಗಳನ್ನು
ನಿರಂತರವಾಗಿ ನೋಡುತ್ತಾರೆ

ಮುರಿದ ಗದ್ದಲದಲ್ಲಿ
ಮೌನದ ಕಂಪನಗಳನ್ನು ಹರಡುತ್ತಾ
ಜನರಿಗೆ ನಿಲುಕದ ಎತ್ತರದಲ್ಲಿ
ನಿಂತುಬಿಡುತ್ತಾರೆ

# ಎಕೂಷೆ ಫೆಬ್ರವರಿ ಅರಿವಿನ ವಿಸ್ತಾರ

ಸಂ: ಸುಗತ ಶ್ರೀನಿವಾಸರಾಜು
ಬೆಲೆ: ರೂ. ೩೦/- ಪುಟ: ೭೦

ಸಂಚಯ ಪ್ರಕಾಶನ
100, 2ನೇ ಮುಖ್ಯರಸ್ತೆ
6ನೇ ಬ್ಲಾಕ್, 3ನೇ ಘಟ್ಟ, 3ನೇ ಹಂತ
ಬನಶಂಕರಿ, ಬೆಂಗಳೂರು - 560 085

**ಫೆ**ಬ್ರವರಿ ೨೧ರಂದು 'ಲೋಕ ತಾಯ್ನುಡಿ ದಿನ'ವನ್ನು ಕರ್ನಾಟಕದಲ್ಲಿ ಆಚರಿಸುವ ಸಂಪ್ರದಾಯವಿಲ್ಲ. ನಾವು ರಾಜ್ಯೋತ್ಸವವನ್ನು ಮಾತ್ರ ಸಂಭ್ರಮದಿಂದ ಆಚರಿಸುತ್ತೇವೆ. 'ಲೋಕ ತಾಯ್ನುಡಿಯ ದಿನ'ದ ಬಗ್ಗೆ ನಮ್ಮ ಜನಕ್ಕೆ ಅಷ್ಟು ಅರಿವಿಲ್ಲ. ಆದರೆ, ಪ್ರೊ॥ ಬರಗೂರು ರಾಮಚಂದ್ರಪ್ಪನವರು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾಗಿದ್ದಾಗ ಒಂದು ವರ್ಷ 'ಲೋಕ ತಾಯ್ನುಡಿ ದಿನ'ದ ಆಚರಣೆಯನ್ನು ಸಾರ್ವಜನಿಕ ಶಿಕ್ಷಣ ಇಲಾಖೆಯ ಮೂಲಕ ಎಲ್ಲಾ ಶಾಲೆಗಳಲ್ಲಿ ಆಚರಿಸುವಂತೆ ಮಾಡಿದ್ದರು. ಆನಂತರ 'ಲೋಕ ತಾಯ್ನುಡಿ ದಿನ'ದ ಆಚರಣೆ ಮುಂದುವರೆಯಲಿಲ್ಲ.

ಶ್ರೀ. ಸುಗತ ಶ್ರೀನಿವಾಸರಾಜು ಅವರ ಸಂಪಾದಕತ್ವದಲ್ಲಿ ಈಗ ಕನ್ನಡ ಓದುಗರ ಕೈ ಸೇರಿರುವ 'ಎಕೂಷೆ ಫೆಬ್ರವರಿ' ಹೊತ್ತಿಗೆ ಅತ್ಯಂತ ಉಪಯುಕ್ತವಾದ ಕೃತಿ. ಈ ಹೊತ್ತಿಗೆಯಲ್ಲಿ ಬಾಂಗ್ಲಾದೇಶದಲ್ಲಿ ಬಂಗಾಳಿಯು ರಾಷ್ಟ್ರಭಾಷೆಯಾದ ಇತಿಹಾಸ, ಒಂದು ಭಾಷೆಯನ್ನು ಬೆಳೆಸುವ, ಕಟ್ಟುವ ಮನೋಧರ್ಮದ ಬಗ್ಗೆ ತಿಳುವಳಿಕೆಯನ್ನು ಹಾಗೂ ಎಚ್ಚರವನ್ನೂ ನೀಡಲಾಗಿದೆ. ಇಲ್ಲಿನ ಏಳು ಕಿರು ಅಧ್ಯಾಯ ಮತ್ತು ಎರಡು ಅನುಬಂಧಗಳಲ್ಲಿ ಸಾಕಷ್ಟು ಮಾಹಿತಿಗಳಿವೆ. ಇದಕ್ಕೆ ಡಾ॥ ಕೆ. ವಿ. ನಾರಾಯಣ ಅವರು ಹಿನ್ನುಡಿಯನ್ನು ಬರೆದಿದ್ದಾರೆ. ಇದು ಕನ್ನಡವನ್ನು ಪ್ರೀತಿಸುವವರೆಲ್ಲ ಓದಲೇಬೇಕಾದ ಹೊತ್ತಿಗೆ.

ಶ್ರೀ. ಸುಗತ ಶ್ರೀನಿವಾಸರಾಜು ಅವರು ಮುನ್ನುಡಿಯಲ್ಲಿ ''ಕನ್ನಡಕ್ಕೆ ಯಾವ ಬಗೆಯ ಆತಂಕಗಳೂ ಇಲ್ಲವೆಂದು ನಿರ್ಲಿಪ್ತತೆಯಿಂದಿರುವ ನಿರಾಳವಾದಿಗಳ ನಮ್ಮ ಭಾಷೆ ಎದುರಿಸುತ್ತಿರುವ ಸಮಸ್ಯೆಗಳನ್ನು ಕುರಿತಂತೆ ಒಂದು ಚರ್ಚೆಯನ್ನು ಈ ಪುಸ್ತಕ ಹುಟ್ಟುಹಾಕುವುದು ಎಂಬ ಆಶಾಭಾವನೆ'' ಎಂದು ಹೇಳಿದ್ದಾರೆ. ಭಾಷೆಯನ್ನು ಸೂಕ್ಷ್ಮವಾಗಿ ನೋಡುವವರಿಗೆಲ್ಲಾ ಇದು ದಿಕ್ಸೂಚಿಯಾಗಿದೆ. ಕನ್ನಡ ನಾಡಿನಲ್ಲಿ ಒಂದೆಡೆ ಕನ್ನಡದ ಬಗೆಗಿನ ಅಬ್ಬರ, ಪ್ರದರ್ಶನ, ಭಜನೆ ಹೆಚ್ಚುತ್ತಿದೆ. ಅದೇ ಸಂದರ್ಭದಲ್ಲಿ ಅದರ ಬಳಕೆ ಕುಗ್ಗುತ್ತಿದೆ. ಇಂತಹ ಅರ್ಥಹೀನ ಚಟುವಟಿಕೆಗಳ ಬಗ್ಗೆ, ಅದರ ಒಳಸುಳಿಗಳ ಬಗ್ಗೆ ಈ ಹೊತ್ತಿಗೆ ಬೆಳಕು ಚೆಲ್ಲುತ್ತದೆ. ಕನ್ನಡದ ಹೆಸರಿನಲ್ಲಿ ಕೋಟಿಕೋಟಿಗಳಷ್ಟು ಹಣ ವ್ಯಯವಾಗುತ್ತಿದ್ದರೂ ಕನ್ನಡ ಭಾಷೆಯ ಇಂದಿನ ಅವಶ್ಯಕತೆಗಳಿಗೆ ತಕ್ಕಂತೆ ಒಂದು ಮನೋಭೂಮಿಕೆಯು ಏಕೆ ಸಿದ್ಧವಾಗುತ್ತಿಲ್ಲ, ಎಂಬ ಪ್ರಶ್ನೆಯನ್ನೂ ಎತ್ತಿದ್ದಾರೆ. ನಾವೆಲ್ಲ ಗತವೈಭವದ ಭಜನೆಯಲ್ಲಿ ಮುಳುಗಿಹೋಗಿದ್ದೇವೆ. ಇದರಿಂದ ಕೆಲವರಿಗೆ ಮಾತ್ರ ಅನುಕೂಲವಾಗಿದೆ. ಈ ಹೊತ್ತಿಗೆಯಲ್ಲಿ ಕನ್ನಡದ ಸಮಸ್ಯೆಗಳು ಅನಾವರಣಗೊಂಡಿವೆ.

ಬಾಂಗ್ಲಾದೇಶೀಯರು ತಮ್ಮ ಬಂಗಾಳಿ ಭಾಷೆಯನ್ನು 'ರಾಷ್ಟ್ರಭಾಷೆ'ಯನ್ನಾಗಿ ಘೋಷಿಸಬೇಕೆಂದು ನಡೆಸಿದ ಹೋರಾಟ ಎಲ್ಲ ಮಾತೃಭಾಷಾ ಪ್ರೇಮಿಗಳಿಗೆ ಒಂದು ಮಾರ್ಗದರ್ಶಿಯಾಗಿದೆ. ಪೂರ್ವ ಪಾಕಿಸ್ತಾನವೆಂದು ಕರೆಯಲಾಗುತ್ತಿದ್ದ ಇಂದಿನ ಬಾಂಗ್ಲಾದೇಶ, ಬಂಗಾಳಿಯನ್ನು ಅಧಿಕೃತ ಭಾಷೆಯನ್ನಾಗಿ ಮಾಡುವಂತೆ ಒತ್ತಾಯಿಸಿದರೂ ಇಸ್ಲಾಮಾಬಾದ್ ಉರ್ದು ಭಾಷೆಯನ್ನು ಅಧಿಕೃತ ಭಾಷೆಯನ್ನಾಗಿ ಘೋಷಿಸಿತು. ಈ ಕುರಿತಂತೆ ಇತಿಹಾಸವನ್ನೆ ನಿರ್ಮಿಸಿದ ಬಾಂಗ್ಲಾದೇಶವು, ಪ್ರತಿ ವರ್ಷ ಫೆಬ್ರವರಿ ೨೧ರಂದು 'ಭಾಷಾಹಬ್ಬ'ವನ್ನು ಆಚರಿಸುತ್ತದೆ. ಈ ಭಾಷಾ ಹೋರಾಟದಲ್ಲಿ ಪ್ರಾಣಾರ್ಪಣೆ ಮಾಡಿದ ಐವರು ಯುವ ವಿದ್ಯಾರ್ಥಿಗಳು ಇಂದಿಗೂ ಜನರ ಮನ್ನಣೆಗೆ ಪಾತ್ರರಾಗಿದ್ದಾರೆ. ಬಂಗಾಳಿ ಭಾಷೆಗಾಗಿ ಜರುಗಿದ ಚಳುವಳಿಯಲ್ಲಿ ಅಸುನೀಗಿದ ಈ ಐವರು, ಢಾಕಾ ವಿಶ್ವವಿದ್ಯಾಲಯದಲ್ಲಿ ವಿದ್ಯಾರ್ಥಿಗಳಾಗಿದ್ದವರು. ಅಂದಿನ ಸರ್ಕಾರ, ಹೋರಾಟದಲ್ಲಿ ನಿರತರಾಗಿದ್ದ ವಿದ್ಯಾರ್ಥಿ ಸಮೂಹದ ಮೇಲೆ ಗುಂಡು ಹಾರಿಸಿದಾಗ, ಗುಂಡೇಟಿಗೆ ಬಲಿಯಾದ ಮಹಮ್ಮದ್ ಸಲಾವುದ್ದೀನ್, ಅಬ್ದುಲ್ ಜಬ್ಬಾರ್, ಅಬ್ದುಲ್ ಬರ್‌ಕತ್, ರಫಿಕುದ್ದೀನ್ ಅಹಮದ್ ಮತ್ತು ಅಬ್ದುಲ್ ಸಲಾಮ್ ಅವರ ಸ್ಮರಣಾರ್ಥ 'ಹುತಾತ್ಮ ಗೋಪುರ'ವನ್ನು (ಶಹೀದ್ ಮಿನಾರ್) ರಾತ್ರೋರಾತ್ರಿ ನಿರ್ಮಾಣ ಮಾಡಿದರು. ಈ ಮಿನಾರ್ ಬಂಗಾಳಿ ಭಾಷಾಪರವಾದ ಪ್ರತಿಭಟನೆಯ ಸಂಕೇತವಾಗಿದೆ. ಅಂದು ಈ ಐವರು ವಿದ್ಯಾರ್ಥಿಗಳಿಗೆ ಅಲ್ಲದೆ, ಸಾಮಾನ್ಯ ಜನರ ಮೇಲೂ ಪ್ರಭುತ್ವ ಗುಂಡಿನ ಸುರಿಮಳೆಯನ್ನು ಸುರಿಸಿತು. ಸಾವಿರಾರು ಜನರನ್ನು ಸೆರೆಹಿಡಿಯಲಾಯಿತು. ಈ ಎಲ್ಲಾ ಘಟನೆಗಳು ಬಂಗಾಳಿಗಳ ಅದ್ಭುತ ಭಾಷಾಪ್ರೇಮವನ್ನು ಸೂಚಿಸುತ್ತವೆ.

ಈ ಭಾಷಾ ಚಳುವಳಿ ದೇಶ ವಿದೇಶಗಳ ಗಮನ ಸೆಳೆಯಿತು. ಹಲವು ದೇಶಗಳು ಈ ಚಳುವಳಿಗೆ ಬೆಂಬಲ ನೀಡಿದವು. ಯುನೆಸ್ಕೋ ಫೆಬ್ರವರಿ ೨೧ನ್ನು 'ಲೋಕ ತಾಯ್ನುಡಿ ದಿನ'ವೆಂದು ಘೋಷಿಸಿತು. ತಮ್ಮ ತಮ್ಮ ಮಾತೃಭಾಷೆಯನ್ನು ಆಯಾ ಭಾಷಿಕರು ಉತ್ಸವದ ರೂಪದಲ್ಲಿ ಆಚರಿಸಲು ಪ್ರಾರಂಭಿಸಿದರು.

ಆದರೆ, ಕನ್ನಡ ನಾಡಿನಲ್ಲಿ 'ಲೋಕ ತಾಯ್ನುಡಿ ದಿನ'ವನ್ನು ಸಂಭ್ರಮದಿಂದ, ಪ್ರೀತಿಯಿಂದ ಅರ್ಥಪೂರ್ಣವಾಗಿ ಆಚರಿಸಲು ಸಾಧ್ಯವಾಗಿಲ್ಲ. ಇದರ ಬಗ್ಗೆ ವ್ಯಾಪಕ ಚರ್ಚೆಯಾಗಬೇಕಿದೆ. ಯಾವುದೇ ಭಾಷೆಯ ಅವಸಾನ ಸ್ಥಿತಿಗೆ ಕಾರಣಗಳನ್ನು ಅನ್ವೇಷಿಸುವುದರ ಜೊತೆಗೆ ಅಂಕಿ-ಅಂಶಗಳ ಮೂಲಕವೂ ಅದನ್ನು ದೃಢೀಕರಿಸಲಾಗುತ್ತದೆ. ಈ ನಿಟ್ಟಿನಲ್ಲಿ ಲೇಖಕರು ಸೂಚಿಸಿರುವ ಒಂದು ಉದಾಹರಣೆ ಓದುಗರ ಗಮನ ಸೆಳೆಯುತ್ತದೆ. ''ಜೋಹಾನ್ಸ್‌ಬರ್ಗ್‌ನ ಒಬ್ಬ ರಿಕ್ಷಾಚಾಲಕನನ್ನು ಹೀಗೇ ಮಾತಿಗೆಳೆದೆ, ಪರಸ್ಪರ ಮಾತನಾಡುತ್ತಾ ಅವನಿಂದ ಒಂದು ಅಂಶ ಬೆಳಕಿಗೆ ಬಂತು. ಆತ ಸುತ್ತಮುತ್ತಲ ಹನ್ನೊಂದು ಅಧಿಕೃತ ಭಾಷೆಗಳಲ್ಲಿ ವ್ಯವಹರಿಸಬಲ್ಲವನಾಗಿದ್ದ. ಆ ರಿಕ್ಷಾಚಾಲಕನ ಭಾಷಾ ಸಾಮರ್ಥ್ಯ ಮೆಚ್ಚುವಂಥದ್ದು. ಆದರೆ ಅವನು ಇಷ್ಟೆಲ್ಲಾ ಕಲಿತು ಕಷ್ಟಪಟ್ಟು ದುಡಿಯುತ್ತಿರುವುದು, ತನ್ನ ಮಕ್ಕಳಿಗೆ ಇಂಗ್ಲಿಷ್ ಭಾಷೆಯನ್ನು ಕಲಿಸುವ ಸಲುವಾಗಿ'' – ಎಂಬುದನ್ನು ತಿಳಿದಾಗ ದಿಗ್ಭ್ರಮೆ ಮತ್ತು ಆತಂಕ ಏಕಕಾಲಕ್ಕೆ ಉಂಟಾಗುತ್ತವೆ. ಒಂದು ಭಾಷೆಯ ಆಗಮನದಿಂದ ಇನ್ನೊಂದು ಭಾಷೆ ನಿರ್ಗಮನಗೊಳ್ಳುವುದು ಯಾವತ್ತಿಗೂ ಖೇದಕರ ವಿಷಯ. ಪರಭಾಷೆ ಕಲಿಕೆಗಾಗಿ, ತನ್ನ ಮಾತೃಭಾಷೆಯನ್ನು ತಿರಸ್ಕರಿಸಬೇಕಾಗಿರುವ ಅನಿವಾರ್ಯತೆಯ ಸಂದರ್ಭ, ಅನುಭವಿಸಬೇಕಾದ ಸಂಕಟ ನಿಜಕ್ಕೂ ಊಹೆಗೆ ನಿಲುಕುವಂಥದಲ್ಲ.

ಇಂದು ಜಾಗತಿಕ ಮಟ್ಟದಲ್ಲಿ ಇಂಗ್ಲಿಷ್ ವಿಶ್ವದ ಏಕೈಕ ಭಾಷೆಯಾಗಿ ರೂಪುಗೊಳ್ಳುತ್ತಿದೆ; ಎಲ್ಲ ಭಾಷೆಗಳನ್ನು ಜೀರ್ಣಿಸಿಕೊಳ್ಳುತ್ತಿದೆ. ತಾಯ್ನುಡಿಯು ಇನ್ನೂ ಪ್ರಾಥಮಿಕ ಶಾಲೆಯಲ್ಲೂ ಈ ನಾಡಿನಲ್ಲಿ ಕಡ್ಡಾಯ ಭಾಷೆಯಾಗಿಲ್ಲ. ಸಾಫ್ಟ್‌ವೇರ್ ಕಂಪನಿಗಳ ಇಂಗ್ಲಿಷ್ ವ್ಯಾಮೋಹ, ಬಹುರಾಷ್ಟ್ರೀಯ ಕಂಪನಿಗಳ ಮಾಯಾಜಾಲದಿಂದಾಗಿ ಪ್ರಾದೇಶಿಕ ಭಾಷೆಗಳು ಕ್ರಮೇಣ ಮರೆಯಾಗುವ ಕಾಲ ದೂರವಿಲ್ಲ. ನಮ್ಮ ಭಾಷೆಯೊಂದಿಗೆ ನಮ್ಮ ಸಂಸ್ಕೃತಿಯೂ ನಾಶವಾಗುವ ಪ್ರಪಾತ ನಮ್ಮ ಕಣ್ಣು ಮುಂದೆ ಇದ್ದರೂ ಆಡಳಿತವೇ ಆಗಲಿ, ಜನತೆಯೇ ಆಗಲಿ ಆ ಬಗ್ಗೆ ಎಚ್ಚರಗೊಳ್ಳದಿರುವುದೊಂದು ದೊಡ್ಡ ದುರಂತ. ಈ ಸಂದರ್ಭಕ್ಕೆ ಅನ್ವಯಿಸುವಂತೆ ಹೆನ್‌ಡ್ರಿಕ್ ಸ್ವಾರ್ಮನ್ ಅವರ ಅಭಿಪ್ರಾಯವನ್ನು ಸಂಪಾದಕರು ಉಲ್ಲೇಖಿಸಿದ್ದಾರೆ. ''ನಾನು ನನ್ನ ಭಾಷೆಯನ್ನು ಮಾತನಾಡದಿರುವುದು ನನಗೆ ನನ್ನ ಮಹಾತಾಯಿಯ ಎದೆಹಾಲು ಕುಡಿದು ಬೇರೊಬ್ಬರ ಆಶ್ರಯದಲ್ಲಿ ಬೆಳೆದಂತೆ ಭಾಸವಾಗುತ್ತಿದೆ'' ಎಂಬ ಹೆನ್‌ಡ್ರಿಕ್ ಸ್ವಾರ್ಮನ್‌ನ ಮಾತುಗಳನ್ನು ಸಾಂದರ್ಭಿಕವಾಗಿ ಉಲ್ಲೇಖಿಸಿದ್ದಾರೆ.

ಕರ್ನಾಟಕದಲ್ಲಿ ಕನ್ನಡಿಗರ ಸ್ಥಿತಿಯೂ ಭಿನ್ನವೇನಲ್ಲ. ಕನ್ನಡ ನಾಡಿನಲ್ಲೇ 'ಕನ್ನಡ ಉಳಿಸಿ' ಚಳುವಳಿಯನ್ನು ಸಂಘಟಿಸುವ ಅಗತ್ಯವಿದೆ. ಚಳುವಳಿಯ ದೃಷ್ಟಿಕೋನವೇ ಬದಲಾಗಬೇಕಾಗಿದೆ. ಕನ್ನಡ ಭಾಷೆಯನ್ನು ನಮ್ಮ ಇಂದಿನ ಅಗತ್ಯಗಳಿಗೆ ಸಿದ್ಧಪಡಿಸಬೇಕಾಗಿದೆ. ಇಂದಿನ ವಿದ್ಯಮಾನಗಳಿಗೆ ತಕ್ಕಂತೆ ಅದನ್ನು ಆಧುನೀಕರಣಗೊಳಿಸಬೇಕಾಗಿದೆ. ಕೇವಲ 'ಭಜನೆ' ಮಾಡುವುದರಿಂದಾಗಿ ಕನ್ನಡ ಭಾಷೆ ಉಳಿಯುವುದಿಲ್ಲ. ಒಂದು ಭಾಷೆಯನ್ನು ಅಧಿಕೃತವಾಗಿ ರಾಜ್ಯಭಾಷೆ ಎಂದು ಘೋಷಿಸುವುದು ಒಂದು ಕಾರ್ಯವಾದರೆ, ಅದನ್ನು ಜಾಗತಿಕ ಬದಲಾವಣೆಗಳಿಗೆ ತಕ್ಕಂತೆ ನಿರಂತರವಾಗಿ ಸಿದ್ಧಗೊಳಿಸುವುದು ಮತ್ತೊಂದು ಪ್ರಮುಖ ಕಾರ್ಯ. ಈ ಪುಟ್ಟ ಹೊತ್ತಿಗೆಯು ಈ ಎಲ್ಲ ಅಂಶಗಳನ್ನು ಕುರಿತಂತೆ ಓದುಗರನ್ನು ಚಿಂತನೆಗೆ ಹಚ್ಚುತ್ತದೆ.

**ಆಶಾ ವಸಂತ್**
೪೪, 'ಸಂತೋಷ ನಿವಾಸ', ೭ನೇ ಅಡ್ಡರಸ್ತೆ,
ಕೊಳವೆಬೀದಿ, ಮಲ್ಲೇಶ್ವರ, ಬೆಂಗಳೂರು - ೫೬೦ ೦೦೩



# ‘ಬದುಕು’ ತೆರೆದಿಟ್ಟ ಬರಹಗಾರ್ತಿ

## ಗೀತಾ ನಾಗಭೂಷಣ

ಇದೇ ತಿಂಗಳು ದೆಹಲಿಯಲ್ಲಿ ನಡೆದ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದವರಲ್ಲಿ ಕನ್ನಡದ ಶ್ರೀಮತಿ ಗೀತಾ ನಾಗಭೂಷಣ ಅವರು ಒಬ್ಬರು. ಕೆಳಜಾತಿ ವರ್ಗದವರ ದುಃಖ ದುಮ್ಮಾನಗಳನ್ನು, ಆಚರಣೆ, ಕುರುಡು ನಂಬಿಕೆಗಳನ್ನು – ಒಟ್ಟಾರೆಯಾಗಿ ಸಮಾಜದ ಶೋಷಿತರ ವಿಸ್ತಾರವಾದ ಬದುಕಿನ ಚಿತ್ರವನ್ನು ತಮ್ಮ ಕಾದಂಬರಿಯಲ್ಲಿ ಚಿತ್ರಿಸುವ ಮೂಲಕ ಇದುವರೆಗೆ ಕನ್ನಡ ಸಾಹಿತ್ಯ ಲೋಕಕ್ಕೆ ಅಪರಿಚಿತವಾಗಿದ್ದ ಅನುಭವ ಪ್ರಪಂಚವನ್ನು ಪರಿಚಯಿಸಿರುವ ಶ್ರೀಮತಿ ಗೀತಾ ನಾಗಭೂಷಣ ಅವರ ‘ಬದುಕು’ ಕಾದಂಬರಿ ಕೇಂದ್ರ ಸಾಹಿತ್ಯ ಅಕಾಡೆಮಿಯ ಈ ವರ್ಷದ ಕನ್ನಡದ ಶ್ರೇಷ್ಠ ಪುಸ್ತಕದ ಬಹುಮಾನ ಪಡೆದಿರುವುದು ನಮಗೆಲ್ಲಾ ಹೆಮ್ಮೆಯ ಹಾಗೂ ಸಂತೋಷದ ವಿಷಯ. ಈ ಪ್ರಶಸ್ತಿ ಪಡೆದ ಕನ್ನಡದ ಮೊದಲ ಮಹಿಳೆ ಎಂಬ ಹೆಗ್ಗಳಿಕೆಗೆ ಪಾತ್ರರಾಗಿರುವ ಗೀತಾ ನಾಗಭೂಷಣ ಅವರು ಈಗಾಗಲೇ ಕನ್ನಡ ಸಾಹಿತ್ಯದ ಹಲವಾರು ಪ್ರಶಸ್ತಿಗಳಿಗೆ ಪಾತ್ರರಾಗಿದ್ದಾರೆ. ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ, ಕರ್ನಾಟಕ ಸರ್ಕಾರದ ಪ್ರತಿಷ್ಠಿತ ದಾನಚಿಂತಾಮಣಿ ಪ್ರಶಸ್ತಿ ಮತ್ತು ಇತ್ತೀಚೆಗೆ ಹಂಪಿಯ ಕನ್ನಡ ವಿಶ್ವವಿದ್ಯಾಲಯವು ನೀಡುವ ನಾಡೋಜ ಪ್ರಶಸ್ತಿ – ಮುಂತಾದ ಪ್ರಶಸ್ತಿಗಳಲ್ಲದೆ ಅವರು ರಚಿಸಿರುವ ಪುಸ್ತಕಗಳಿಗೂ ಹಲವಾರು ಬಹುಮಾನಗಳು ಬಂದಿವೆ. ಇವರ ಸಾಧನೆಯ ಕಿರೀಟಕ್ಕೆ ಈಗ ಕೇಂದ್ರ ಸಾಹಿತ್ಯ ಅಕಾಡೆಮಿಯ ಬಹುಮಾನದ ಗರಿಯೂ ಸೇರಿಕೊಂಡಿದೆ. ಈ ಸಂದರ್ಭದಲ್ಲಿ ‘ಹೊಸತು’ ಪತ್ರಿಕೆಯು ಶ್ರೀಮತಿ ಗೀತಾ ನಾಗಭೂಷಣರವರನ್ನು ಅಭಿನಂದಿಸುತ್ತದೆ ಮತ್ತು ಅವರೊಡನೆ ನಡೆಸಿದ ಸಂದರ್ಶನ ಲೇಖನವನ್ನು ಪ್ರಕಟಿಸುತ್ತಿದೆ.

ಗುಲಬರ್ಗಾದ ವಿಶ್ವವಿದ್ಯಾನಿಲಯವು ಅಲ್ಲಿನ ಮಹಿಳಾ ಸಂಘಟನೆಗಳೊಂದಿಗೆ ಸೇರಿ ‘ಸ್ತ್ರೀಭ್ರೂಣಹತ್ಯೆಯ ನಿಷೇಧ’ ಕುರಿತ ಜಾಗೃತಿ ಕಾರ್ಯಕ್ರಮವನ್ನು ಹಮ್ಮಿಕೊಂಡಿತ್ತು. ಆ ಕಾರ್ಯಕ್ರಮಕ್ಕೆ ಭಾಷಣ ಮಾಡಲು ಆಹ್ವಾನಿಸಿದಾಗ ಹಿಂದೆ ಮುಂದೆ ನೋಡದೆ ಕೂಡಲೇ ಒಪ್ಪಿಕೊಂಡೆ. ಅದೇ ದಿನಾಂಕದಲ್ಲಿ ಬೆಂಗಳೂರಿನಲ್ಲಿ ನಡೆಯುವ ಕಾರ್ಯಕ್ರಮಕ್ಕೆ ಒಪ್ಪಿಕೊಂಡಿದ್ದರೂ ಅದನ್ನು ರದ್ದುಗೊಳಿಸಿ ಗುಲಬರ್ಗಾದ ಕಾರ್ಯಕ್ರಮಕ್ಕೆ ಒಪ್ಪಿಕೊಂಡೆ. ಇದಕ್ಕೆ ಮುಖ್ಯ ಕಾರಣ, ಗುಲಬರ್ಗಾಗೆ ಹೋದರೆ ‘ಬದುಕು’ ಕಾದಂಬರಿಯ ಲೇಖಕಿ ಗೀತಾ ನಾಗಭೂಷಣರವರನ್ನು ಭೇಟಿಮಾಡಬಹುದೆಂಬ ಆಸೆ. ಜೊತೆಗೆ ನೇಮಿಚಂದ್ರ ಕೂಡ ನನ್ನನ್ನು ಸೇರಿಕೊಂಡಳು. ನಾವಿಬ್ಬರೂ ಗೀತಾ ನಾಗಭೂಷಣರನ್ನು ಭೇಟಿಮಾಡಲು ಅವರ ಮನೆಗೆ ಹೋದೆವು. ಬೆಳಗ್ಗೆ ತಿಂಡಿಗೆ (ನಮ್ಮ ಕಡೆಯ ತಿಂಡಿ !) ನಮಗೆ ಅವರ ಮನೆಯಲ್ಲಿ ಆಹ್ವಾನವಿತ್ತು, ಅತ್ಯಂತ ಸಂಭ್ರಮದಿಂದ ಇಡ್ಲಿ, ವಡೆ, ಜಾಮೂನು – ಎಲ್ಲವನ್ನೂ ಹೊಟ್ಟೆ ತುಂಬ ನಮಗೆ ತಿನ್ನಿಸಿ ಪ್ರೀತಿಯಿಂದ ಮಾತನಾಡಿಸಿದರು.

ಅವರೊಡನೆ ಮಾತಿಗೆ ಮೊದಲಿಟ್ಟಂತೆ ತಮ್ಮ ಬಾಲ್ಯ, ಬದುಕಿಗೆ ಹಿನ್ನೆಲೆಯಾದ ಜೀವನಾನುಭವ ಎಲ್ಲವನ್ನೂ ಪದರ ಪದರವಾಗಿ ಬಿಚ್ಚಿಟ್ಟರು.

ಹಳ್ಳಿಯಲ್ಲಿ ಹೊಟ್ಟೆ ತುಂಬಿಸಿಕೊಳ್ಳಲು ಸಾಧ್ಯವಿಲ್ಲವೆಂದು ಕಲಬುರ್ಗಿಗೆ ಬಂದು ಎಂ.ಎಸ್.ಕೆ.ಮಿಲ್‌ನ ಗಿರಣಿಯಲ್ಲಿ ಕೂಲಿ ಕಾರ್ಮಿಕರಾಗಿ ಸೇರಿಕೊಂಡ ಗೀತಾ ಅವರ ತಂದೆ ಅಪ್ಪಟ ಅನಕ್ಷರಸ್ಥರು. ಸ್ವಾತಂತ್ರ್ಯ ಚಳವಳಿಯ ಸಂದರ್ಭದಲ್ಲಿ ಜೈಲು ಸೇರಿದ ಗೀತಾ ಅವರ ತಂದೆಗೆ ಜೈಲಿನಲ್ಲಿದ್ದ ವಿದ್ಯಾವಂತ ಖೈದಿಗಳ ಸಂಪರ್ಕದಿಂದ ರಾಮಾಯಣ, ಮಹಾಭಾರತ ಹತ್ತು ಹಲವು ಗ್ರಂಥಗಳ ಪರಿಚಯ. ವಿದ್ಯೆಯ ಮಹತ್ವ ಅರಿವಾಯಿತು. ಜೈಲಿನಿಂದ ಹೊರಗೆ ಬಂದ ಮೇಲೆ ಮಕ್ಕಳಿಗಾದರೂ ಕಲಿಸಬೇಕೆಂಬ ಮನಸ್ಸಾಯಿತು. ಚೊಚ್ಚಲು ಮಗಳು ಗೀತಾ ತಂದೆಯ ಪ್ರೋತ್ಸಾಹದಿಂದ ಶಾಲೆಗೆ ಸೇರುವ ಅವಕಾಶ ಪಡೆದರು. ತಳವಾರ ಕುಟುಂಬಕ್ಕೆ ಸೇರಿದ ಗೀತಾರವರು ಬ್ರಾಹ್ಮಣರ ಬೀದಿಯಲ್ಲಿ ವಾಸಿಸುತ್ತಿದ್ದುದರಿಂದ ಮೇಲುಜಾತಿಯವರು ಕೀಳುಜಾತಿಯವರನ್ನು ಅಪಮಾನಗೊಳಿಸಬಹುದಾದ ಎಲ್ಲ ಪರಿಯನ್ನು ಸ್ವಂತ ಅನುಭವವಾಗಿ ಕಂಡರು. ಮನೆಯಲ್ಲಿದ್ದ ಕಡುಬಡತನದಿಂದ ವಿದ್ಯಾಭ್ಯಾಸ ಯಾವ ಹಂತದಲ್ಲಾದರೂ ನಿಲ್ಲಬಹುದಿತ್ತು. ಆದರೂ ಬದುಕಿನಲ್ಲಿ ಸಿಕ್ಕ ಚಿಕ್ಕ-ಪುಟ್ಟ ಪ್ರೋತ್ಸಾಹದಿಂದ, ಧೈರ್ಯದಿಂದ, ಎದೆಗುಂದದೆ ಮೆಟ್ರಿಕ್ ಮುಗಿಸಿ ಡಿವಿಜನಲ್ ಕಛೇರಿಯಲ್ಲಿ ಕೆಲಸಕ್ಕೆ ಸೇರಿದರು. ಇಡೀ ಕಛೇರಿಯಲ್ಲಿ, ಅಷ್ಟೇ ಏಕೆ ಇಡೀ ಜಿಲ್ಲೆಯಲ್ಲಿ ಆಫೀಸಿನಲ್ಲಿ ಕೆಲಸ ಮಾಡುತ್ತಿದ್ದ ಏಕೈಕ ಮಹಿಳೆಯೆನಿಸಿಕೊಂಡರು. ಬೆಳಗಿನ ಹೊತ್ತು ಕಾಲೇಜಿನಲ್ಲಿ ವಿದ್ಯಾಭ್ಯಾಸ, ನಂತರ ಕಛೇರಿಯಲ್ಲಿ ಗುಮಾಸ್ತೆ ಕೆಲಸ ಜೊತೆಜೊತೆಗೆ ನಿಭಾಯಿಸಿಕೊಂಡು ಪದವಿ ಗಳಿಸಿಕೊಂಡು ಶರಣಬಸಪ್ಪ ಪ್ರೌಢಶಾಲೆಯಲ್ಲಿ ಶಿಕ್ಷಕಿಯಾದರು. ಅಲ್ಲಿಂದ ಮುಂದೆ ಬಿ.ಎಡ್, ಎಂ.ಎ. ಪದವಿ ಗಳಿಸಿಕೊಂಡು ಕಾಲೇಜು ಪ್ರಿನ್ಸಿಪಾಲ್ ಆಗಿ ಮೂವತ್ತು ವರ್ಷಗಳ ಕಾಲ ಕಾರ್ಯ ನಿರ್ವಹಿಸಿ ನಿವೃತ್ತರಾದರು.

ಬದುಕಿನೊಂದಿಗೆ ಬರವಣಿಗೆಯು ಜೊತೆಜೊತೆಗೆ ಹೆಜ್ಜೆಹಾಕಿತು. ಹದಿಹರೆಯದಲ್ಲಿ ಜನಪ್ರಿಯವಾದ ಮನೋರಂಜಕ ಕಥೆಗಳನ್ನು ರಚಿಸಿದರೂ ನಂತರ ತಮ್ಮ ಹಾದಿಯನ್ನು ಗುರುತಿಸಿಕೊಳ್ಳುವುದು ಗೀತಾ ಅವರಿಗೆ ತಡವಾಗಲಿಲ್ಲ. ಜಾತಿ ನೆಲೆಯ ಸಾಮಾಜಿಕ ಅಪಮಾನದ ಸಂಕಟ, ದೌರ್ಜನ್ಯ, ದಬ್ಬಾಳಿಕೆಯ ನೋವು, ವರ್ಗ ಬೆಲೆಯ ಮಾನಸಿಕ ಕ್ರೌರ್ಯ, ದಲಿತ ಜಗತ್ತಿನ ಮುಗ್ಧ ಹೆಂಗಸರ ಲೈಂಗಿಕ ಶೋಷಣೆಯ ಚಿತ್ರಹಿಂಸೆ, ಅವರ ಸಮುದಾಯಕ್ಕೆ ಕೆಸರಿನಂತೆ ಅಂಟಿಕೊಂಡಿರುವ ಬೆತ್ತಲೆಸೇವೆ, ಜೋಗಿತಿಯಂಥ ಸಂಪ್ರದಾಯಗಳನ್ನು ಅತ್ಯಂತ ಪಾರದರ್ಶಕವಾಗಿ ಬರವಣಿಗೆಯಲ್ಲಿ ತೆರೆದಿಟ್ಟಿದ್ದಾರೆ. ಗೀತ ಅವರ ಇದುವರೆಗಿನ ಬದುಕಿನ ಎಲ್ಲ ಅನುಭವ, ವೈಚಾರಿಕತೆಯ ಘನೀಕೃತರೂಪವಾಗಿ ‘ಬದುಕು’ ಮೂಡಿಬಂದಿದೆ.

**ಹೊಸತು** : ಈ ಬಾರಿಯ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ನಿಮ್ಮ ‘ಬದುಕು’ ಕಾದಂಬರಿಗೆ ಬಂದದ್ದು ನಮಗೆಲ್ಲ ತುಂಬ ಸಂತೋಷದ ಸಂಗತಿ. ‘ಹೊಸತು’ ಪರವಾಗಿ ನಿಮಗೆ ನಮ್ಮ ಅಭಿನಂದನೆಗಳು.

**ಗೀತಾ** : ಸರಿಯಮ್ಮ, ಥ್ಯಾಂಕ್ಸ್.

**ಹೊಸತು** : ಈ ಸಂದರ್ಭದಲ್ಲಿ ನಿಮ್ಮ ಸಾಹಿತ್ಯ ಮತ್ತು ಸಾಮಾಜಿಕ ಆಸಕ್ತಿಗಳನ್ನು ಕುರಿತಂತೆ ನಮ್ಮ ಪತ್ರಿಕೆಗೆ ಸಂದರ್ಶಿಸಬೇಕಂತ ಬಂದಿದ್ದೀವಿ. ಮೊದಲಿಗೆ, ನೀವು ಕಾದಂಬರಿ ಪ್ರಕಾರವನ್ನೇ ವಿಶೇಷವಾಗಿ ಆಯ್ದುಕೊಂಡುದಕ್ಕೆ ಕಾರಣವೇನು ?

**ಗೀತಾ** : ಇಲ್ಲವಲ್ಲ, ನಾನು ಕಥೆಗಳನ್ನೂ ಬರೆದಿದ್ದೀನಿ. ನಾನು ಆರಂಭದಲ್ಲಿ ಕಥೆಗಳನ್ನೇ ಬರೆದದ್ದು. ಸುಮಾರು ಐವತ್ತಕ್ಕೂ ಹೆಚ್ಚು ಕಥೆಗಳನ್ನು ಬರೆದಿದ್ದೀನಿ. ಎರಡು ಕಥಾಸಂಕಲನಗಳು ಬಂದಿವೆ. ಅಲ್ಲದೆ, ಇನ್ನೇನು ಈಗ ಒಂದು ಸಮಗ್ರ ಕಥಾಸಂಕಲನವನ್ನು ತರಲು ಪ್ರಕಾಶಕರು ಮುಂದೆ ಬಂದಿದ್ದಾರೆ. ನಾನು ಬರೆದಿರುವುದು ಇಪ್ಪತ್ತೆಂಟು ಕಾದಂಬರಿಗಳು. ದುರಗಿ ಮುರಗಿಯರ ಸಂಸ್ಕೃತಿಯನ್ನು ಕುರಿತು ಒಂದು ಸಾಮಾಜಿಕ ಅಧ್ಯಯನವನ್ನು ಮಾಡಿ ಸಂಶೋಧನಾತ್ಮಕ ಪುಸ್ತಕ ಬರೆದಿದ್ದೀನಿ. ಖೇಮಣ್ಣ ಅನ್ನುವ ತತ್ವಪದಕಾರನ ತತ್ವಗಳನ್ನು ಸಂಗ್ರಹ ಮಾಡಿದ್ದೀನಿ.

**ಹೊಸತು** : ನಿಮ್ಮ ಆರಂಭದ ಕಾದಂಬರಿಗಳಿಗೂ ಇತ್ತೀಚಿನ ಕಾದಂಬರಿಗಳಿಗೂ ಅಗಾಧವಾದ ವ್ಯತ್ಯಾಸವಿದೆಯಲ್ಲ. ಇಂತಹ ಬದಲಾವಣೆ ಯಾವ ಹಂತದಲ್ಲಿ ಆಯಿತು ? ಇದಕ್ಕೆ ನೀವು ಗುರುತಿಸುವ ಮುಖ್ಯ ಕಾರಣಗಳು ಏನಾದರೂ ಇವೆಯೇ ?

**ಗೀತಾ** : ನಾನು ಹೈಸ್ಕೂಲಿನಲ್ಲಿದ್ದಾಗಲೇ ತುಂಬ ಕಥೆಗಳನ್ನು, ಪುಸ್ತಕಗಳನ್ನು ಓದುತ್ತಿದ್ದೆ. ಆಗ ನಾನು ಓದುತ್ತಿದ್ದಂತಹ ತ್ರಿವೇಣಿ, ಎಂ. ಕೆ. ಇಂದಿರಾ, ಅ.ನ.ಕೃ. – ಅಂತಹವರ ಕಾದಂಬರಿಗಳಲ್ಲಿನ ಶಿಷ್ಟಭಾಷೆ ನಮಗೆ ಬಹಳ ಛಲೋ ಅಂತ ಅನ್ನಿಸುತ್ತಿತ್ತು. ಕಣೆ, ಬಾರೆ ಕಣೆ, ಹೋಗೆ ಕಣೆ ಅಂತ ಅನ್ನುವ ಅವರ ಭಾಷೆ, ಎಲ್ಲ ನನಗೆ ಪಸಂದ್ ಅನಿಸುತ್ತಿತ್ತು. ನನ್ನ ಬಾಲ್ಯ ತುಂಬ ಕೆಟ್ಟದ್ದಾಗಿತ್ತು. ಕಡುಬಡತನ, ಓದುವುದೇ ಸಾಹಸ. ಮೇಲ್‌ಜಾತಿಯವರ ಅವಮಾನ, ಕಿರುಕುಳ ಎದುರಿಸಿ ಗಟ್ಟಿಯಾಗಿ ಬೆಳೆದೆ. ಡಿ.ಸಿ. ಆಫೀಸಲ್ಲಿ ಕ್ಲರ್ಕ್ ಆಗಿ ಕೆಲಸ ಮಾಡುತ್ತಾನೆ ಬೆಳಗಿನ ಕಾಲೇಜಿನಲ್ಲಿ ಓದುತ್ತಾ ಡಿಗ್ರಿ ಮಾಡಿದೆ. ನಂತರ ಕಾಲೇಜಿನ ಪ್ರಿನ್ಸಿಪಾಲ್ ಆದೆ. ಆದ್ರೆ ಹರೆಯದ ದಿನಗಳು ನೋಡಿ, ನನಗೂ ನೂರಾರು ಕನಸುಗಳು ಇದ್ದವು; ಆಸೆಗಳು ಇದ್ದವು. ಬಡತನದಲ್ಲಿ ಬೆಳೆದದ್ದರಿಂದ ಅವತ್ತಿನ ಲೇಖಕರು ಬರೀತಿದ್ದ ಮನರಂಜನಾ ಕಾದಂಬರಿಗಳು ನನಗೂ ಖುಷಿ ಕೊಟ್ಟವು. ಆ ಕಾದಂಬರೀಲಿ ಬರುವ ಹೆಂಗಸರು ರೇಷ್ಮೆಸೀರೆ ಉಡೋದು, ಉಪ್ಪಿಟ್ಟು ತಿನ್ನೋದು, ಮಹಡಿ ಮನೆಗಳು, ಉದ್ದುದ್ದ ಕೂದಲ ಜಡೆ (ನಗುತ್ತಾ, 'ನನಗಂತೂ ಕೂದಲು ಇಲ್ಲ ಬಿಡಿ') ಇಷ್ಟಿಷ್ಟು ಹೂ ಮುಡ್ಕೊಳ್ಳೋದು – ಇವೆಲ್ಲಾ ನನಗೆ ಖುಷಿ ಕೊಡುತ್ತಿತ್ತು. ಆದ್ದರಿಂದ ನಾನೂ ಇದೇ ದಾಟಿಯಲ್ಲಿ ಒಂದು ಎಂಟು ಹತ್ತು ಕಾದಂಬರಿಗಳನ್ನು ಶಿಷ್ಟಭಾಷೆಯಲ್ಲಿ ಬರೆದೆ.

**ಹೊಸತು** : ಹಾಗಾದರೆ, ಇಂತಹ ಬರವಣಿಗೆಯ ಧಾಟಿಯಿಂದ ನೀವು ಬದಲಾದ್ದು, ಅದಕ್ಕೆ ಏನು ಪ್ರೇರಣೆಗಳು ?

**ಗೀತಾ** : ಒಮ್ಮೆ, ನನ್ನ ಅವ್ವನ ತವರು ಊರು ಚುಂಚೂರು ಅಂತ ಇಲ್ಲೇ ಸಮೀಪ ಇದೆ. ಆ ಊರಿನ ಮನೆದೇವತೆ ಮಾಪುರತಾಯಿ ದೇವಿಯ ಜಾತ್ರೆಗೆ ಹೋಗಿದ್ದೆ. ಅಲ್ಲಿ ಕುರಿ-ಕೋಳಿಗಳ ಬಲಿಯಂತೂ ಇದ್ದೇ ಇತ್ತು. ಆದರೆ ಮೊದಲ ಬಾರಿಗೆ ನನಗೆ ಶಾಕ್ ಕೊಟ್ಟಿದ್ದು ಅಂದರೆ ಹೆಣ್ಣುಮಕ್ಕಳ ಬೆತ್ತಲೆ ಸೇವೆ. ಅದು ಬರೀ ದಲಿತ ಹೆಣ್ಣುಮಕ್ಕಳು. ಮೈಗೆಲ್ಲಾ ಬೇವಿನೊಟ್ಟೆಗೆ ಗಂಧದೊಟ್ಟೆಗೆ ಸುತ್ತಿಗೊಂಡು ದೇವಸ್ಥಾನದ ಸುತ್ತ ಕುಣಕೊಂಡು ಬರುತ್ತಾರೆ. ಹರಕೆ ಹೊತ್ತ ದಲಿತರು ದೇವಿಗೆ ಈ ಬೆತ್ತಲೆಸೇವೆ ಮಾಡುತ್ತಾರೆ. ಇದೊಂದು ಆ ದೇವಿಯ ಹರಕೆ. ಆದರೆ ಮತ್ತೊಂದು, ಹರೆದ ಹೆಣ್ಣುಮಕ್ಕಳನ್ನು ದೇವಿಗೆ 'ಜೋಗಿಣಿ' ಅಂತ ಬಿಡುವುದು. ಮನಸ್ಸಿರಲಿ ಬಿಡಲಿ, ಅವರು ತಲೆಮೇಲೆ ಜರಡಿ ಬುಟ್ಟಿ ಹೊತ್ತು, ಕೊರಳಲ್ಲಿ ಕವಡೆಸರ ಹಾಕ್ಕೊಂಡು, ಬಗಲಲ್ಲಿ ಚೌಡಕಿ ಹಿಡ್ಕೊಂಡು ಉಧೋ ಉಧೋ ಅಂತ ದೇವಿಯ ಮೈಮಾದ ಹಾಡುಗಳನ್ನು ಹಾಡುತ್ತಾ ಮನೆ-ಮನೆ, ಗಲ್ಲಿ-ಗಲ್ಲಿ, ಬಾಜಾರು- ಬಾಜಾರು, ಸಂತೆ-ಸಂತೆ, ರಸ್ತೆ-ರಸ್ತೆಗಳಲ್ಲಿ ಭಿಕ್ಷೆ ಬೇಡಬೇಕು. ಅವಳು ದೇವರು ಸೇವೆಗೆ ಮೀಸಲು ಅಂದರೂ ತನ್ನ ಜೀವನದುದ್ದಕ್ಕೂ ಬೀದಿ ಸೂಳೆಯಾಗಿಯೇ ಬದುಕಬೇಕು - ಸೂಳೆಯಾಗಿಯೇ ಸಾಯಬೇಕು. ಇದನ್ನೆಲ್ಲಾ ನನ್ನ ಕಥೆಯ, ಕಾದಂಬರಿಯ ವಸ್ತು ಮಾಡಿಕೊಂಡೆ.

**ಹೊಸತು** : ಹಾಗಾದರೆ ಈ ಜಾತ್ರೆಯನ್ನು, ಆಚರಣೆಯನ್ನು ನೀವು ಬಾಲ್ಯದಲ್ಲಿ, ಇದಕ್ಕೆ ಮುಂಚೆ ನೋಡಿರಲಿಲ್ಲವೆ ?

**ಗೀತಾ** : ನೋಡಿದ್ದೆ. ಆದರೆ ಆಗಲೂ ನನ್ನ ಮನಸ್ಸಿನಲ್ಲಿ ಅನೇಕ ಪ್ರಶ್ನೆಗಳು ಇದ್ದವು. ಏಕೆ ದಲಿತ ಹೆಣ್ಣುಮಕ್ಕಳೇ ಇದನ್ನೆಲ್ಲಾ ಮಾಡುತ್ತಾರೆ ? ಮೇಲು ಜಾತಿ ಹೆಣ್ಣು ಮಕ್ಕಳು ಬಂದು ಹೂವು, ಹಣ್ಣು ಕೊಟ್ಟು ನೈವೇದ್ಯ ಮಾಡಿಸಿಕೊಂಡು ಹೋಗುತ್ತಾರೆ ? ಈ ದೇವಿ ಏಕೆ ಹೆಣ್ಣುಮಕ್ಕಳಿಗೆ ಹೀಗೆ ಮರ್ಯಾದಿ ಕಳೀತಾಳೆ ಅಂತ ಮನಸ್ಸಿಗೆ ತ್ರಾಸ ಆಗುತ್ತಿತ್ತು. ಚಂದ್ರಶೇಖರ ಕಂಬಾರರು 'ಸಿಂಗಾರವ್ವ ಮತ್ತು ಅರಮನೆ' ಬರೆದಾಗ, ಅದನ್ನು ಓದಿದೆ. ನನಗೆ ತುಂಬ ಇಷ್ಟ ಆಯಿತು. ಸ್ವಲ್ಪ ಧೈರ್ಯ ಬಂತು. ಆದ್ದರಿಂದ ನನ್ನದೇ ಆಡುಭಾಷೆಯಲ್ಲಿ, ನಮ್ಮ ಹೆಣ್ಣುಮಕ್ಕಳ ಕಥೆ ಬರೆಯುವುದಕ್ಕೆ ಆರಂಭಿಸಿದೆ. ಮೊದಲು ಕಥೆಗಳನ್ನು ಮಾತ್ರ ಬರೆದೆ. ಸುಧಾದ ಎಂ. ಬಿ. ಸಿಂಗ್ ತುಂಬ ಪ್ರೋತ್ಸಾಹ ಕೊಟ್ಟರು. ನನ್ನ ಕಥೆಗಳನ್ನು ಅವರ ಪತ್ರಿಕೆಯಲ್ಲಿ ಪ್ರಿಂಟ್ ಮಾಡಿದರು. ಆಗ ಸ್ವಲ್ಪ ಧೈರ್ಯ ಬಂದು 'ಮಾಪುರ ತಾಯಿಯ ಮಕ್ಕಳು' ಕಾದಂಬರಿ ಬರೆದೆ. ಅದಕ್ಕೆ ಒಳ್ಳೆ ಪ್ರೋತ್ಸಾಹ ಸಿಕ್ಕಿತು. ಅಲ್ಲಿಂದ ನನ್ನ ಬರವಣಿಗೆಯ ದಿಕ್ಕು ಬದಲಾಯಿತು. ಅಲ್ಲಿಂದ ಶಿಷ್ಟ ಭಾಷೆಯನ್ನು ಬಿಟ್ಟು ಪ್ರಾದೇಶಿಕ ಭಾಷೆಯಲ್ಲಿ ಬರವಣಿಗೆ ಆರಂಭಿಸಿದೆ.

**ಹೊಸತು** : ನೀವು ಪ್ರಾದೇಶಿಕ ಭಾಷೆಯಲ್ಲಿ ಬರೆಯಲು ಆರಂಭಿಸಿದ ನಂತರವೇ ನಿಮ್ಮನ್ನು ಪತ್ರಿಕೆಗಳು ಮತ್ತು ಸಾಹಿತ್ಯಲೋಕ ವಿಶೇಷವಾಗಿ ಆದರಿಸಿತು ಅಂತ ಅನ್ನಿಸುತ್ತಾ ?

**ಗೀತಾ** : ಒಂದು ರೀತಿಯಲ್ಲಿ ನಿಜ. ಆದರೆ ನಾನು ಭಾಷೆಯನ್ನು ಮಾತ್ರ ಬದಲಿಸಲಿಲ್ಲ, ಬರೆಯುವ ವಸ್ತುಗಳನ್ನು ಬದಲಾಯಿಸಿಕೊಂಡೆ. ಹಿಂದಿನ ಮನರಂಜನಾತ್ಮಕ ಕಾದಂಬರಿಗಳನ್ನು ಒಂದೆಡೆ ಸರಿಸಿ, ನಾನು ನನ್ನದೇ ಆದ ಹೊಸ ಹಾದಿಯಲ್ಲಿ ಹೆಜ್ಜೆ ಇಟ್ಟೆ ಅಂತ ಅನ್ನಿಸುತ್ತೆ. ನನ್ನ ಕಾದಂಬರಿಯ ವಸ್ತುಗಳೆಲ್ಲ ಹಳ್ಳಿಯ ಕೆಳಗೇರಿಯ, ಪಟ್ಟಣದ ಕೆಳಗೇರಿಯ, ನಗರದ ಝೋಪಡಿಪಟ್ಟಿಯ ಮುಗ್ಧ ಹೆಣ್ಣುಮಕ್ಕಳ ನೂರಾರು ಸಮಸ್ಯೆಗಳನ್ನು ಕುರಿತದ್ದು. ಬೆತ್ತಲೆ ಸೇವೆ, ಜೋಗಿಣಿಯರ ಹರಕೆ – ಇದರಲ್ಲಿ ಮೇಲುಜಾತಿಯವರ ಚಾಲಾಕುತನದ ಸಂಚುಗಳು – ಇವನ್ನೆಲ್ಲಾ ಕುರಿತು ಬರೆದೆ. ನನ್ನ 'ನೀಲಗಂಗಾ' ಕಾದಂಬರಿ



ಲಂಕೇಶ್ ಪತ್ರಿಕೆಯಲ್ಲಿ, 'ಹಸಿ ಮಾಂಸ ಮತ್ತು ಹದ್ದುಗಳು' ತರಂಗ ಪತ್ರಿಕೆಯಲ್ಲಿ ಪ್ರಕಟವಾದವು. 'ಹಸಿ ಮಾಂಸ ಮತ್ತು ಹದ್ದುಗಳು' ಎಷ್ಟೊಂದು ಜನಪ್ರಿಯವಾಯಿತೆಂದರೆ ಅದಿನ್ನೂ ಪತ್ರಿಕೆಯಲ್ಲಿ ಮೂರೇ ಮೂರು ಕಂತು ಮಾತ್ರ ಪ್ರಕಟವಾದಾಗಲೇ ಸುಪ್ರಸಿದ್ಧ ಚಲನಚಿತ್ರ ನಿರ್ದೇಶಕರಾದ ದೊರೈ-ಭಗವಾನರು ಸಿನೇಮಾಕ್ಕಾಗಿ ಹಕ್ಕನ್ನು ಪಡೆದುಕೊಂಡು, ನಂತರ 'ಹೆಣ್ಣಿನ ಕೂಗು' ಅಂತ ಚಿತ್ರ ಮಾಡಿದರು. ಚಿತ್ರವೂ ಯಶಸ್ವಿಯಾಯಿತು.

**ಹೊಸತು** : ಬರಹಗಾರ್ತಿಯಾಗಿ ಕೆಳಜನರ ನೋವಿಗೆ ಸ್ಪಂದಿಸುವ ನೀವು ಅವರಿಗೆ ಸಂಬಂಧಪಟ್ಟ ಚಳುವಳಿಗಳಲ್ಲಿ ಎಷ್ಟರಮಟ್ಟಿಗೆ ಭಾಗವಹಿಸುತ್ತೀರಾ ?

**ಗೀತಾ** : ನಾನು ವಿಶೇಷವಾಗಿ ಚಳುವಳಿಗಳಲ್ಲಿ ಭಾಗವಹಿಸಿದ್ದೀನಿ ಅಂತ ಹೇಳಲಿಕ್ಕಾಗಲ್ಲ. ಇಲ್ಲಿನ ಮಹಿಳಾ ಸಂಘಟನೆಯ ಕಾರ್ಯಕ್ರಮಗಳಿಗೆ ಸಾಧ್ಯವಾದರೆ ಹೋಗುತ್ತೀನಿ. ಅವರು ಒಳ್ಳೆಯ ಕೆಲಸ ಮಾಡುತ್ತಿದ್ದಾರೆ. ಅದರ ಬಗ್ಗೆ ನನಗೆ ಗೌರವವಿದೆ. ಆದರೆ ಹೆಣ್ಣಿನ ಸಮಸ್ಯೆಯನ್ನು ಕುರಿತು ಲೇಖನಗಳನ್ನು ಬರೆದು ಪತ್ರಿಕೆಗೆ ಕಳಿಸಿದೀನಿ.

ಕುದುರೆಮೋತಿ ಪ್ರಕರಣ ನಡೆದಾಗ ಅಲ್ಲಿ ಬೆತ್ತಲೆ ಮಾಡಿ ಅವಮಾನಗೊಂಡ ಹೆಣ್ಣುಮಕ್ಕಳನ್ನು ಹೋಗಿ ಮಾತಾಡಿಸಿದೆ. ಬಂಡಾಯ ಸಾಹಿತ್ಯ ಸಂಘಟನೆಯವರ ಜೊತೆ ಹೋಗಿ ಆ ಹೆಣ್ಣುಮಕ್ಕಳನ್ನು ಮಾತಾಡಿಸಿ ಆ ಘಟನೆಯನ್ನು ಕುರಿತು ತರಂಗಕ್ಕೆ ಲೇಖನ ಬರೆದೆ. ನಂತರ ಲಂಕೇಶ್ ಪತ್ರಿಕೆಯಲ್ಲಿ : ತರಕಾರಿ ಮಾರುವ ಹೆಂಗಸರ ಬಗ್ಗೆ, ಅವರ ಸಮಸ್ಯೆ, ಸಂಕಟ, ಅಸಹಾಯಕತೆಯ ಬಗ್ಗೆ, ಅವರಿಗೆ ದಿನನಿತ್ಯ ಹಿಂಸೆಕೊಡುವ ಗೂಂಡಾಗಳ ಬಗ್ಗೆ ಲೇಖನ ಬರೆದು ಲಂಕೇಶ್ ಪತ್ರಿಕೆಯಲ್ಲಿ ಪ್ರಕಟಿಸಿದೆ. ಇದರಿಂದ ನನಗೆ ತೊಂದರೇನೂ ಆಯಿತು. ಲೇಖನ ಪ್ರಕಟವಾದ

**ಸಂದರ್ಶಕರು : ಡಾ|| ಎನ್. ಗಾಯತ್ರಿ**

ಮಾರನೇ ದಿನ ಪೊಲೀಸರು ನಮ್ಮ ಮನೆ ಬಾಗಿಲು ಬಡಿದು, 'ಎಲ್ಲಿದ್ದಾನ್ರೀ ಆ ಗೂಂಡಾ, ಹೆಸರು ಬರೀದೇ ನಮ್ಮ ಡಿಪಾರ್ಟ್‌ಮೆಂಟಿಗೆ ಅವಮಾನ ಮಾಡ್ತೀರಾ!' ಅಂತ ದಬಾಯಿಸಿ ಹೋದರು.

**ಹೊಸತು** : ಎಪ್ಪತ್ತು, ಎಂಭತ್ತರ ಸಂದರ್ಭದಲ್ಲಿ ಪ್ರಖರವಾದ ಸ್ತ್ರೀವಾದಿ ಚಳವಳಿಯ ಪರಿಣಾಮ ನಿಮ್ಮ ಬರವಣಿಗೆಯ ಮೇಲೂ ಆಗಿದೆಯೇ ?

**ಗೀತಾ** : ಖಂಡಿತಾ ಆಗಿದೆ. ಬಹುಶಃ ನನ್ನ ಬರವಣಿಗೆಯಲ್ಲಿ ಆದ ಬದಲಾವಣೆಗೂ ಇದು ಕಾರಣವಾಗಿರಬಹುದು.

**ಹೊಸತು** : ಈ ಸ್ತ್ರೀವಾದಿ ಸಾಹಿತ್ಯ ಚಳುವಳಿಯ ಭಾಗವಾಗಿ ನಡೆದ ಮಹಿಳೆಯರ ಬರವಣಿಗೆಯನ್ನು ವಿಶೇಷವಾದ ವಿಮರ್ಶೆಗೆ ಒಡ್ಡಬೇಕೆನ್ನುವ ಧೋರಣೆಯನ್ನು ಕುರಿತ ನಿಮ್ಮ ಪ್ರತಿಕ್ರಿಯೆಯೇನು ?

**ಗೀತಾ** : ವಿಮರ್ಶಕರು ಕೆಲವೊಮ್ಮೆ ಪೂರ್ವಗ್ರಹಪೀಡಿತರಾಗಿ ವರ್ತಿಸುತ್ತಾರೆ. ಅದ್ಯಾಕೋಪ್ಪ ನನಗೆ ಗೊತ್ತಿಲ್ಲ ಪುಸ್ತಕ ಓದದೆ, ಲೇಖಕಿಯರ ಸಾಹಿತ್ಯವನ್ನು ಪಕ್ಕಕ್ಕೆ ಸರಿಸಿಬಿಡುತ್ತಾರೆ.

**ಹೊಸತು** : ಈಗ ಈ ಎಲ್ಲಾ ಪ್ರಶಸ್ತಿಗಳು ಬಂದ ಮೇಲೂ ನಿಮಗೆ ಹಾಗೆನಿಸುತ್ತದೆಯೇ ?

**ಗೀತಾ** : ಇಲ್ಲ, ಮುಂಚೆ ಅಂತಹ ಅಭಿಪ್ರಾಯ ಇತ್ತೇನೋ! ಇಲ್ಲಿ ಗಿರಡ್ಡಿ ಗೋವಿಂದರಾಜ ಅವರು ಇದ್ದರಲ್ಲ, ಅವರೊಡನೆ ನಾನು ಯಾವಾಗಲೂ ಸಾಹಿತ್ಯದ ಚರ್ಚೆ ಮಾಡುತ್ತಿದ್ದೆ. 'ನೀವು ಹೆಣ್ಣುಮಕ್ಕಳ ಪುಸ್ತಕ ಓದದೆ ಅದರ ಬಗ್ಗೆ ಮಾತಾಡ್ತೀರಲ್ಲಾ' ಅಂತ ಅನ್ನುತ್ತಿದ್ದೆ. ಅವರು ಯಾವಾಗಲೂ ಹೆಣ್ಣುಮಕ್ಕಳ ಸಾಹಿತ್ಯವೆಂದರೆ 'ಉಪ್ಪಿಟ್ಟು ಬಾಳೆಹಣ್ಣಿನ ಸಾಹಿತ್ಯ' ಅಂತಿದ್ರು. ಆಗ ನಾನು 'ನಾವು ಬರಿ ಉಪ್ಪಿಟ್ಟು ಅಷ್ಟೇ ಅಲ್ಲ, ಹಸಿಮಾಂಸದ ಬಗೆಗೂ ಬರೆಯುತ್ತೀವಿ', ಅಂತ ಹೇಳಿದೆ. ನನ್ನ 'ಬದುಕು' ಕಾದಂಬರಿಯನ್ನು ಅವರೂ ಓದಿ ಮೆಚ್ಚಿಕೊಂಡರು.

**ಹೊಸತು** : ಮೇಡಂ, ನಿಮ್ಮ ಕಾದಂಬರಿಗಳಲ್ಲಿ ಬರುವ ಸುಮಾರು ಎಚ್ಚೆತ್ತ ಮಹಿಳಾ ಪಾತ್ರಗಳೆಲ್ಲ – ಉದಾಹರಣೆಗೆ 'ಬದುಕು' ಕಾದಂಬರಿಯ ತುಳಜ, ದಂಗೆ ಕಾದಂಬರಿಯ ಸಾತಿ, ಮುಂತಾದವರು ತಮ್ಮ ಸ್ವಯಂ ಶಕ್ತಿಯಿಂದಲೇ ತಮ್ಮ ಬಿಡುಗಡೆ ಕಂಡುಕೊಂಡವರು. ಅಂದರೆ, ವ್ಯಕ್ತಿಯ ಬಿಡುಗಡೆಯಲ್ಲಿ ಸಾಮೂಹಿಕ ಪ್ರಯತ್ನಗಳು, ಸಾಮಾಜಿಕ ಚಳುವಳಿ, ಇಂತಹವುಗಳ ಅಗತ್ಯದ ಬಗ್ಗೆ ನೀವು ಎಲ್ಲೋ ಮೌನವಾಗಿದೀರ.

**ಗೀತಾ** : ಅಲ್ಲ ಗಾಯತ್ರಿ, ಈಗ ನಮ್ಮನ್ನು ನಾವೇ ಉದ್ಧಾರ ಮಾಡಿಕೋಬೇಕು. ಬೇರೆಯವರು ಬಂದು ಉದ್ಧಾರ ಮಾಡುತ್ತಾರೆ ಅಂತ ಹೇಳಕ್ಕಾಗಲ್ಲ. ಈಗ ನನ್ನ ಕಾದಂಬರಿಯಲ್ಲೂ ಒಬ್ಬರು 'ಜೋಗತಿ' ಆದರೂ ಆ ಪದ್ಧತಿ ಬಿಟ್ಟು ಓಡಿ ಹೊಸ ಜೀವನ ನಡೆಸುತ್ತಾಳೆ, ಇನ್ನೊಬ್ಬಳು ಅಷ್ಟು ಧೈರ್ಯವಿಲ್ಲದ್ದರಿಂದ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. 'ಹಸಿಮಾಂಸ ಮತ್ತು ಹದ್ದು' ಕೃತಿಯಲ್ಲಿ ನಾಯಕಿ ಕೊನೆಗೆ ಅತ್ಯಂತ ಉಗ್ರವಾದ ಕ್ರಮ ತೆಗೆದುಕೊಳ್ಳುತ್ತಾಳೆ. ಹುಟ್ಟಿದ ಗಂಡುಮಗುವನ್ನು ತಾನೇ ಕೈಯಾರೆ ಕೊಲ್ಲುತ್ತಾಳೆ. ತನ್ನ ಬದುಕಿನಲ್ಲಿ ಬಂದ ಗಂಡಂದಿರೆಲ್ಲಾ ಅವಳಿಗೆ ಮಾಡಿದ ಅನ್ಯಾಯ ಕಂಡು ರೋಸಿಹೋಗಿ, ತನ್ನ ಮಗನೂ ಮುಂದೆ ಹೆಣ್ಣಿಗೆ ಅಂತಹುದೇ ನೋವು ಕೊಡಬಹುದು, ಎಂಬ ವಿಪರೀತ ನಿರ್ಧಾರ ತೆಗೆದುಕೊಳ್ಳುತ್ತಾಳೆ.

**ಹೊಸತು** : ಈ ಹಿನ್ನೆಲೆಯಲ್ಲಿ ಮಹಿಳಾ ಚಳುವಳಿ ಮತ್ತು ದಲಿತ ಚಳುವಳಿಯನ್ನು ಕುರಿತು ಒಂದೆರಡು ಪ್ರಶ್ನೆಗಳು ಇವೆ. ಇವತ್ತಿನ ಮಹಿಳಾ ಚಳುವಳಿಯ ಸ್ವರೂಪ ಮತ್ತು ಹಿಡಿದ ಹಾದಿ ಇವುಗಳ ಬಗ್ಗೆ ನಿಮಗೇನನ್ನಿಸುತ್ತೆ ?

**ಗೀತಾ** : ಮಹಿಳಾ ಚಳುವಳಿ ಈಗ ನಮ್ಮ ಸುತ್ತಮುತ್ತ ನಡೆಯುವುದನ್ನು ಗಮನಿಸಿ ಹೇಳುವುದಾದರೆ ಅವರ ಹೋರಾಟದ ವಿಷಯಗಳು – ಇವುಗಳಿಂದ ಲಾಭ ಆಗುತ್ತಿದೆ. ಆದರೆ ಎಷ್ಟಾಗಬೇಕೋ ಅಷ್ಟು ಆಗುತ್ತಿಲ್ಲ. ಈ ಜನವಾದಿ ಮಹಿಳಾ ಚಳುವಳಿ – ಇವರುಗಳು ನಗರದಲ್ಲಿ, ಹಳ್ಳಿಗಳಲ್ಲೂ ಹೋಗಿ ಕೆಲಸ ಮಾಡ್ತಿದ್ದಾರೆ. ಸೀಮಿತವಾಗಿ ಕೆಲಸ ಮಾಡ್ತಿದ್ದಾರೆ. ಆದರೂ ಇನ್ನೂ ವಿಶಾಲವಾದ ವೇದಿಕೆಯಲ್ಲಿ, ಹೆಚ್ಚು ಹೆಚ್ಚು ಮಹಿಳೆಯರನ್ನು ಮತ್ತು ಮಹಿಳಾ ಸಂಘಟನೆಗಳನ್ನೂ ಸೇರಿಕೊಂಡು ಮಾಡಿದರೆ ಆಗ ಹೆಚ್ಚು ಪರಿಣಾಮಕಾರಿಯಾಗಿರುತ್ತೆ.

**ಹೊಸತು** : ಅಂದರೆ, ವಿಶೇಷವಾಗಿ ದಲಿತ ಮಹಿಳಾ ಚಳುವಳಿಯ ಅವಶ್ಯಕತೆ ಇದೆಯೆಂದು ನಿಮಗೆ ಅನಿಸುತ್ತದೆಯೆ ?

**ಗೀತಾ** : ಖಂಡಿತ ಇಲ್ಲ. ಎಲ್ಲ ಮಹಿಳೆಯರೂ ಒಟ್ಟಾಗಿ ಹೋರಾಟ ಮಾಡಬೇಕು. ಅದೂ ಕೆಳಜಾತಿ ಮಹಿಳೆಯರಿಗೆ ಅನುಕೂಲವಾಗುವಂತಹ ವಿಷಯಗಳನ್ನು ಅವರದೇ ವಿಶಿಷ್ಟ ಸಮಸ್ಯೆಗಳನ್ನು ಹೆಚ್ಚು ಕೇಂದ್ರೀಕರಿಸಿ ಎಲ್ಲ ಮಹಿಳೆಯರು ಹೋರಾಟ ನಡೆಸಬೇಕು.

**ಹೊಸತು** : ಈಗ ನಮ್ಮ ಮುಂದೆ ಕಾಣುತ್ತಿರುವ ದಲಿತ ಚಳುವಳಿಯ ಗತಿ ಮತ್ತು ಸ್ವರೂಪದ ಬಗ್ಗೆ ಏನನ್ನಿಸುತ್ತೆ ?

**ಗೀತಾ** : ಈಗ ದಲಿತ ಚಳವಳಿ ಎಲ್ಲಿದೆ? ಆರಂಭದಲ್ಲಿ ಕಂಡ ಪ್ರಖರತೆಯೇ ಈಗ ಕಂಡುಬರುವುದಿಲ್ಲ. ಅದು ಬಂಡಾಯ ಚಳುವಳಿಗೂ ಅನ್ವಯಿಸುವ ಮಾತು. ಅವರ ರೋಷ, ಆಕ್ರೋಶ, ಘೋಷಣೆಗಳು ಎಲ್ಲ ಮುಗಿದುಹೋಗಿವೆ. ಅಥವಾ ಅವೆಲ್ಲ ಆರಂಭದಲ್ಲಿ ಅಗತ್ಯವೇನೋ! ಈ ಚಳುವಳಿಯಲ್ಲಿ ಮೂಡಿಬಂದವರು ವೈಚಾರಿಕವಾಗಿ ಮೇಲಕ್ಕೆ ಬಂದು ಬೆಳೆದಿದ್ದಾರೆ. ಅದು ಈಗಿನ ಹಂತ ಅಂತ ಅನ್ನಿಸತ್ತೆ.

**ಹೊಸತು** : ಹಾಗೆ ಆದರೆ, ಅದು ಒಳ್ಳೆಯದೇ ಅಲ್ವೆ. ಆದರೆ ಈ ಚಳವಳಿಗಳ ನೇತಾರರ ಬಗ್ಗೆ ಈಗ ಇರುವ ಆರೋಪವೆಂದರೆ, ಚಳುವಳಿ ಮಾಡಿದವರು, ವ್ಯವಸ್ಥೆಯನ್ನು ವಿರೋಧಿಸಿದವರು ವ್ಯವಸ್ಥೆಯ ಭಾಗವಾಗಿದಾರೆ ಅಂತ. ಏನು ಹೇಳ್ತೀರಾ ?

**ಗೀತಾ** : ಒಂದು ರೀತೀಲಿ ನಿಜ. ಈ ವ್ಯವಸ್ಥೆಯ ಗುಣವೇ ಹಾಗಲ್ಲವಾ. ಈ ವ್ಯವಸ್ಥೇನ ವಿರೋಧಿಸಿದವರನ್ನು ಬಾಯಿ ಮುಚ್ಚಿಸಿಬಿಡುತ್ತದೆ.

**ಹೊಸತು** : ಇನ್ನು ಮೀಸಲಾತಿಯ ಲಾಭವನ್ನು ಪಡೆದ ಎಚ್ಚೆತ್ತ ಜನರು ತಮ್ಮ ಸಮೂಹವನ್ನು, ಸಮುದಾಯವನ್ನು ಬೆಳವಣಿಗೆಯ ಹಾದಿಯತ್ತ ಒಯ್ಯಲು ಏನು ಪ್ರಯತ್ನ ಮಾಡ್ತಿದಾರೆ ?

**ಗೀತಾ** : ಮೀಸಲಾತಿ ಸೌಲಭ್ಯ ಬಳಸಿಕೊಂಡು ಮುಂದುವರಿದಿದ್ದರೆ ಈಗ ಬದಲಾದಷ್ಟು ಪ್ರಗತಿ ಆಗಬೇಕಿತ್ತು. ಆದರೆ ಆಗಿಲ್ಲ. ಒಮ್ಮೆ ಮೀಸಲಾತಿಯ ಲಾಭ ಪಡೆದು ಮುಂದೆ ಬಂದವರೂ ಕೂಡ ತಾವು ಮಾತ್ರ ಮುಂದುವರೀಬೇಕು, ಉಳಿದವರು ಬೆಳೀಬಾರದು ಅಂತಲೇ ತಿಳೀತಾರೆ. ಎಲ್ಲರೂ ಹಾಗಲ್ಲ. ಆದ್ದರಿಂದ ಸಾಮಾಜಿಕ ಎಚ್ಚರ ಸ್ವಲ್ಪ ಕಡಿಮೆಯೇ. ನೀವು ಏನೇ ಹೇಳಿ ನನ್ನ ಮಟ್ಟಿಗೆ ಸ್ವಂತ ಬುದ್ಧಿ, ವೈಚಾರಿಕ ಜಾಗೃತಿ ಹೆಚ್ಚಿಸಿಕೊಳ್ಳುವುದರಿಂದಲೇ ಸಮಸ್ಯೆಗೆ ಪರಿಹಾರ ಕಂಡುಕೊಳ್ಳಬಹುದು ಮತ್ತು ಮುಂದುವರಿಯಬಹುದು ಎನ್ನುವುದು ನನ್ನ ಅಚಲ ವಿಶ್ವಾಸ.

* * *

ಗೀತಾ ಅವರ ಮನೆಯಲ್ಲಿ ಫಲಹಾರ, ಮಾತು ಮತ್ತು ಸ್ನೇಹ, ಎಲ್ಲದರ ಜೊತೆಗೆ ಗುಲ್ಬರ್ಗಾದ ಜನಜೀವನದ ತುಣುಕು ವಿಶೇಷವಾಗಿ ಸಿಕ್ಕಿತು. ಬದುಕಿನಲ್ಲಿ ಗಂಡನೊಂದಿಗಿನ ಸುಖ ಅವರಿಗೆ ಸೊನ್ನೆಯಾದರೂ ಮಮತಾಮಯಿಗಳಾದ ಮಗ-ಸೊಸೆ, ಮಗಳು-ಅಳಿಯಂದಿರೊಂದಿಗೆ ಸಂತೋಷದಿಂದ ಬದುಕುತ್ತಿರುವ ಗೀತಾ ಅವರನ್ನು ಕಂಡು ಸಂತೋಷವಾಯಿತು. ಅವರಿಗೆ ಇನ್ನೂ ಹೆಚ್ಚಿನ ಸಾಧನೆಯ ಗೌರವ ಸಿಗಲಿ ಎಂದು ಹಾರೈಸುತ್ತಾ ಅವರಿಂದ ಬೀಳ್ಕೊಂಡೆವು. ಜೊತೆಗಿದ್ದ ಜನವಾದಿ ಮಹಿಳಾ ಸಂಘಟನೆಯ ಗೆಳತಿಯರು ನಮ್ಮ ಸಂತೋಷಕ್ಕೆ ದನಿಗೂಡಿಸಿದರು.

**ಡಾ॥ ಎನ್. ಗಾಯತ್ರಿ**
ನಂ. ೧೦೮, 'ಸ್ಕೈಲೈನ್ ಸುರಭಿ', ವಿದ್ಯಾಪೀಠ ರಸ್ತೆ, ಬೆಂಗಳೂರು - ೫೬೦ ೦೮೫

# ಬಸವಣ್ಣ ಮತ್ತು ಶ್ರಮಜೀವಿ ಚಳವಳಿ ಒಂದು ಮರು ಓದು

ವೈ. ಗ. ಜಗದೀಶ್

ಚರಿತ್ರೆ, ನಂಬಿಕೆ, ಸಾಹಿತ್ಯ, ಪುರಾಣ, ಧಾರ್ಮಿಕತೆ... ಹೀಗೆ ವಿವಿಧ ಎಳೆಗಳಲ್ಲಿ ಸಿಕ್ಕಿಹಾಕಿಕೊಂಡ ಬಸವಣ್ಣನವರ ವ್ಯಕ್ತಿತ್ವ ಇದಮಿತ್ಥಂ ಎಂದು ಹೇಳುವಷ್ಟು ಸರಳವಾಗಿಲ್ಲ. ಕುರುಡನೊಬ್ಬ ಆನೆಯನ್ನು ವರ್ಣಿಸಿದ ರೀತಿಯಲ್ಲಿಯೇ, ಬಸವಣ್ಣನವರನ್ನು ತಮಗೆ ದಕ್ಕಿದಂತೆ ಕಟ್ಟಿಕೊಟ್ಟವರಿದ್ದಾರೆ. ಈ ಪ್ರಯತ್ನ ರಗಳೆ ಕವಿ ಹರಿಹರನ ಬಸವಪುರಾಣದಿಂದಲೇ ಮೊದಲಾಗುತ್ತದೆ. ಈ ಎಲ್ಲಾ ಪ್ರಯತ್ನಗಳ ಫಲಿತವನ್ನು ಜತೆಗಿಟ್ಟುಕೊಂಡೇ, ಆ ಎಲ್ಲ ಬೆಳಕುಗಳ ಸಾರವನ್ನು ಬಳಸಿಯೇ, ಚರಿತ್ರೆಯ ಗತಿಯಲ್ಲಿ ಬಸವಣ್ಣನವರ ಹಾಗೂ ಅವರ ಚಳವಳಿಯ ಒಟ್ಟಾರೆ ಮಹತ್ವವನ್ನು ವಿಶ್ಲೇಷಿಸುವುದು ಹೆಚ್ಚು ಸಂಗತವೆನಿಸುತ್ತದೆ.

**ಊಳಿಗಮಾನ್ಯ ವ್ಯವಸ್ಥೆ - ಮಾರುಕಟ್ಟೆ ವಿಸ್ತರಣೆ**

ಪುರೋಹಿತಶಾಹಿ ಬ್ರಾಹ್ಮಣರು, ಜಮೀನ್ದಾರಿ ಮಠಗಳು, ಅವರಿಗೆ ರಕ್ಷಣೆ ನೀಡುತ್ತಿದ್ದ ರಾಜರು ಹಾಗೂ ಇವರೆಲ್ಲರ ಸಾಧನವಾದ ಧರ್ಮ; ಇವುಗಳಿಂದಾಗಿ ಸಾಮಾನ್ಯ ಜನಸಮುದಾಯವು ಶೋಷಣೆಗೆ ಒಳಪಟ್ಟಿತ್ತು. ಈ ಪಟ್ಟಭದ್ರ ಊಳಿಗಮಾನ್ಯ ವರ್ಗದ ಬಿಗಿಮುಷ್ಟಿಯಲ್ಲಿ ಸಿಲುಕಿ ನಲುಗಿದ್ದ ಕುಶಲಕರ್ಮಿಗಳು, ಸೇವೆ ಮಾಡುವ ಜಾತಿಗಳು (ಸೇವಾಕಾರವರ್ಗ) ಮತ್ತು ಆಗಷ್ಟೆ ಬೆಳೆಯುತ್ತಿದ್ದ ವ್ಯಾಪಾರಿ ವರ್ಗ ಬಿಡುಗಡೆಯ ಆಸೆಯಿಂದ ಈ ಶೋಷಣೆಯ ವಿರುದ್ಧ ಬಂಡೆದ್ದಿತು. ಈ ಸ್ವಾತಂತ್ರ್ಯದ ಅಭಿಲಾಷೆಯೇ ಕರ್ನಾಟಕದ ಊಳಿಗಮಾನ್ಯ ಸಮಾಜದಲ್ಲಿ ಕಾಣಿಸಿಕೊಂಡ ಮೊದಲ ಬಿರುಕು ಎನ್ನಬಹುದು.

ಈ ಸಂಕ್ರಮಣಕ್ಕೆ ನಾಯಕತ್ವ ನೀಡಿದವರೇ ಬಸವಣ್ಣ ಮತ್ತಿತರ ವಚನಕಾರರು. ಒಂದು ಕಾಲ ಗರ್ಭದ ಒತ್ತಡದಿಂದಾಗಿ ಜನತೆಯಲ್ಲಿ ಅನೇಕ ಆಶೋತ್ತರಗಳು ಒಡಮೂಡುತ್ತವೆ. ಈ ಆಶೋತ್ತರಗಳನ್ನು ಸಾಕಾರಗೊಳಿಸಬಲ್ಲ, ಜನರ ಅಭೀಪ್ಸೆಗಳನ್ನು ಪ್ರತಿನಿಧಿಸಬಲ್ಲ ಓರ್ವ ನಾಯಕನ ಅಗತ್ಯವೂ ಆ ಪ್ರಕ್ರಿಯೆಯಿಂದಾಗಿ ಮೂಡಿಬರುತ್ತದೆ. ಜನತೆಯ ಹಂಬಲದ ಪ್ರತೀಕವಾದ ಆ ವ್ಯಕ್ತಿಯ ವರ್ಗ ಹಿನ್ನೆಲೆ, ಬುದ್ಧಿಮತ್ತೆ, ಹೋರಾಟದ ಕೆಚ್ಚು ಇವುಗಳ ಮೇಲೆ ಆತ ಮುನ್ನಡೆಸುವ ಚಳವಳಿಯ ಸಫಲತೆ-ವಿಫಲತೆ ಅವಲಂಬಿಸಿರುತ್ತದೆ. ಹನ್ನೆರಡನೇ ಶತಮಾನದಲ್ಲಿ ಜನತೆಯ ಒಮ್ಮುಖದ ಅಪೇಕ್ಷೆಯ ದನಿಯಾಗಿ ಬೆಳಗಿದ್ದು ಬಸವಣ್ಣ. ಅದೇ ನಿಟ್ಟಿನಲ್ಲಿ, ಆಧುನಿಕ ಯುಗದಲ್ಲಿ ಲೆನಿನ್, ಸ್ಟಾಲಿನ್, ಗಾಂಧೀಜಿ, ಅಂಬೇಡ್ಕರ್... ಹೀಗೆ ಹೆಸರಿಸುತ್ತಾ ಹೋಗಬಹುದು.

೧೧-೧೨ನೇ ಶತಮಾನದಲ್ಲಿ ಇಂದಿನಂತೆ ಸ್ವಾತಂತ್ರ್ಯ, ಸಮಾನತೆಯ ಕಲ್ಪನೆಯಿರಲಿಲ್ಲ. ಊರೆಲ್ಲವೂ ಊಳಿಗಮಾನ್ಯ ಭೂಮಾಲೀಕರಂತಿದ್ದ ಮಠಗಳ ಉಸ್ತುವಾರಿಯಲ್ಲಿದ್ದವು. ಆಸ್ತಿಯ ಪೂರ್ಣ ಹಕ್ಕನ್ನು ಹೊಂದಿದ್ದ ಮಠಗಳು ಸಮಾಜದ ರೀತಿ ರಿವಾಜುಗಳನ್ನು ರೂಪಿಸಿ, ಆಳ್ವಿಕೆ ನಡೆಸುತ್ತಿದ್ದವು.

ಈ ಶೋಷಕರಲ್ಲಿ ಬ್ರಾಹ್ಮಣಮಠ ಹಾಗೂ ಶೈವಮಠಗಳು ಪ್ರಮುಖವಾಗಿದ್ದವು. ರಾಜನಿಗಿಂತ ಹೆಚ್ಚು ಆಸ್ತಿಯನ್ನು ಹೊಂದಿದ್ದ ಕೆಲವು ಮಠಗಳು ಪ್ರಬಲವಾಗಿ ಆಡಳಿತ ನಡೆಸುತ್ತಿದ್ದರೆ, ಕೆಲವೊಮ್ಮೆ ರಾಜರನ್ನು ನಿಯಂತ್ರಣದಲ್ಲಿಟ್ಟುಕೊಳ್ಳುವ ರಾಜಗುರು ಸ್ಥಾನಗಳಂತೆಯೂ ಇದ್ದವು. ಧಾರವಾಡ ಜಿಲ್ಲೆಯ ಸೊಂಡಿ ಅಕ್ಕೇಶ್ವರ ದೇವಾಲಯದಲ್ಲಿ ೧೦೦೦ ಮಂದಿ ಕೆಲಸಗಾರರಿದ್ದರೆ, ಚಿಕ್ಕಮಗಳೂರಿನ ಶೃಂಗೇರಿಮಠವೂ ಭಾರೀ ಜಹಗೀರನ್ನು ಹೊಂದಿ ಆಳ್ವಿಕೆ ನಡೆಸುತ್ತಿತ್ತು. ಈ ರೀತಿಯ ನೂರಾರು ಮಠಗಳು ಬಡ್ಡಿ ಲೇವಾದೇವಿ, ಭಾರೀ ಜಮೀನಿನ ಒಡೆತನ ಮತ್ತು ನೂರಾರು ಕುಶಲ ಕೆಲಸಗಾರರ ಒಡೆತನವನ್ನು ಹೊಂದಿದ್ದವು. ಅಭಿವೃದ್ಧಿ ಹಾಗೂ ಸಮಾಜದ ಗತಿಶೀಲತೆಗೆ ಕಾರಣವಾಗಬಹುದಾದ ಎಲ್ಲ ಸ್ತರಗಳ ಮೇಲಿನ ಹಿಡಿತವೂ ಈ ಮಠಗಳ ಕೈಯಲ್ಲಿದ್ದುದರಿಂದ ಜನರ ದೃಷ್ಟಿಯಲ್ಲಿ ಇವು ಪ್ರತಿಗಾಮಿಯಾಗಿದ್ದವು. ಕೆಲವು ಮಠಗಳ ಸ್ಥಾನಪತಿಗಳು ಎಲ್ಲಾ ರೀತಿಯ ದುರ್ವ್ಯಸನಗಳ ದಾಸರಾಗಿ ಲಂಪಟರಾಗಿದ್ದರು. ಅಡವಿಟ್ಟ ಹೊಲಗಳನ್ನು ವಶಪಡಿಸಿಕೊಳ್ಳುತ್ತಾ, ಆಸ್ತಿಗೆ ವಾರಸುದಾರರಿಲ್ಲದಿದ್ದಾಗ ಅದನ್ನು ಮುಟ್ಟುಗೋಲು ಹಾಕಿಕೊಳ್ಳುತ್ತಾ ನ್ಯಾಯಾಲಯದಂತೆಯೂ ಈ ಮಠಗಳು ವರ್ತಿಸುತ್ತಿದ್ದವು.

ಮಠಗಳು ಹಾಗೂ ಅದರ ಪೋಷಕರಾಗಿದ್ದ ರಾಜರು ಸಾಮಾನ್ಯ ಜನತೆಯ ಮೇಲೆ ಅಪಾರ ತೆರಿಗೆಯನ್ನು ಹೇರಿ ಜೀವನವನ್ನು ಸಂಕಷ್ಟಕ್ಕೆ ಗುರಿಮಾಡಿದ್ದರು. ಅಕ್ಕಸಾಲಿಗರು, ನಾಯಿಂದರು, ಅಂಬಿಗರು, ಅಗಸರು, ಕಮ್ಮಾರರು, ಕುಂಬಾರರು, ಉಪ್ಪಾರರು, ಬಳೆಗಾರರು, ಚಮ್ಮಾರರು ಎಲ್ಲರೂ ಸುಂಕದ ಹೊರೆಯಿಂದ ಕಂಗೆಟ್ಟಿದ್ದರು. ತೆರಿಗೆಗಳಲ್ಲಿ ನೂಲುದೆರೆ, ಬಣ್ಣದೆರೆ, ಮಗ್ಗದೆರೆ, ಗಾಣದೆರೆ, ಕುಲುಮೆದೆರೆ, ಮೇದದೆರೆ, ಇವಿಷ್ಟಲ್ಲದೆ

> ಕನ್ನಡ ನೆಲದ ಪ್ರತಿಭಟನಾ ಪರಂಪರೆಯಲ್ಲಿ ಹನ್ನೆರಡನೇ ಶತಮಾನವು ಕ್ರಾಂತಿಕಾರಿ ಸ್ಥಿತ್ಯಂತರದ ಒಂದು ಕಾಲಘಟ್ಟ. ಅವಸ್ಥಾಂತರದಲ್ಲಿದ್ದ ಸಮಾಜವೊಂದನ್ನು ಪುರೋಗಾಮಿಯಾಗಿ ಕೊಂಡೊಯ್ಯುವುದಕ್ಕೆ ನೇತೃತ್ವ ವಹಿಸಿದವರು ಬಸವಣ್ಣನವರು. ಬಸವಣ್ಣನವರನ್ನು ಮಂತ್ರಿಯೆಂದೂ, ಧಾರ್ಮಿಕ ಪರಂಪರೆಯೊಂದರ ಪ್ರವರ್ತಕರೆಂದೂ, ವಚನ ಸಾಹಿತ್ಯ ಚಳುವಳಿಯ ಮೂಲಸ್ರೋತವೆಂದೂ, ಪವಾಡಪುರುಷರೆಂದೂ, ದೈವಾಂಶಸಂಭೂತರೆಂದೂ, ಕಾಯಕಜೀವಿಗಳ ಚಳುವಳಿಯ ಅಗ್ರನೇತಾರರೆಂದೂ ಪರಿಭಾವಿಸುವ ಹಲವು ಶಿಸ್ತಿನ ಜನರಿದ್ದಾರೆ.





# ಎಂ. ಎಸ್. ಕೃಷ್ಣನ್ ಸ್ಮರಣ ಸಂಸ್ಥೆ (ನೋಂ.)

(ನೋಂದಣಿ ಸಂಖ್ಯೆ : ಜಿಎಎನ್-4-00223-2004-05/25.08.2004)
ಸಂಖ್ಯೆ 15, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - 560 001
ದೂರವಾಣಿ / ಫ್ಯಾಕ್ಸ್ : 22203580/81 e-mail: msktrust@rediffmail.com

## ವಿನಮ್ರ ಮನವಿ

ಕಾರ್ಮಿಕ ವರ್ಗದ ಮುಂದಾಳು, ಭಾರತ ಕಮ್ಯುನಿಸ್ಟ್ ಪಕ್ಷದ ಅದ್ವಿತೀಯ ನಾಯಕ ಹಾಗೂ ಮೂರು ಬಾರಿ ರಾಜ್ಯದ ವಿಧಾನಸಭೆಯ ಸದಸ್ಯರಾಗಿ ನಿಸ್ವಾರ್ಥ ಸೇವೆ ಸಲ್ಲಿಸಿದ ದಿ|| ಎಂ. ಎಸ್. ಕೃಷ್ಣನ್ ಕರ್ನಾಟಕದ ಎಲ್ಲ ವಿಭಾಗಗಳ ಜನತೆಗೆ ಪರಿಚಿತರಾಗಿದ್ದವರು.

ಮಾಜಿ ಸಂಸತ್ ಸದಸ್ಯರು, ಶಾಸಕರು ಆಗಿದ್ದ ರಾಜ್ಯದ ಕಮ್ಯುನಿಸ್ಟ್ ಚಳುವಳಿಯ ರೂವಾರಿ ಶ್ರೀ ಬಿ. ವಿ. ಕಕ್ಕಿಲ್ಲಾಯ, ಖ್ಯಾತ ಸಾಹಿತಿ ಶ್ರೀ ವ್ಯಾಸರಾಯ ಬಲ್ಲಾಳ, ಶಿಕ್ಷಕರು ಮತ್ತು ವಿಜ್ಞಾನ ಸಾಹಿತ್ಯ ಬರಹಗಾರರೂ ಆದ ಪ್ರೊ|| ಜೆ. ಆರ್. ಲಕ್ಷ್ಮಣರಾವ್, 'ಹೊಸತು' ತಿಂಗಳ ಪತ್ರಿಕೆಯ ಸಂಪಾದಕರು, ಲೇಖಕರು, ವಿಚಾರವಾದಿಗಳೂ ಆದ ಡಾ|| ಜಿ. ರಾಮಕೃಷ್ಣ, ನವಕರ್ನಾಟಕ ಪ್ರಕಾಶನ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ಆರ್. ಎಸ್. ರಾಜಾರಾಮ್, ಮಾಜಿ ಶಾಸಕರು, ಹಿರಿಯ ವಕೀಲರು ಮತ್ತು ಎ.ಐ.ಟಿ.ಯು.ಸಿ ಕಾರ್ಮಿಕ ಸಂಘಟನೆಯ ನಾಯಕರಾದ ಶ್ರೀ ಎಂ. ಸಿ. ನರಸಿಂಹನ್, ಶ್ರೀಮತಿ ಪುಷ್ಪಾ ಕೃಷ್ಣನ್ ಮತ್ತು ಕರ್ನಾಟಕ ಪತ್ರಕರ್ತರ ಸಂಘದ ಸಂಸ್ಥಾಪಕ ಸದಸ್ಯರಲ್ಲೊಬ್ಬರಾದ ಹಿರಿಯ ಪತ್ರಕರ್ತ ಶ್ರೀ ಸಿ. ಆರ್. ಕೃಷ್ಣರಾವ್, ಸಮಾಜ ಸೇವಾಕರ್ತ, ಭಾರತ ಸರಕಾರದಲ್ಲಿ ಟೆಲಿಕಾಂ ಇಂಜಿನಿಯರ್ ಆಗಿ ಸೇವೆ ಸಲ್ಲಿಸಿ ನಿವೃತ್ತರಾಗಿರುವ ಶ್ರೀ ಕೆ. ಎಸ್. ಪಾರ್ಥಸಾರಥಿ, ಇವರು ಈ ಸ್ಮರಣ ಸಂಸ್ಥೆಯ ಸಂಸ್ಥಾಪಕರಾಗಿದ್ದಾರೆ.

ಸಂಸ್ಥೆಯು ಈಗ ಹನ್ನೆರಡು ಮಂದಿ ಟ್ರಸ್ಟಿಗಳನ್ನು ಹೊಂದಿದ್ದು ಈ ಕೆಳಗೆ ಹೆಸರಿಸಿದವರು ಪದಾಧಿಕಾರಿಗಳಾಗಿದ್ದಾರೆ :

1. ಶ್ರೀ ಕೋ. ಚೆನ್ನಬಸಪ್ಪ - ಅಧ್ಯಕ್ಷರು
2. ಶ್ರೀ ಕೆ. ಎಸ್. ಪಾರ್ಥಸಾರಥಿ - ಕಾರ್ಯನಿರ್ವಾಹಕ ಟ್ರಸ್ಟಿ
3. ಶ್ರೀ ಕೆ. ಶ್ರೀನಿವಾಸಮೂರ್ತಿ - ಖಜಾಂಚಿ

ಇತರ ಟ್ರಸ್ಟಿಗಳು : ಶ್ರೀಮತಿ ಸುರೇಖ ಶೆಟ್ಟಿ, ಶ್ರೀಯುತರಾದ ಮುರಳೀಧರ, ಆರ್. ಎಸ್. ರಾಜಾರಾಮ್, ಚಿ. ಶ್ರೀನಿವಾಸರಾಜು, ಸಿದ್ದನಗೌಡ ಪಾಟೀಲ, ಎಚ್. ವಿ. ಅನಂತಸುಬ್ಬ ರಾವ್, ಎಸ್. ಸುರೇಂದ್ರ, ಎ. ರಮೇಶ ಉಡುಪ, ಎಂ. ಡಿ. ಹರಿಗೋವಿಂದ್.

ಎಂ. ಎಸ್. ಕೃಷ್ಣನ್ ಅವರು ಜೀವನವಿಡೀ ದುಡಿದು ಕನಸುಕಂಡ, ಹಂಬಲಿಸಿದ ಆಶಯಗಳನ್ನು ಕಾರ್ಯರೂಪಕ್ಕೆ ತರುವ ನಿಟ್ಟಿನಲ್ಲಿ ಅರ್ಥಪೂರ್ಣ ಯೋಜನೆಗಳು ಹಾಗೂ ಕ್ರಿಯಾಶೀಲ ಚಟುವಟಿಕೆಗಳನ್ನು ಹಮ್ಮಿಕೊಳ್ಳುವ ಧ್ಯೇಯೋದ್ದೇಶಗಳನ್ನು ಸ್ಮರಣ ಸಂಸ್ಥೆ ಹೊಂದಿದೆ.

ವೃದ್ಧಾಶ್ರಮ, ಅಬಲೆಯರು ಮತ್ತು ಬಡಮಕ್ಕಳಿಗೆ ವಸತಿ ಗೃಹವೇ ಅಲ್ಲದೆ ಅವರ ಆರ್ಥಿಕ ಸ್ವಾವಲಂಬನೆಗೆ ಅಗತ್ಯವಾದ ತಾಂತ್ರಿಕ ಶಿಕ್ಷಣ ತರಬೇತಿ, ಸಮಾಜ ವಿಜ್ಞಾನಕ್ಕೆ ಸಂಬಂಧಪಟ್ಟಂತೆ ಸಂಶೋಧನಾ ಕೇಂದ್ರ, ಅನಕ್ಷರತೆ, ಮೂಢನಂಬಿಕೆ, ಅಸ್ಪೃಶ್ಯತೆ ಮುಂತಾದ ಸಾಮಾಜಿಕ ಪಿಡುಗುಗಳ ನಿರ್ಮೂಲನಾ ಕಾರ್ಯಕ್ರಮ, ಭೂಕಂಪ ಪ್ರವಾಹಗಳಂತಹ ಪ್ರಕೃತಿ ವಿಕೋಪಗಳು ಸಂಭವಿಸಿದ ಸಂದರ್ಭಗಳಲ್ಲಿ ನೊಂದ ಸಂತ್ರಸ್ಥರಿಗೆ ನೆರವು – ಇವೇ ಮೊದಲಾದ ಯೋಜನೆಗಳಿಗೆ ಸಂಸ್ಥೆ ಆದ್ಯತೆ ನೀಡುತ್ತದೆ.

ತಮ್ಮ ಕಡೆಯ ದಿನಗಳವರೆಗೂ ಮಾನವೀಯ ಅನುಕಂಪ, ಸಜ್ಜನಿಕೆಗಳಿಂದ ಕೂಡಿದ ಸಾರ್ಥಕ ಬದುಕಿನಿಂದ ಎಂ. ಎಸ್. ಕೃಷ್ಣನ್ ಎಲ್ಲರಿಗೂ ಆತ್ಮೀಯರಾಗಿದ್ದವರು. ಅವರ ಆಶಯ, ಕನಸುಗಳನ್ನು ಕಾರ್ಯರೂಪಕ್ಕೆ ತರಲು ಉದ್ದೇಶಿಸಿರುವ ಎಂ. ಎಸ್. ಕೃಷ್ಣನ್ ಸ್ಮರಣ ಸಂಸ್ಥೆಗೆ ಸಮಾಜದ ಎಲ್ಲ ವಿಭಾಗದ ಜನರು, ಅವರ ಸಂಗಾತಿಗಳು, ಅಭಿಮಾನಿಗಳು ಸಂಸ್ಥೆಯ ಬಗ್ಗೆ ಆದರವಿಟ್ಟು ಉದಾರ ಕೊಡುಗೆ, ಬೆಂಬಲ ಸಹಕಾರಗಳನ್ನು ನೀಡಬೇಕೆಂದು ಮನವಿಮಾಡಿಕೊಳ್ಳುತ್ತೇವೆ. ಚೆಕ್/ಡಿ.ಡಿ./ಎಂ.ಒ.ಗಳನ್ನು **ಎಂ. ಎಸ್. ಕೃಷ್ಣನ್ ಸ್ಮರಣ ಸಂಸ್ಥೆ (ನೋಂ.)** ಅಥವಾ M. S. Krishnan Memorial Trust (Regd.) ಹೆಸರಲ್ಲಿ ಕಳಿಸಿ ಅಥವಾ **ಕೆನರಾ ಬ್ಯಾಂಕ್**, ಮಾಧವನಗರ ಶಾಖೆ, ಬೆಂಗಳೂರು - 560 001 ಇಲ್ಲಿ ಈ ಸಂಸ್ಥೆಯ **ಉಳಿತಾಯ ಖಾತೆ ಸಂಖ್ಯೆ 56309**ಗೆ ಜಮಾ ಮಾಡಬೇಕಾಗಿ ಕೋರಿಕೆ.

ವಿವರಗಳಿಗೆ ಸಂಪರ್ಕಿಸಿ : ಕೆ. ಎಸ್. ಪಾರ್ಥಸಾರಥಿ, ಮೊಬೈಲ್ : 94480 93966
ಇ-ಮೇಯಿಲ್ : kspsarathy@rediffmail.com

(ಕೋ. ಚೆನ್ನಬಸಪ್ಪ)
ಅಧ್ಯಕ್ಷರು

(ಕೆ. ಎಸ್. ಪಾರ್ಥಸಾರಥಿ)
ಕಾರ್ಯನಿರ್ವಾಹಕ ಟ್ರಸ್ಟಿ

ಮದುವೆ, ಚಪ್ಪರ, ಬಾಸಿಂಗದಿಂದ ಹಿಡಿದು ಹುಡುಗಿ ಮೈನೆರೆದರೆ, ಒಡಲಿಟ್ಟರೆ ತೆರಿಗೆ ನೀಡಬೇಕಾಗಿತ್ತು. ತೆರಿಗೆಯ ಹೊರೆ ಎಷ್ಟಿತ್ತೆಂದರೆ ಕೃಷಿಕರ ಜೀವನದ ಅವಿಭಾಜ್ಯ ಅಂಗಗಳಾದ ಎತ್ತು, ಎಮ್ಮೆ, ಹಸು, ಕುರಿ, ಕತ್ತೆ, ಆಡು, ಗಾಡಿ, ಕಡೆಗೆ ತಿಪ್ಪೆಯ ಮೇಲೂ ಸುಂಕ ಪಾವತಿಸಬೇಕಾಗಿತ್ತು. ಅಲ್ಲದೆ ನಾಡ ಹೆಗ್ಗಡೆ, ಆಡಳಿತಾಧಿಕಾರಿಗಳಿಗೆ ಕಾಣಿಕೆ ನೀಡಬೇಕಿತ್ತು. ಸೇವಾಕಾರರು ಮಠಗಳ ಹಾಗೂ ಉಳಿದ ಒಡೆಯರಿಗೆ ಉಚಿತ ಸೇವೆ ಮಾಡಬೇಕಿತ್ತು.

ಕುಶಲಕರ್ಮಿಗಳು ತಮ್ಮ ವೃತ್ತಿಯನ್ನು ಸ್ವತಂತ್ರವಾಗಿ ಮುಂದುವರೆಸಲು ಮತ್ತು ತಾವು ತಯಾರಿಸಿದ್ದನ್ನು ಮಾರಾಟಮಾಡುವ ಅವಕಾಶವಿರಲಿಲ್ಲ. ಆಗತಾನೇ ಬೆಳೆಯುತ್ತಿದ್ದ ವ್ಯಾಪಾರಿವರ್ಗವು ಕುಶಲಕರ್ಮಿಗಳನ್ನು ಪ್ರೋತ್ಸಾಹಿಸಿ ಉತ್ಪಾದನೆ ಹೆಚ್ಚಿಸಲು, ಅವರಿಂದ ಕೊಂಡು ಮಾರಲು ಸಾಧ್ಯವಿರಲಿಲ್ಲ. ಈ ಎಲ್ಲದಕ್ಕೂ ಊಳಿಗಮಾನ್ಯ ದೊರೆಗಳ ಅನುಮತಿ ಬೇಕಿತ್ತು.

ಈ ಮೂರು ವರ್ಗಗಳು (ಕುಶಲಕರ್ಮಿ, ವ್ಯಾಪಾರಿ ವರ್ಗ, ಸೇವಾಕಾರವರ್ಗ) ಪ್ರಬಲವಾಗಿ ಬೆಳೆದು, ತಮ್ಮ ಶೋಷಕರಾಗಿದ್ದ, ತಮ್ಮ ಬೆಳವಣಿಗೆಗೆ ಅಡ್ಡಿಯಾಗಿದ್ದ ಊಳಿಗಮಾನ್ಯ ವ್ಯವಸ್ಥೆಯನ್ನು ವಿರೋಧಿಸುವುದು ಆ ಕಾಲದ ಸಾಮಾಜಿಕ, ಆರ್ಥಿಕ ತುರ್ತಾಗಿತ್ತು. ಅಲ್ಲದೆ, ಆಗತಾನೆ ರೂಪುಗೊಳ್ಳತೊಡಗಿದ್ದ ನಗರೀಕರಣ ಪ್ರಕ್ರಿಯೆಯು ಸರಕಿನ ಬೇಡಿಕೆಯನ್ನು ಯಥೇಚ್ಛವಾಗಿ ಹುಟ್ಟುಹಾಕತೊಡಗಿತು. ಈ ಬಗೆಯ ಸರಕಿನ ಬೇಡಿಕೆಯನ್ನು ಪೂರೈಸಬೇಕಾದರೆ ವ್ಯಾಪಾರಿವರ್ಗವು ತನಗೆ ಅಡ್ಡಿಯಾಗಿದ್ದ ಊಳಿಗಮಾನ್ಯ ವ್ಯವಸ್ಥೆಯ ಹಿಡಿತವನ್ನು ಸಡಿಲಗೊಳಿಸಲೇಬೇಕಿತ್ತು. ಊಳಿಗಮಾನ್ಯ ವ್ಯವಸ್ಥೆಯು ಶೋಷಣೆಗೆ ಬಳಸುತ್ತಿದ್ದ ಧರ್ಮದ ಅಂಧ ಆಚರಣೆಯಲ್ಲಿ ಜನ ಬಸವಳಿದಿದ್ದರು. ಧಾರ್ಮಿಕ ಮೌಢ್ಯತೆ, ಗೊಡ್ಡು ಸಂಪ್ರದಾಯಗಳು ಬದುಕನ್ನು ಅಸಹನೀಯವಾಗಿಸಿದ್ದವು. ಅಸ್ಪೃಶ್ಯತೆಯ ಅವಮಾನದಿಂದ ಬೇಸತ್ತಿದ್ದ ಕೆಳಜಾತಿಯ ಸೇವಾಕಾರವರ್ಗ ಬಿಡುಗಡೆಯ ತಹತಹಿಕೆಯಲ್ಲಿತ್ತು.

ಇದಕ್ಕೆ ಅನುಗುಣವಾಗಿ ಮಂಗಳವೇಡೆ, ಕಲ್ಯಾಣ, ಬಳ್ಳಿಗಾವೆ ಮತ್ತಿತರ ಪ್ರದೇಶಗಳು ವ್ಯಾಪಾರಿ ಕೇಂದ್ರಗಳಾಗಿ ಬೆಳೆಯಲಾರಂಭಿಸಿದ್ದವು. ಊಳಿಗಮಾನ್ಯ ಶೋಷಣೆಯಿಂದ ಕೊರಗುತ್ತಿದ್ದ ಕುಶಲಕರ್ಮಿಗಳು, ಸೇವಾಕಾರರು ಈ ವಾಣಿಜ್ಯ ಕೇಂದ್ರಗಳಲ್ಲಿ ಸೇರಿಕೊಂಡರು. ತಮ್ಮ ಉತ್ಪನ್ನಗಳಿಗೆ ಸರಿಯಾದ ಬೆಲೆ ಪಡೆಯಲು ಮತ್ತು ಇತರ ಕಾರಣಗಳಿಗಾಗಿ ಕುಶಲಕರ್ಮಿಗಳು ಜೇಡಗೊತ್ತಳಿ, ಕಂಚುಗಾರಗೊತ್ತಳಿ, ಚಿಪ್ಪಿಗಗೊತ್ತಳಿ, ಗಾಣವೊಕ್ಕಲು ಇತ್ಯಾದಿ ಹೆಸರಿನಲ್ಲಿ ಒಗ್ಗೂಡಿದ್ದರೆಂಬುದಕ್ಕೆ ಶಾಸನಗಳಲ್ಲಿ ಆಧಾರಗಳು ಸಿಗುತ್ತವೆ.

ಬೆಳೆಯುತ್ತಿದ್ದ ವ್ಯಾಪಾರಿವರ್ಗವೂ ಸಹ ಈ ಕುಶಲಕರ್ಮಿಗಳನ್ನು ಬೆಂಬಲಿಸಿತು. ಕುಶಲಕರ್ಮಿ ವರ್ಗದ ಪ್ರತಿಭಟನೆಯ ಧ್ವನಿಗಳಾದ ಜೇಡರ ದಾಸಿಮಯ್ಯ, ಡೋಹರ ಕಕ್ಕಯ್ಯ, ಅಂಬಿಗರ ಚೌಡಯ್ಯ, ಮಾದಾರ ಚನ್ನಯ್ಯ ಇವರು ಈ ವರ್ಗದ ಎಚ್ಚೆತ್ತ ಪ್ರಜ್ಞೆಗೆ ಸಾಕ್ಷಿಯಾಗುತ್ತಾರೆ.

ಊಳಿಗಮಾನ್ಯ ವ್ಯವಸ್ಥೆಯ ಒಡಲೊಳಗೆ ಅದರದ್ದೆ ಆದ ಆರ್ಥಿಕ-ಸಾಮಾಜಿಕ ಕಾರಣಗಳಿಗಾಗಿ, ಅದಕ್ಕೆ ವಿರೋಧವಿದ್ದ ವರ್ಗಗಳು ಈ ಕಾಲದಲ್ಲಿ ಹೋರಾಟಕ್ಕೆ ಇಳಿದಿದ್ದಕ್ಕೆ ವಚನಗಳಲ್ಲಿ, ಶಾಸನಗಳಲ್ಲಿ ಸಾಕಷ್ಟು ಪುರಾವೆ ಸಿಗುತ್ತವೆ. ವಚನಕಾರರ ಹೆಸರಿನ ಹಿಂದೆ ಅವರ ಕಾಯಕದ ಹೆಸರು ಸೇರಿರುವುದನ್ನು ನೋಡಿದರೆ ಅವರೆಲ್ಲರ ವರ್ಗಹಿನ್ನೆಲೆ ಸ್ಪಷ್ಟವಾಗುತ್ತದೆ. ಹೀಗೆ ಉತ್ಪಾದನಾ ಕ್ರಿಯೆಯಲ್ಲಿ ಭಾಗಿಯಾದವರೊಟ್ಟಿಗೆ ಅದನ್ನು ಸರಕಾಗಿಸಿ ಮಾರುವ ವ್ಯಾಪಾರಿವರ್ಗ ಕೂಡ ಅವರೊಂದಿಗೆ ಕೈಜೋಡಿಸಿತು. ಈ ಚಳವಳಿ ನಗರ ಪ್ರದೇಶದಲ್ಲಿ ನಡೆದಿರುವುದನ್ನು, ಅಲ್ಲಿಗೆ ಮಾತ್ರ ಸೀಮಿತಗೊಂಡಿರುವುದನ್ನು ನೋಡಿದರೆ ಸಮಾಜದ ಕೆನೆಯಂತಹ ಭಾಗ ಮಾತ್ರ ಈ ಚಳವಳಿಯಲ್ಲಿ ತನ್ನನ್ನ ತೊಡಗಿಸಿಕೊಂಡಿತ್ತೆಂಬುದು ಅರಿವಾಗುತ್ತದೆ. ಈ ಚಳವಳಿ ಗ್ರಾಮೀಣ ಪ್ರದೇಶಕ್ಕೆ ವ್ಯಾಪಿಸಿಕೊಳ್ಳುವ ಮೊದಲೇ ಪ್ರಭುತ್ವದ ತುಳಿತಕ್ಕೆ ಒಳಗಾಗಿದ್ದು ಒಂದು ದುರಂತ.

ಇದೇ ರೀತಿಯ ಊಳಿಗಮಾನ್ಯ ವಿರೋಧಿ ಬಂಡವಾಳಶಾಹಿ ಪ್ರವೃತ್ತಿ ಕರ್ನಾಟಕದಲ್ಲಿ ಮಾತ್ರವಲ್ಲದೇ ದೇಶದ ನಾನಾ ರಾಷ್ಟ್ರೀಯತೆಗಳಲ್ಲಿಯೂ ಮೊದಲಾಗಿತ್ತು. ಮಹಾರಾಷ್ಟ್ರದ ವರ್ಕರಿ ಚಳವಳಿ ಸಹ ಇದೇ ಹಿನ್ನೆಲೆ ಹೊಂದಿರುವಂಥದ್ದು. ಕರ್ನಾಟಕದ ವಚನ ಚಳವಳಿ ಊಳಿಗಮಾನ್ಯ ವಿರೋಧಿ ಪ್ರಬಲ ಪ್ರಜ್ಞೆ ಹೊಂದಿದ, ಹೊಸವರ್ಗವೊಂದರ ಉದಯದ ಆಶಯ ಹೊತ್ತ ಚಳವಳಿ ಎಂಬ ಕಾರಣಕ್ಕೆ ಹೆಚ್ಚಿನ ಮಹತ್ವ ಪಡೆದುಕೊಳ್ಳುತ್ತದೆ.

**ಬಸವಣ್ಣ ಮತ್ತು ಅನುಭವ ಮಂಟಪ**

ಬಿಜಾಪುರ ಜಿಲ್ಲೆಯ ಬಾಗೇವಾಡಿಯ 'ಮಹಾಜನ'ನ ಮಗನಾಗಿ ಬಸವಣ್ಣ ಹುಟ್ಟಿದ್ದು. ಈ 'ಮಹಾಜನ' ಅಥವಾ 'ಗ್ರಾಮೀಣಮಣಿ' ಎಂದು ಕರೆಯುತ್ತಿದ್ದ ಹುದ್ದೆಯು ಮಠದ ಆಸ್ತಿಪಾಸ್ತಿಗಳನ್ನು ನೋಡಿಕೊಳ್ಳುವ ಹೊಣೆಗಾರಿಕೆ ಹೊತ್ತಿತ್ತು. 'ಮಹಾಜನ' ಎನ್ನುವವರು ರಾಜರಿಗಿಂತ ಹೆಚ್ಚು ಆಸ್ತಿಹೊಂದಿ ಕಿರೀಟರಹಿತ ರಾಜರಂತಿದ್ದರು. ಆಗಿನ ಊಳಿಗಮಾನ್ಯ ವ್ಯವಸ್ಥೆಯಲ್ಲಿನ ಪ್ರತಿಗಾಮಿವರ್ಗದ ತುತ್ತತುದಿ ಇವರೇ ಆಗಿದ್ದರು ಎನ್ನಬಹುದು.

ಬಸವಣ್ಣನ ಹಿನ್ನೆಲೆಯನ್ನು ಗಮನಿಸಿದರೆ ಆತ ಚಿಕ್ಕಂದಿನಲ್ಲೆ ತನ್ನ ತಂದೆಯನ್ನು ಕಳೆದುಕೊಂಡಿದ್ದಿರಬೇಕು. ತಂದೆಯ ಮರಣಾನಂತರ ಅವರ ಅಣ್ಣ ದೇವರಾಜ ಆ ಹುದ್ದೆಗೆ ಬಂದ. ಬ್ರಾಹ್ಮಣರ ಕುತಂತ್ರಗಳಿಂದ ತಮ್ಮ ಹುದ್ದೆಯನ್ನು ಹಾಗೂ ಆಸ್ತಿಯನ್ನು ಕಳೆದುಕೊಂಡ ಬಸವಣ್ಣನವರ ಕುಟುಂಬ ಅಲ್ಲಿಂದ ವಲಸೆ ಹೋಗಿರಬೇಕು ಎಂದು ಊಹಿಸಲಾಗಿದೆ. ಬ್ರಾಹ್ಮಣ ಮಠದಂತೆಯೇ ಆಸ್ತಿಪಾಸ್ತಿ ಹೊಂದಿ, ಅದರಂತೆ ಆಳ್ವಿಕೆ ನಡೆಸುತ್ತಿದ್ದ ಶೈವಮಠದ ಕೇಂದ್ರವಾಗಿದ್ದ ಕೂಡಲ ಸಂಗಮಕ್ಕೆ ಬಸವಣ್ಣ ತಮ್ಮ ಅಕ್ಕ ನಾಗಮ್ಮನೊಂದಿಗೆ ಅಲ್ಲಿಗೆ ಹೋಗಿದ್ದಕ್ಕೆ ಆಧಾರಗಳಿವೆ. ಬಾಗೇವಾಡಿಯ ಬ್ರಾಹ್ಮಣರ ಮೋಸದಿಂದ ಅಗ್ರಹಾರ ತೊರೆಯಬೇಕಾಗಿ ಬಂದು ಬಸವಣ್ಣ ಇಲ್ಲಿ ಬಂದ ಮೇಲೆ "ಕೂಡಲ ಸಂಗಮದೇವರು ವಿಪ್ರಕರ್ಮವ ಬಿಡಿಸಿ ಆಶುದ್ಧನ ಶುದ್ಧ ಮಾಡಿದನಾಗಿ..." ಎಂದೆನ್ನುವಲ್ಲಿ ಆತ ಬ್ರಾಹ್ಮಣತ್ವ ತೊರೆಯುತ್ತಿರುವ ಸೂಚನೆ ಸಿಗುತ್ತದೆ.

"ಕರ್ಮಲತೆಯಂತಿದ್ದ ಜನಿವಾರವಂ ಕಿತ್ತು ಬಿಸುಟು..." ನಡೆದ ಬಸವಣ್ಣ "ಉತ್ತಮಕುಲದಲ್ಲಿ ಹುಟ್ಟಿದನೆಂಬ ಕಷ್ಟತನದ ಹೊರೆಯ ಹೊರಿಸದಿರಯ್ಯ... ವಿಪ್ರಜ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರೆಲ್ಲರನು ಒಂದೇ ಎಂದು ನಂಬುವುದೆನ್ನ ಮನವು" ಎನ್ನುತ್ತಾ ಅಬ್ರಾಹ್ಮಣನಾಗುವತ್ತ ಸರಿದಿರಬೇಕು. ಆಗಿನ ಶೈವಮಠಗಳು ಕೂಡ ಶೈವಾಗಮಗಳನ್ನು ಕಲಿಸುತ್ತಿದ್ದರಿಂದ, ಬಾಗೇವಾಡಿಯಲ್ಲಿ ಆತ ಕಲಿತ ವೈದಿಕ ಸಿದ್ಧಾಂತಗಳ ಜತೆಗೆ ಬಸವಣ್ಣನವರಿಗೆ ಶೈವಸಿದ್ಧಾಂತಗಳ ಪರಿಚಯ ಸಾಕಷ್ಟು ಇದ್ದಿರಬೇಕು.

ಮಠದ ವಾತಾವರಣದಲ್ಲಿಯೇ ಆತ ಬೆಳೆದಿದ್ದರಿಂದ ಅಲ್ಲಿನ ಜಡ್ಡುಗಟ್ಟಿದ ಸಂಪ್ರದಾಯ, ಕೊಳಕುತನಗಳ ನೈಜ ಸ್ವರೂಪದ ಪರಿಚಯವಾಗಿರಬೇಕು. ಹಾಗಾಗಿಯೇ ವಚನಗಳಲ್ಲಿ ತೀಕ್ಷ್ಣವಾದ ಧಾರ್ಮಿಕ ವಿಡಂಬನೆಗಳನ್ನು ಕಾಣಬಹುದು.

ಆದಿಪುರಾಣ ಅಸುರರಿಗೆ ಮಾರಿ
ವೇದ ಪುರಾಣ ಹೋತಿಂಗೆ ಮಾರಿ
ರಾಮ ಪುರಾಣ ರಕ್ಕಸರಿಗೆ ಮಾರಿ
ಭಾರತ ಪುರಾಣ ಗೋತ್ರಕ್ಕೆ ಮಾರಿ
ಎಲ್ಲಾ ಪುರಾಣ ಕರ್ಮಕ್ಕೆ ಮೊದಲು
ನಿಮ್ಮ ಪುರಾಣಕ್ಕೆ ಪ್ರತಿಯಿಲ್ಲ
ಕೂಡಲಸಂಗಮದೇವಾ ॥

ಎಂಬ ವಚನದಲ್ಲಿರಬಹುದು ಅಥವಾ...

ಕಿಚ್ಚುದೈವವೆಂದು ಹವಿಯನಿಕ್ಕುವ
ಹಾರುವನ ಮನೆಯಲ್ಲಿ ಕಿಚ್ಚೆದ್ದು ಸುಡುವಾಗ
ಬಚ್ಚಲನೀರ ಬೀದಿಯ ಧೂಳ ಹೊಯ್ದು
ಬೊಬ್ಬಿಟ್ಟೆಲ್ಲರ ಕರೆವರಯ್ಯಾ
ಕೂಡಲಸಂಗಮದೇವಾ
ವಂದನೆಯ ಮರೆದು ನಿಂದಿಸುತಿರ್ದರಯ್ಯಾ ॥

ಈ ವಚನಗಳಲ್ಲಿ ಬ್ರಾಹ್ಮಣರ ಆಚಾರ-ವಿಚಾರದ, ಪುರಾಣಾಗಮಗಳ ಟೀಕೆ ಪ್ರಜ್ವಲವಾಗಿದೆ.

ಈ ಕಾಲಕ್ಕೆ ಕೂಡಲಸಂಗಮ ಹಾಗೂ ಮಂಗಳವೇಡೆ ಮಠದ ಸುತ್ತಮುತ್ತಲ ಪ್ರದೇಶವು ಮಾರುಕಟ್ಟೆಯಾಗಿ ಪರಿವರ್ತನೆಯಾಗುತ್ತಿತ್ತು. ಊಳಿಗಮಾನ್ಯ ವ್ಯವಸ್ಥೆಯ ಉಪಟಳ ಸಹಿಸಲಾರದೇ ಪಟ್ಟಣಕ್ಕೆ ಓಡಿಬಂದ ಹಲವಾರು ಮಂದಿ ಬಸವಣ್ಣನವರಿಗೆ ಜತೆಯಾಗಿರಬೇಕು. ಆಗಲೇ ಬಸವಣ್ಣನವರು ಕಲಚೂರಿಯ ಪಾಳೆಗಾರನಾಗಿದ್ದ ಬಿಜ್ಜಳನ ಆಸ್ಥಾನದಲ್ಲಿ ಕರಣಿಕನಾಗಿ ಕೆಲಸಕ್ಕೆ ಸೇರಿಕೊಂಡು, ಪ್ರಾಮಾಣಿಕ ಕೆಲಸದಿಂದಾಗಿ ದೊರೆ ಬಿಜ್ಜಳನಿಗೆ ಹತ್ತಿರದವರಾಗುತ್ತಾ ಹೋಗಿರಬೇಕು. ರಾಜರ ಅರಮನೆಯ ಒಡೆತನದ ಜತೆಜತೆಗೆ ಮಠಗಳ ದುರ್ವ್ಯವಹಾರ, ಅಧಿಕಾರಿಗಳ ಸುಲಿಗೆಯ ಅರಿವು ಅವರಿಗಾಗಿದೆ. ಜನರನ್ನು ಹತ್ತಿರದಿಂದ ನೋಡುವ, ಅವರ ಕಷ್ಟ ಆಲಿಸುವ ಅವಕಾಶ ಸಿಕ್ಕಿದ್ದರಿಂದಾಗಿ ಜೇಡರ ದಾಸಿಮಯ್ಯ, ಅಂಬಿಗರ ಚೌಡಯ್ಯ, ನುಲಿಯ ಚಂದಯ್ಯ, ಮೇದಾರ ಕೇತಯ್ಯ, ಹಡಪದ ಅಪ್ಪಣ್ಣರಂತಹ ಕಾಯಕಜೀವಿಗಳ ಊಳಿಗಮಾನ್ಯ ವಿರೋಧಿ ಪ್ರಜ್ಞೆಯನ್ನು ಗ್ರಹಿಸಲು ಅವರಿಗೆ ಸಾಧ್ಯವಾಗಿದೆ. ಡಂಭಾಚಾರ ವಿರೋಧಿ ನಿಲುವು ಅವರಲ್ಲಿ ಗಟ್ಟಿಗೊಳ್ಳಲು ಇದು ಸಹಾಯ ಮಾಡಿದೆ. ಬಿಜ್ಜಳನು ಚಾಲುಕ್ಯ ಅರಸನನ್ನು ಕೊಂದು ಕಲ್ಯಾಣವನ್ನು ವಶಪಡಿಸಿಕೊಂಡ ಮೇಲೆ ಬಸವಣ್ಣನವರು ಇಡೀ ಬಿಜ್ಜಳ ರಾಜ್ಯದ ಭಂಡಾರಿಯಾಗಿ ನೇಮಕಗೊಂಡರು. ಕಲ್ಯಾಣವು ಆ ಕಾಲದ ಪ್ರಮುಖ ವ್ಯಾಪಾರಿ ಕೇಂದ್ರವಾಗಿದ್ದರಿಂದ, ಗ್ರಾಮೀಣ ಭಾಗದಲ್ಲಿ ದೌರ್ಜನ್ಯಕ್ಕೆ ಒಳಗಾಗಿದ್ದ ಕುಶಲಕರ್ಮಿಗಳು,

ಸೇವಾಕಾರ ಜಾತಿಗಳು, ವ್ಯಾಪಾರಿವರ್ಗದವರು ಮತ್ತು ಸಂಪ್ರದಾಯ ವಿರೋಧಿಯಾಗಿದ್ದ ಜನಸಮುದಾಯವನ್ನು ಆಕರ್ಷಿಸುತ್ತಿತ್ತು.

ಈ ಶೋಷಿತ ಜನಸಮುದಾಯದ ಸಂಪರ್ಕದಲ್ಲಿದ್ದ ಬಸವಣ್ಣನವರು, ಮತ್ತೊಂದೆಡೆ ಊಳಿಗಮಾನ್ಯ ಪ್ರಭುತ್ವದ ಮುಖ್ಯಸ್ಥಾನದಲ್ಲಿದ್ದು ಅದರೊಡನೆಯೂ ನಿಕಟಸಂಬಂಧ ಹೊಂದಿದ್ದರು. ಅವರ ವಿವಾಹಸಂಬಂಧ ಸಹ ಪ್ರಭುತ್ವ ಶಕ್ತಿಯೊಂದಿಗೆ ಕೂಡಿತ್ತು. ಒಬ್ಬಾಕೆ ಬಸವಣ್ಣನವರ ಸೋದರಮಾವ ಬಲದೇವ ಭಂಡಾರಿಯ ಮಗಳಾದರೆ, ಮತ್ತೊಬ್ಬಾಕೆ ಆಳುವ ಬಿಜ್ಜಳನ ಸೋದರ ಸಂಬಂಧಿ. ಈ ವಿವಾಹ ಆಕಸ್ಮಿಕವಲ್ಲ. ಇದರ ಹಿಂದೆ ರಾಜಕೀಯ ಹಿತಾಸಕ್ತಿಯೊಂದು ಕೆಲಸ ಮಾಡಿರುವುದು ಮೇಲ್ನೋಟಕ್ಕೆ ಕಂಡುಬರುತ್ತದೆ. ಇದೇ ರೀತಿಯ ಇನ್ನೊಂದು ಅಂಶವೆಂದರೆ, ಒಂದೆಡೆ ಕಲ್ಯಾಣದ ಅರಮನೆಯಲ್ಲಿ ಬಸವಣ್ಣ ಜೀವಿಸುತ್ತಿದ್ದರೆ, ಅದೇ ಸಮಯಕ್ಕೆ ಅಸ್ಪೃಶ್ಯರು ಸೇರಿದಂತೆ ಕೆಳಜಾತಿಯವರ ಮನೆಗಳಿಗೆ ಭೇಟಿ ಕೊಡುತ್ತಿದ್ದರು. ಇದು ಅವರ ಜೀವಿತಾವಧಿಯುದ್ದಕ್ಕೂ ಪರಸ್ಪರ ವೈರುಧ್ಯವಿದ್ದ ಸಂಬಂಧಗಳಾಗಿವೆ.

'ಅನುಭವ ಮಂಟಪ' ಎಂಬುದು ಅನುಭವಗಳನ್ನು ಹಂಚಿಕೊಳ್ಳುವ ವೇದಿಕೆಯಾಗಿ ಮಂಗಳವೇಡೆಯಲ್ಲಿ ರೂಪು ಪಡೆದು ನಂತರ ಕಲ್ಯಾಣಕ್ಕೆ ಸ್ಥಳಾಂತರಗೊಂಡಿತ್ತು. ''ಸ್ಥಾವರಕ್ಕಳಿವುಂಟು-ಜಂಗಮಕ್ಕಳಿವಿಲ್ಲ'' ಎಂಬ ಸ್ವರೂಪದ ಅನುಭವ ಮಂಟಪದಲ್ಲಿ ಊಳಿಗಮಾನ್ಯ ವ್ಯವಸ್ಥೆ, ಅದರಂಗವಾಗಿ ಇದ್ದ ಬ್ರಾಹ್ಮಣರ ಮೂಢಸಂಪ್ರದಾಯ, ಕಂದಾಚರಣೆ, ದೈವಸಾಕ್ಷಾತ್ಕಾರ, ಅಲೌಕಿಕ ಚಿಂತನೆಯ ಬಗ್ಗೆ ಸಂವಾದ-ಚರ್ಚೆ ನಡೆಯುತ್ತಿದ್ದವು. ವಿವಿಧ ವಿಷಯಗಳ ಮೇಲೆ ಮುಕ್ತ ಚರ್ಚೆಗೆ ಇಲ್ಲಿ ಅವಕಾಶವಿತ್ತು. ಊಳಿಗಮಾನ್ಯ ಶೋಷಣೆಯ ಉತ್ತುಂಗ ರೂಪವಾದ ಜಾತಿಯನ್ನು ಮೀರಿ ಇಲ್ಲಿ ಜನ ಭಾಗವಹಿಸುತ್ತಿದ್ದುದೇ ಆ ಕಾಲಕ್ಕೆ ದೊಡ್ಡ ಕ್ರಾಂತಿಯಾಗಿತ್ತು. ಅಲ್ಲಿಯವರೆಗೆ ಅಸ್ಪೃಶ್ಯಳೆಂದೇ ಪರಿಗಣಿತಳಾಗಿ ಸಮಾಜದಲ್ಲಿ ಶೋಷಿತಸ್ಥಿತಿಯಲ್ಲಿದ್ದ ಮಹಿಳೆ ಇಲ್ಲಿ ನಾಲ್ಕು ಗೋಡೆಯ ಬಂಧನದಿಂದ ಹೊರಬಂದು ಪುರುಷರೊಂದಿಗೆ ಸಮಾನರಾಗಿ ಕುಳಿತು ಮಾತನಾಡಬಹುದಿತ್ತು.

ಮೊದಮೊದಲು ಬಸವಣ್ಣನವರೇ ಅನುಭವ ಮಂಟಪಕ್ಕೆ ಮುಖ್ಯರಾಗಿದ್ದರು. ಅನುಭವ ಮಂಟಪದಲ್ಲಿ ೫೪ ಮಹಿಳಾ ವಚನಕಾರ್ತಿಯರೂ ಸೇರಿದಂತೆ ಸುಮಾರು ೨೧೩ ವಚನಕಾರರು ಅಂದಾಜು ಲೆಕ್ಕಕ್ಕೆ ಸಿಗುತ್ತಾರೆ. ಈ ವಚನಕಾರರು ಮಾತ್ರವಲ್ಲದೇ ಊಳಿಗಮಾನ್ಯ ಶೋಷಿತವ್ಯವಸ್ಥೆಯ ವಿರುದ್ಧವಿದ್ದ ಹಲವಾರು ಮಂದಿ ಅಲ್ಲಿ ನಡೆದ ಸ್ವಾರಸ್ಯಕರ ಚರ್ಚೆಯಲ್ಲಿ ಭಾಗವಹಿಸುತ್ತಿದ್ದಿರಬಹುದು. ಬಹುತೇಕ ವಚನಕಾರರು ಶೋಷಿತ ಹಾಗೂ ದುಡಿಯುವ ವರ್ಗಕ್ಕೆ ಸೇರಿದವರಾಗಿದ್ದರು ಎಂಬುದು ಅವರ ಹೆಸರನ್ನು ಗಮನಿಸಿದರೆ ಅರಿವಿಗೆ ಬರುತ್ತದೆ.




**ಮೈಸೂರಿನಲ್ಲಿ ಬೃಹತ್ ಪುಸ್ತಕ ಮೇಳ ಮತ್ತು ಕೃತಿಗಳ ಲೋಕಾರ್ಪಣೆ**

ನಂಜರಾಜ ಬಹದ್ದೂರ್ ಛತ್ರದಲ್ಲಿ ಮೈಸೂರು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಮಾನಸ ಅವರು ಪುಸ್ತಕ ಪ್ರದರ್ಶನ ಉದ್ಘಾಟಿಸಿದರು. ಮಹರಾಜಾ ಕಾಲೇಜಿನ ಪ್ರಾಧ್ಯಾಪಕರಾದ ಶ್ರೀ ಕೆ. ಎಸ್. ಭಗವಾನ್ ನವಕರ್ನಾಟಕ ಪ್ರಕಟಿಸಿರುವ 'ಕುವೆಂಪು ಸಾಹಿತ್ಯದಲ್ಲಿ ವೈಚಾರಿಕತೆ' ಮತ್ತು ಶ್ರೀ ಆದಿತ್ಯ ನಾರಾಯಣ ಬರೆದಿರುವ 'ಚರಿತ್ರೆಯ ವಿಕೃತೀಕರಣ' ಹಾಗೂ 'ಆಲ್ ದಿ ಪರ್ಫ್ಯೂಮ್ಸ್ ಆಫ್ ಅರೇಬಿಯ ವಿಲ್ ನಾಟ್, ಡಾ|| ಜೋಷಿ' - ಎಂಬ ಕೃತಿಗಳನ್ನು ಅನಾವರಣಗೊಳಿಸಿದರು.

ಜೇಡರ ದಾಸಿಮಯ್ಯ, ಅಂಬಿಗರ ಚೌಡಯ್ಯ, ಮೇದಾರ ಕೇತಯ್ಯ, ಗಾಣದ ಕನ್ನಪ್ಪ, ವೈದ್ಯ ಸಂಗಣ್ಣ, ಬಾಚಿಕಾಯಕದ ಬಸಪ್ಪ, ಮಾದಾರ ಚನ್ನಯ್ಯ, ಮಾದಾರ ಧೂಳಯ್ಯ, ಹರಳಯ್ಯ, ಆಯ್ದಕ್ಕಿ ಮಾರಯ್ಯ, ಸೂಳೆ ಸಂಕವ್ವ, ಕಾಳವ್ವೆ, ಸಂಬೋಳಿ ನಾಗಿದೇವ, ಹಡಪದ ಅಪ್ಪಣ್ಣ, ಅಜಗಣ್ಣ... ಇವರೆಲ್ಲರ ಹೆಸರಿನ ಹಿಂದಿರುವ ಪದಗಳು ಅವರ ವೃತ್ತಿ ಅಥವಾ ಕಾಯಕವನ್ನು ಸೂಚಿಸುತ್ತವೆ.

ಅದೇ ರೀತಿ ಊಳಿಗಮಾನ್ಯ ಶೋಷಕವರ್ಗದ ಹಿನ್ನೆಲೆಯಿಂದ ಬಂದಿದ್ದ ಉಳವಿಯ ರಾಜ ಚನ್ನಬಸವಣ್ಣ, ಶೋಲಾಪುರದ ಊಳಿಗಮಾನ್ಯ ದೊರೆ ಸಿದ್ಧರಾಮ, ರಾಜನ ಹೆಂಡತಿಯಾಗಿದ್ದ ಅಕ್ಕಮಹಾದೇವಿ, ಪ್ರಭುತ್ವದ ಸಹಚರನಂತಿದ್ದ ಬಸವಣ್ಣ - ಹೀಗೆ ಅನುಭವ ಮಂಟಪದಲ್ಲಿ ವಿಚಿತ್ರವಾದ ವರ್ಗ ವೈರುಧ್ಯವಿತ್ತು. ಈ ವರ್ಗ ವೈರುಧ್ಯದ ಹಿನ್ನೆಲೆಯಲ್ಲಿಯೇ ಬಸವಣ್ಣನ ಬದಲು ಅಲ್ಲಮಪ್ರಭು, ಶೂನ್ಯಪೀಠವೇರಿದ ಘಟನೆ ನಡೆದಿರಬೇಕೆನ್ನಿಸುತ್ತದೆ.

ಅನುಭವ ಮಂಟಪದಲ್ಲಿ ಕಾಯಕಜೀವಿಗಳ ಶಕ್ತಿ ಪ್ರಬಲವಾಗುತ್ತಾ ಹೋದಂತೆ ಊಳಿಗಮಾನ್ಯ ಹಿನ್ನೆಲೆಯ, ಪ್ರಭುತ್ವ ಸಹಚರಿಯಾದ ವ್ಯಕ್ತಿಗಳ ಬಗ್ಗೆ ಅಸಮಾಧಾನ ಹುಟ್ಟಿಕೊಂಡಿರಬೇಕು. ಅಂತಹ ಸನ್ನಿವೇಶದಲ್ಲಿಯೇ ಶೋಷಿತವರ್ಗದ ಧ್ವನಿಯಾಗಿದ್ದ, ಬಳ್ಳಿಗಾವೆಯ ದೇವಸ್ಥಾನದಲ್ಲಿ ಮದ್ದಲೆಗಾರನಾಗಿದ್ದ ಅಲ್ಲಮ ಬೆಳಕಿಗೆ ಬಂದಿರಬೇಕು. ಬಸವಣ್ಣನವರು ಸೇರಿದಂತೆ ಎಲ್ಲಾ ವಚನಕಾರರಿಗೆ ಹೋಲಿಸಿದರೆ ಅಸಾಮಾನ್ಯ ಭೌತಿಕವಾದಿ ಚಿಂತನೆ ಅಲ್ಲಮಪ್ರಭುವಿನಲ್ಲಿತ್ತು. ಆಧುನಿಕ ಭೌತವಾದಿ ಚಿಂತಕರಿಗೆ ಸಮನಾಗಿ ನಿಲ್ಲುವಷ್ಟು ಪ್ರಖರ ವಿಚಾರವಾದಿಯಾಗಿದ್ದ ಅಲ್ಲಮನನ್ನು ಮಹಾನ್ ಅಧ್ಯಾತ್ಮವಾದಿಯಂತೆ ಚಿತ್ರಿಸಿರುವುದು ಚರಿತ್ರೆಯ ದೋಷಗಳಲ್ಲಿ ಒಂದು. ಅನುಭವ ಮಂಟಪ ಕಾಯಕಜೀವಿಗಳ ಚಳವಳಿಯ ಥಿಂಕ್ ಟ್ಯಾಂಕ್ ರೀತಿ ಇತ್ತೆಂದರೆ ತಪ್ಪಾಗಲಾರದು.

**ವಚನ ಚಳವಳಿಯ ಮಹತ್ವ**

ಕರ್ನಾಟಕದ ನೆಲದಲ್ಲಿ ಊಳಿಗಮಾನ್ಯ ಶೋಷಣೆಯ ವಿರುದ್ಧ ಮೊದಲು ಧ್ವನಿ ಎತ್ತಿದ ಕೀರ್ತಿ ಈ ಕಾಯಕ ಜೀವಿಗಳ ಚಳವಳಿಗೆ ಸಲ್ಲುತ್ತದೆ. ವಚನ ಚಳವಳಿಯು ಜಡ್ಡುಗಟ್ಟಿದ ಧರ್ಮವ್ಯವಸ್ಥೆಯನ್ನು ವಿಡಂಬಿಸಿ, ಧರ್ಮವನ್ನು ಸರಳಗೊಳಿಸಿ, ಅದನ್ನು ಜನಸಾಮಾನ್ಯರಿಗೆ ತಲುಪಿಸುವಂತೆ ಮಾಡಿತು. ಕಾಯಕಕ್ಕೆ ಮಹತ್ವ ನೀಡುವ ಮೂಲಕ ಉತ್ಪಾದನೆ ಜಾಸ್ತಿಯಾಗಲು ಅವಕಾಶ ಮಾಡಿಕೊಟ್ಟಿದ್ದರಿಂದ ಮಾರುಕಟ್ಟೆಯ ವಿಸ್ತರಣೆಯಾಯಿತು. ಇದು ಊಳಿಗಮಾನ್ಯ ಕೋಟೆಯಲ್ಲಿ ಬಿರುಕು ಉಂಟುಮಾಡುವ ಜತೆಗೆ ಸಮಾಜದ ಮುಂಚಾಲನೆಗೆ ದಾರಿ ಮಾಡಿಕೊಟ್ಟಿತು.

ಲಿಂಗವನ್ನು ಧರಿಸಿದವರೆಲ್ಲ ಒಂದೇ ಎಂಬ ನೆಲೆಯಲ್ಲಿ ಎಲ್ಲರನ್ನು ಸಮಾನವಾಗಿ ಕಾಣುವ, ಜಾತಿ ವ್ಯವಸ್ಥೆಯನ್ನು ಮೂಲೋತ್ಪಾಟನೆ ಮಾಡುವ ಪ್ರಯತ್ನವೊಂದು ಮೊದಲಾಯಿತು.

*ವ್ಯಾಸ ಬೋಯಿತಿಯ ಮಗ, ಮಾರ್ಕಂಡೇಯ ಮಾತಂಗಿಯ ಮಗ*
*ಸಾಕ್ಷಾತ್ ಅಗಸ್ತ್ಯ ಕಬ್ಬಿಲ, ದುರ್ವಾಸ ಮುಚ್ಚಿಗ, ಕಶ್ಯಪ ಕಮ್ಮಾರ.... (ಬಸವಣ್ಣ)*
*ಕುರಿಕೋಳಿ ಕಿರುಮೀನು ತಿಂಬರಿಗೆಲ್ಲ ಕುಲಕುಲಜರೆಂಬರು*
*ಶಿವಗೆ ಪಂಚಾಮೃತ ಕರೆವ ಪಶುವ ತಿಂಬ ಮಾದಿಗ ಕೀಳುಜಾತಿಯೆಂಬರು*
*ಅವರೆಂತು ಕೀಳುಜಾತಿಯಾದರು ಜಾತಿಗಳು ನೀವೇಕೆ ಕೀಳಾಗಿರೋ (ಕಾಳವ್ವೆ)*

ಈ ವಚನಗಳಲ್ಲಿ ಜಾತಿ ಶ್ರೇಷ್ಠತೆಯನ್ನು ನಿರಾಕರಿಸುತ್ತಾ, ಸಮಾಜದ ಕಠೋರ ಶ್ರೇಣಿಪದ್ಧತಿಯನ್ನು ಪ್ರಶ್ನಿಸಲಾಗಿದೆ. ''ಎನ್ನ ಕಾಲೇ ಕಂಬ, ದೇಹವೇ ದೇಗುಲ, ಶಿರವೇ ಹೊನ್ನಕಳಸ''ವೆಂದು ಹೇಳುತ್ತಾ ದೇಹವನ್ನೇ ದೇವಾಲಯವಾಗಿಸಿ, ಶೋಷಣೆಯ ಮೂಲಗಳಾಗಿದ್ದ ದೇವಸ್ಥಾನಗಳ ಅಸ್ತಿತ್ವವನ್ನು ಪ್ರಶ್ನಿಸಿದ್ದೂ ನಡೆಯಿತು. ಎಲ್ಲರಿಗೂ ದೇವರನ್ನ ದಕ್ಕಿಸಿಕೊಡುವ ಯತ್ನ ಇದಾಗಿತ್ತು. ಮಾರಿ, ಮಸಣಿ, ಮೊರ, ಪೊರಕೆ, ಕಲ್ಲು ದೇವರುಗಳ ಬದಲಿಗೆ ಏಕದೇವತಾರಾಧನೆ, ಜಂಗಮಾರಾಧನೆಯನ್ನು ಜಾರಿಗೆ ತರುವ ಮೂಲಕ ದೇವರ ಹೆಸರಿನಲ್ಲಿ ನಡೆಯುತ್ತಿದ್ದ ಶೋಷಣೆಗೆ ಕಡಿವಾಣ ಹಾಕಲಾಯಿತು.

ಇನ್ನೊಂದು ಪ್ರಮುಖ ಬದಲಾವಣೆಯೆಂದರೆ ಕನ್ನಡ ಸಾಹಿತ್ಯ ದಿಕ್ಕು, ವಸ್ತು, ರೂಪವನ್ನು ಆಮೂಲಾಗ್ರವಾಗಿ ಬದಲಾಯಿಸಿದ್ದು. ಸಾಹಿತ್ಯವೆಂಬುದು ಒಂದು ಸಮಾಜದ ಉಪ ಉತ್ಪನ್ನ. ಸಮಾಜದ ಕೆಳಸ್ತರದಲ್ಲಿ, ಆರ್ಥಿಕ ಸಂಬಂಧಗಳಲ್ಲಿ ಬದಲಾವಣೆಗಳು ಘಟಿಸಿದಾಗ ಅದರ ಮೇಲ್‌ರಚನೆಯಂತಿರುವ ಸಾಹಿತ್ಯದಲ್ಲಿ ಬದಲಾವಣೆ ಆಗುತ್ತದೆ. ಹನ್ನೆರಡನೇ ಶತಮಾನದಲ್ಲಿ ಸಾಹಿತ್ಯವು ಒಂದು ಉಪಾಂಗವಾಗಿ ಬಂದಿದೆ. ಇಲ್ಲಿ ಸಾಹಿತ್ಯ ಸೃಷ್ಟಿಸಿದವರು ಬಂಗಲೆಯಲ್ಲಿ, ಆಸ್ಥಾನದಲ್ಲಿ ಕುಳಿತು ಸಾಹಿತ್ಯಕ್ಕಾಗಿ ಸಾಹಿತ್ಯ ಬರೆದವರಲ್ಲ. ಅವು ಅವರ ಜೀವನದ ಮೂಸೆಯಿಂದ ಮೂಡಿಬಂದ ನುಡಿ ಮುತ್ತುಗಳಾಗಿವೆ. ಅನುಭವ ಮಂಟಪದಲ್ಲಿ ನಡೆಯುತ್ತಿದ್ದ ಮಂಥನದಲ್ಲಿ ಮಥಿಮಥಿಸಿ ಬಂದ ಮಾತಿನ ನವನೀತವಾಗಿವೆ.

೪೦ನೇ ಪುಟಕ್ಕೆ...

# ಲಿಂಗಸಂಬಂಧಗಳು, ಅಭಿವೃದ್ಧಿ ಮತ್ತು ಜನಸಂಖ್ಯಾ ಬೆಳವಣಿಗೆ

**ಮಾರ್ಚ್ ೮ ಅಂತರರಾಷ್ಟ್ರೀಯ ಮಹಿಳಾ ದಿನ. ಆ ಸಂದರ್ಭದಲ್ಲಿ ಲಿಂಗಸಮಾನತೆಯತ್ತ ಒಂದು ಚಿಂತನೆ**

**ಡಾ|| ಟಿ. ಆರ್. ಚಂದ್ರಶೇಖರ**

**ಪ್ರಸ್ತಾವನೆ**

ಜನಸಂಖ್ಯೆಯು ತೀವ್ರಗತಿಯಲ್ಲಿ ಬೆಳೆಯುವುದನ್ನು ಒಂದು ಬೃಹತ್ ಸಮಸ್ಯೆಯಾಗಿ ಪರಿಭಾವಿಸಿಕೊಳ್ಳುವ ಪದ್ಧತಿಯು ೧೮ನೆಯ ಶತಮಾನದಲ್ಲಿ ಮಾಲ್ಥಸ್‌ನಿಂದ ಆರಂಭವಾಯಿತು. ಭಾರತದ ಸಂದರ್ಭದಲ್ಲಿ ಇದರ ಬಗ್ಗೆ ತೀವ್ರ ಚರ್ಚೆಗಳು ನಡೆದಿವೆ. ರಾಬರ್ಟ್ ಎಸ್. ಮ್ಯಾಕ್ನಮಾರ ಅವರು ವಿಶ್ವಬ್ಯಾಂಕಿನ ಅಧ್ಯಕ್ಷರಾಗಿದ್ದಾಗ ಇದನ್ನು ಕುರಿತು ಮಾಡಿದ ಒಂದು ಭಾಷಣದಲ್ಲಿ ಜನಸಂಖ್ಯೆಯ ಬೆಳವಣಿಗೆಯ ತೀವ್ರಗತಿಯಿಂದ ಉಂಟಾಗುವ ಪರಿಣಾಮಗಳು ಥರ್ಮೋನ್ಯೂಕ್ಲಿಯರ್ ಯುದ್ಧದ ಪರಿಣಾಮಗಳಿಗಿಂತ ಭೀಕರವಾಗಿರುತ್ತವೆ ಎಂದು ಹೇಳಿದ್ದರು. ಇಂತಹ ಜನಸಂಖ್ಯೆಯ ಬೆಳವಣಿಗೆಯ ಗತಿಯನ್ನು ತಡೆಯಲು ಮತ್ತು ತಗ್ಗಿಸಲು ಅನೇಕ ರೀತಿಯ ಕ್ರಮಗಳನ್ನು ಅನುಸರಿಸುತ್ತಾ ಬರಲಾಗಿದೆ. ಚೀನಾ ದೇಶವು ಅತ್ಯಂತ ಉಗ್ರವಾದ ರೀತಿಯಲ್ಲಿ 'ಒಂದೆ ಮಗು ಕುಟುಂಬ'ದ ನೀತಿಯನ್ನು ಅಳವಡಿಸಿಕೊಂಡು ಜನಸಂಖ್ಯೆಯ ಬೆಳವಣಿಗೆಯ ಗತಿಯನ್ನು ನಿಯಂತ್ರಿಸುವುದರಲ್ಲಿ ಯಶಸ್ವಿಯಾಗಿದೆ. ಈ ಬಗೆಯ ಉಗ್ರವಾದ, ಬಲವಂತದ, ಹಿಂಸಾತ್ಮಕವಾದ (ಅಥಾರಿಟೇರಿಯನ್) ಕ್ರಮಗಳಿಗೆ ಪ್ರತಿಯಾಗಿ ಜನರ ವಿವೇಕ ಮತ್ತು ವಿವೇಚನೆಯನ್ನು ಆಧರಿಸಿದ ಮಾನವೀಯವಾದ ಕ್ರಮಗಳಿಂದ ಭಾರತದ ಕೆಲವು ರಾಜ್ಯಗಳು (ಕೇರಳ, ತಮಿಳುನಾಡು, ಕರ್ನಾಟಕ, ಗೋವಾ) ಜನಸಂಖ್ಯೆಯ ಬೆಳವಣಿಗೆಯನ್ನು ನಿಯಂತ್ರಿಸಿರುವ ನಿದರ್ಶನವು ನಮ್ಮ ಮುಂದಿದೆ. ಉಗ್ರವಾದ ಮತ್ತು ಬಲವಂತದ ಜನಸಂಖ್ಯೆಯ ಬೆಳವಣಿಗೆಯನ್ನು ನಿಯಂತ್ರಿಸುವ ಕ್ರಮಗಳಿಂದ ಮಹಿಳೆಯರು ಅನೇಕ ರೀತಿಯ ಅನ್ಯಾಯ, ತಾರತಮ್ಯ ಮತ್ತು ಶೋಷಣೆಯನ್ನು ಅನುಭವಿಸಬೇಕಾಗುತ್ತದೆ. ಆದರೆ ಮೇಲೆ ತಿಳಿಸಿರುವ ರಾಜ್ಯಗಳು ಲಿಂಗ ಸಮಾನತೆಯನ್ನು ಸಾಧಿಸಿಕೊಳ್ಳುವುದರ ಮೂಲಕ ಮತ್ತು ಮಹಿಳೆಯರ ಸ್ಥಾನಮಾನವನ್ನು ಉತ್ತಮಪಡಿಸುವುದರ ಮೂಲಕ ಜನಸಂಖ್ಯೆಯ ಬೆಳವಣಿಗೆಯನ್ನು ನಿರ್ವಹಿಸಿರುವ ನಿದರ್ಶನವು ನಮ್ಮ ಮುಂದಿದೆ.

ಜೀನ್ ಡ್ರೀಜ್ ಮತ್ತು ಅಮರ್ತ್ಯ ಸೇನ್ ಅವರು ಭಾರತ ಕುರಿತಂತೆ ಪ್ರಕಟಿಸಿರುವ ಇತ್ತೀಚಿಗಿನ ಕೃತಿಯಲ್ಲಿ (೨೦೦೨: ೨೭೧-೨೭೪) ಲಿಂಗಸಂಬಂಧಗಳು, ಅಭಿವೃದ್ಧಿ ಮತ್ತು ಜನಸಂಖ್ಯಾ ಬೆಳವಣಿಗೆಗಳ ನಡುವಣ ಸಂಬಂಧ ಕುರಿತಂತೆ ಒಂದು ಪ್ರಸಿದ್ಧ ಪ್ರಮೇಯವನ್ನು ಮಂಡಿಸಿದ್ದಾರೆ. ಆ ಲಿಂಗಸಂಬಂಧಿ ಪ್ರಮೇಯವನ್ನು ಕುರಿತಂತೆ ಇಲ್ಲಿ ಚರ್ಚಿಸಲಾಗಿದೆ.

ಅವರ ಪ್ರಮೇಯ ಹೀಗಿದೆ :

''ಯಾವ ದೇಶ/ಪ್ರದೇಶದಲ್ಲಿ ಲಿಂಗಸಂಬಂಧಗಳು ಸಮಾನತೆಯಿಂದ ಕೂಡಿರುತ್ತವೋ, ಎಲ್ಲಿ ಮಹಿಳೆಯ ಸ್ಥಾನಮಾನ ಉತ್ತಮವಾಗಿರುತ್ತದೋ ಅಲ್ಲಿ ಜನಸಂಖ್ಯೆಯ ಬೆಳವಣಿಗೆಯ ಪ್ರಮಾಣ ಕೆಳಮಟ್ಟದಲ್ಲಿರುತ್ತದೆ ಮತ್ತು ಅಭಿವೃದ್ಧಿಯ ಮಟ್ಟ ಉತ್ತಮವಾಗಿರುತ್ತದೆ.''

ಇದನ್ನು ಇನ್ನೊಂದು ರೂಪದಲ್ಲಿ ಹೀಗೆ ಸಂಗ್ರಹಿಸಬಹುದಾಗಿದೆ.

''ಯಾವ ದೇಶ/ಪ್ರದೇಶದಲ್ಲಿ ಲಿಂಗಸಂಬಂಧಗಳು ಅಸಮಾನತೆಯಿಂದ ಕೂಡಿರುತ್ತವೋ ಅವು ಸಾಮಾನ್ಯವಾಗಿ ಅಭಿವೃದ್ಧಿಯ ದೃಷ್ಟಿಯಿಂದ ದುಃಸ್ಥಿತಿ ಅನುಭವಿಸುತ್ತಿರುತ್ತವೆ.''

ಲಿಂಗಸಂಬಂಧಿ ಅಸಮಾನತೆಗಳು, ಜನಸಂಖ್ಯಾ ದೃಷ್ಟಿಯಿಂದ ಹಿಂದುಳಿದಿರುವಿಕೆ ಮತ್ತು ಆರ್ಥಿಕ ದೃಷ್ಟಿಯಿಂದ ದುಃಸ್ಥಿತಿ ಇವು ಪರಸ್ಪರ ಸಂವಾದಿಯಾದ ಸಂಗತಿಗಳೆಂಬುದು ಡ್ರೀಜ್-ಸೇನ್ ಅವರ ಪ್ರಮೇಯವಾಗಿದೆ. ಇದಕ್ಕೆ ಪೂರಕವಾಗಿ ಅವರು ಮತ್ತೊಂದು ಪ್ರಮೇಯವನ್ನು ಮಂಡಿಸಿದ್ದಾರೆ. ಆರ್ಥಿಕ ಅಭಿವೃದ್ಧಿ ಅಥವಾ ವರಮಾನ ವರ್ಧನೆಯು ತನ್ನಷ್ಟಕ್ಕೆ ತಾನೇ ಲಿಂಗಸಂಬಂಧಿ ಸಮಾನತೆಯನ್ನು ಅಥವಾ ಜನಸಂಖ್ಯೆಯ ಬೆಳವಣಿಗೆಯ ನಿಯಂತ್ರಣವನ್ನು ಸಾಧಿಸುವುದು ಸಾಧ್ಯವಿಲ್ಲ. ಇದಕ್ಕೆ ಪ್ರತಿಯಾಗಿ ಮಹಿಳೆಯರ ಸಾಕ್ಷರತೆಯನ್ನು ಉತ್ತಮಪಡಿಸುವುದರ ಮೂಲಕ, ಲಿಂಗ ಅನುಪಾತವನ್ನು ಮಹಿಳೆಯರಿಗೆ ಅನುಕೂಲವಾಗುವಂತೆ ಮಾಡುವುದರ ಮೂಲಕ, ಬಡ ದೇಶಗಳೂ ಜನಸಂಖ್ಯೆಯ ಬೆಳವಣಿಗೆಯನ್ನು ನಿಯಂತ್ರಿಸಬಹುದಾಗಿದೆ.

ಪ್ರಸ್ತುತ ಪ್ರಬಂಧದಲ್ಲಿ ಡ್ರೀಜ್-ಸೇನ್ ಪ್ರತಿಪಾದಿಸಿರುವ ಪ್ರಮೇಯವನ್ನು ಭಾರತದ ರಾಜ್ಯಗಳಿಗೆ ಅನ್ವಯಿಸುವ ಮೂಲಕ ದೃಢಪಡಿಸಲು ಮತ್ತು ಸಾಧಿಸಲು ಪ್ರಯತ್ನಿಸಲಾಗಿದೆ. ಕೋಷ್ಟಕದಲ್ಲಿ ತೋರಿಸುವಂತೆ ದೇಶದ ೧೨ ರಾಜ್ಯಗಳನ್ನು ಅಭಿವೃದ್ಧಿಯ ಸ್ವರೂಪಕ್ಕನುಗುಣವಾಗಿ ಮೂರು ಗುಂಪುಗಳಾಗಿ ವರ್ಗೀಕರಿಸಲಾಗಿದೆ. ಈ ಮೂರು ಗುಂಪುಗಳ ಪೈಕಿ ಯಾವುದರಲ್ಲಿ ಲಿಂಗಸಮಾನತೆ ಸಾಧ್ಯವಾಗಿರುತ್ತದೋ, ಮಹಿಳೆಯರ ಸ್ಥಾನಮಾನ

**ಅಭಿವೃದ್ಧಿ, ಜನಸಂಖ್ಯೆ ಮತ್ತು ಲಿಂಗ ಸಂಬಂಧಗಳು**

| ರಾಜ್ಯಗಳ ವರ್ಗೀಕರಣ | ಚಾಲ್ತಿ ಬೆಲೆಗಳಲ್ಲಿ ತಲಾ ವರಮಾನ (೨೦೦೧-೨೦೦೨) (ರೂ. ಗಳಲ್ಲಿ) | ಜನಸಂಖ್ಯೆಯ ವಾರ್ಷಿಕ ಬೆಳವಣಿಗೆ ಪ್ರಮಾಣ (ಶೇ.) ೨೦೦೧ | ಲಿಂಗ ಅನುಪಾತ ೨೦೦೧ (ಪ್ರತಿ ಸಾವಿರ ಪುರುಷರಿಗೆ ಮಹಿಳೆಯರ ಸಂಖ್ಯೆ) | ಮಹಿಳೆಯರ ಸಾಕ್ಷರತೆ ೨೦೦೧ (ಶೇಕಡ) |
|---|---|---|---|---|
| **೧. ಉನ್ನತ ಆರ್ಥಿಕ ಅಭಿವೃದ್ಧಿ ರಾಜ್ಯಗಳು** | | | | |
| ಅ. ಪಂಜಾಬ್ | ೨೫೬೫೨ | ೧.೯೮ | ೮೭೪ | ೬೩.೫೫ |
| ಆ. ಮಹಾರಾಷ್ಟ್ರ | ೨೪೭೩೬ | ೨.೨೬ | ೯೨೨ | ೬೭.೫೧ |
| ಇ. ಹರಿಯಾಣ | ೨೪೫೭೫ | ೨.೮೧ | ೮೬೧ | ೫೬.೩೧ |
| ಈ. ಗುಜರಾತ್ | ೨೧೨೭೬ | ೨.೨೫ | ೯೨೧ | ೫೮.೬೦ |
| **೨. ಉನ್ನತ ಸಾಮಾಜಿಕ ಅಭಿವೃದ್ಧಿ ರಾಜ್ಯಗಳು** | | | | |
| ಅ. ಕೇರಳ | ೨೧೩೧೦ | ೦.೯೪ | ೧೦೫೮ | ೮೭.೮೬ |
| ಆ. ತಮಿಳುನಾಡು | ೨೧೨೩೯ | ೧.೧೨ | ೯೮೬ | ೬೪.೫೫ |
| ಇ. ಕರ್ನಾಟಕ | ೧೮೩೨೪ | ೧.೭೨ | ೯೬೪ | ೫೭.೪೫ |
| ಈ. ಗೋವಾ | ೪೬೩೫೬ | ೧.೪೯ | ೯೬೦ | ೭೫.೫೦ |
| **೩. ಅತ್ಯಂತ ಹಿಂದುಳಿದ ರಾಜ್ಯಗಳು** | | | | |
| ಅ. ಬಿಹಾರ | ೫೪೬೬ | ೨.೮೪ | ೯೨೧ | ೩೩.೫೭ |
| ಆ. ಮಧ್ಯಪ್ರದೇಶ | ೧೧೭೧೮ | ೨.೪೩ | ೯೨೦ | ೫೦.೨೮ |
| ಇ. ರಾಜಾಸ್ಥಾನ | ೧೩೮೨೫ | ೨.೮೩ | ೯೨೨ | ೪೪.೩೪ |
| ಈ. ಉತ್ತರ ಪ್ರದೇಶ | ೯೪೭೯ | ೨.೫೮ | ೮೯೮ | ೪೨.೯೮ |
| **೪. ಭಾರತ** | ೧೭೯೭೮ | ೨.೧೩ | ೯೩೩ | ೫೪.೧೬ |

ಮೂಲ : ೧. ಸೆನ್ಸಸ್ ಆಫ್ ಇಂಡಿಯಾ : ೨೦೦೧, ಸಿರೀಸ್-೩೦, ಕರ್ನಾಟಕ ಪೇಪರ್-೨ ಆಫ್ ೨೦೦೧, ಪ್ರಾವಿಷನಲ್ ಪಾಪ್ಯುಲೇಶನ್ ಟೋಟಲ್ಸ್, ಡೈರೆಕ್ಟರ್ ಆಫ್ ಸೆನ್ಸಸ್ ಆಪರೇಶನ್ಸ್, ಕರ್ನಾಟಕ, ಪು.೫೭-೭೧.
೨. ಕರ್ನಾಟಕ ಸರ್ಕಾರ ೨೦೦೪, ಆರ್ಥಿಕ ಸಮೀಕ್ಷೆ: ೨೦೦೩-೨೦೦೪, ಯೋಜನೆ ಮತ್ತು ಸಾಂಖ್ಯಿಕ ಇಲಾಖೆ, ಬೆಂಗಳೂರು.

ಉತ್ತಮವಾಗಿರುತ್ತದೋ ಅಲ್ಲಿ ಜನಸಂಖ್ಯೆಯ ಬೆಳವಣಿಗೆಯ ಗತಿ ತಳಮಟ್ಟದಲ್ಲಿರುತ್ತದೆ ಎಂಬುದನ್ನು ಕೋಷ್ಟಕದಿಂದ ಸ್ಪಷ್ಟಪಡಿಸಿಕೊಳ್ಳಬಹುದಾಗಿದೆ. ಕೋಷ್ಟಕದಲ್ಲಿನ ಮೊದಲನೆಯ ಗುಂಪಿನಲ್ಲಿ ಆರ್ಥಿಕ ಅಭಿವೃದ್ಧಿ ಸಾಧಿಸಿಕೊಂಡ ನಾಲ್ಕು ರಾಜ್ಯಗಳಿವೆ. ಕೋಷ್ಟಕದಲ್ಲಿರುವ ೧೨ ರಾಜ್ಯಗಳಲ್ಲಿ (ಗೋವಾ ಬಿಟ್ಟು) ತಲಾ ವರಮಾನವು ಮೊದಲನೆಯ ಗುಂಪಿನ ರಾಜ್ಯಗಳಲ್ಲಿ ಅಧಿಕವಾಗಿದೆ. ಆರ್ಥಿಕ ದೃಷ್ಟಿಯಿಂದ ಇವು ಉನ್ನತ ಅಭಿವೃದ್ಧಿ ಸಾಧಿಸಿ ಕೊಂಡಿವೆ. ಆದರೆ ಇಲ್ಲಿ ಲಿಂಗ ಅನುಪಾತವು ೯೨೫ಕ್ಕಿಂತ ಕಡಿಮೆಯಿದೆ. ಮಹಿಳೆಯರ ಸ್ಥಾನಮಾನವು ಕೆಳಮಟ್ಟದಲ್ಲಿರುವುದನ್ನು ಇದು ಸೂಚಿಸುತ್ತದೆ. ಮಹಿಳೆಯರ ಸಾಕ್ಷರತೆಯ ಮಟ್ಟವೂ ಕೂಡ ಎರಡನೆಯ ಗುಂಪಿನ ರಾಜ್ಯಗಳಲ್ಲಿರುವ ಪ್ರಮಾಣಕ್ಕಿಂತ ಕಡಿಮೆಯಿದೆ (ಸರಾಸರಿ ಶೇ. ೬೧.೫೦). ಜನಸಂಖ್ಯೆಯ ಬೆಳವಣಿಗೆಯ ಗತಿಯು ವಾರ್ಷಿಕ ಶೇ.೨ ಕ್ಕಿಂತ ಅಧಿಕವಾಗಿದೆ. ಈ ಗುಂಪಿನ ರಾಜ್ಯಗಳು ಆರ್ಥಿಕವಾಗಿ ಅಂದರೆ ವರಮಾನದ ದೃಷ್ಟಿಯಿಂದ ಉನ್ನತ ಮಟ್ಟವನ್ನು ಸಾಧಿಸಿಕೊಂಡಿವೆ. ಆದರೆ ಸಾಮಾಜಿಕ ದೃಷ್ಟಿಯಿಂದ, ಲಿಂಗಸಂಬಂಧಗಳ ದೃಷ್ಟಿಯಿಂದ ಅವು ಹಿಂದುಳಿದಿವೆ. ಇದರ ಪರಿಣಾಮವಾಗಿ ಜನಸಂಖ್ಯೆಯ ಬೆಳವಣಿಗೆಯ ಗತಿ ಅಧಿಕವಾಗಿದೆ.

ಮೊದಲನೆಯ ಗುಂಪಿಗೆ ಪ್ರತಿಯಾಗಿ ಮೂರನೆಯ ಗುಂಪಿನ ರಾಜ್ಯಗಳು ಅತ್ಯಂತ ಹಿಂದುಳಿದ ಸ್ಥಿತಿಯಲ್ಲಿವೆ. ಇವು ಆರ್ಥಿಕವಾಗಿ, ಜನಸಂಖ್ಯೆ ಬೆಳವಣಿಗೆ ದೃಷ್ಟಿಯಿಂದ ಹಾಗೂ ಲಿಂಗಸಂಬಂಧಗಳ ದೃಷ್ಟಿಯಿಂದ ಅತ್ಯಂತ ದುಃಸ್ಥಿತಿಯಲ್ಲಿರುವ ರಾಜ್ಯಗಳಾಗಿವೆ. ಇವುಗಳ ತಲಾ ವರಮಾನ ಕಡಿಮೆ. ಆದರೆ ಜನಸಂಖ್ಯೆಯ ಬೆಳವಣಿಗೆ ಪ್ರಮಾಣ ವಾರ್ಷಿಕ ಶೇ. ೨.೫ಕ್ಕಿಂತ ಅಧಿಕವಿದೆ. ಲಿಂಗ ಅನುಪಾತವು ೯೨೫ಕ್ಕಿಂತ ಕಡಿಮೆಯಿದೆ. ಮಹಿಳೆಯರ ಸಾಕ್ಷರತೆಯು ಅತ್ಯಂತ ಕೆಳಮಟ್ಟದಲ್ಲಿದೆ (ಸರಾಸರಿ ಶೇ. ೪೩). ಈ ಮೂರು ಬಗೆಯ ಹಿಂದುಳಿದಿರುವಿಕೆಯನ್ನೂ ಗಮನಿಸಿ ಆಶೀಶ್ ಬೋಸ್ ಸದರಿ ರಾಜ್ಯಗಳನ್ನು ರೋಗಗ್ರಸ್ತ ರಾಜ್ಯಗಳೆಂದು (ಬಿಮಾರು = BIMARU) ಕರೆದಿದ್ದಾರೆ.

ಜನಸಂಖ್ಯೆಯ ಬೆಳವಣಿಗೆ ಗತಿ, ಮಹಿಳೆಯರ ಸ್ಥಾನಮಾನ ಮತ್ತು ಲಿಂಗ ಸಮಾನತೆಯ ದೃಷ್ಟಿಯಿಂದ ಎರಡನೆಯ ಗುಂಪಿನ ರಾಜ್ಯಗಳ ಸ್ಥಿತಿಗತಿಯು ಉಳಿದೆರಡು ಗುಂಪಿನಲ್ಲಿನ ರಾಜ್ಯಗಳಿಗಿಂತ ಉತ್ತಮವಾಗಿದೆ. ಎರಡನೆಯ ಗುಂಪಿನ ರಾಜ್ಯಗಳಲ್ಲಿನ ಸ್ಥಿತಿಯನ್ನು ಹೀಗೆ ಹಿಡಿದಿಡಬಹುದು :

೧. ಮಹಿಳೆಯರ ಸ್ಥಾನಮಾನದ ಸೂಚಿಯಾದ ಲಿಂಗ ಅನುಪಾತವು ೯೬೦ಕ್ಕಿಂತ (ಸರಾಸರಿ) ಅಧಿಕವಿದೆ.
೨. ಲಿಂಗಸಮಾನತೆಯ ಸೂಚಿಯಾದ ಮಹಿಳೆಯರ ಸಾಕ್ಷರತಾ ಪ್ರಮಾಣವು ಶೇಕಡ ೭೧ (ಸರಾಸರಿ)ರಷ್ಟಿದೆ.
೩. ಜನಸಂಖ್ಯೆಯ ಬೆಳವಣಿಗೆ ಪ್ರಮಾಣ ವಾರ್ಷಿಕ ಶೇಕಡ ೧.೫ (ಸರಾಸರಿ)ಕ್ಕಿಂತ ಕಡಿಮೆಯಿದೆ.
೪. ತಲಾ ವರಮಾನವು ಮೊದಲನೆಯ ಗುಂಪಿನ ರಾಜ್ಯಗಳಲ್ಲಿರುವ ತಲಾ ವರಮಾನದ ಮೊತ್ತಕ್ಕಿಂತ ಕಡಿಮೆ ಮತ್ತು ಮೂರನೆಯ ಗುಂಪಿನ ರಾಜ್ಯಗಳ ತಲಾವರಮಾನದ ಮೊತ್ತಕ್ಕಿಂತ ಅಧಿಕವಾಗಿದೆ.

ಈ ಗುಂಪಿನ ರಾಜ್ಯಗಳು ಆರ್ಥಿಕವಾಗಿ ಕೆಳಮಟ್ಟದಲ್ಲಿವೆ. ಆದರೆ ಲಿಂಗಸಂಬಂಧಿಗಳ ಸಮಾನತೆ ಕಡೆ ಅವು ಸಾಗುತ್ತಿವೆ. ಮಹಿಳೆಯರ ಸ್ಥಾನಮಾನ ಉತ್ತಮವಾಗಿದೆ. ಇದರ ಫಲವಾಗಿ ಜನಸಂಖ್ಯೆ ಬೆಳವಣಿಗೆ ಗತಿಯು ತೀವ್ರ ಕೆಳಮಟ್ಟ ತಲುಪಿದೆ. ಜನಸಂಖ್ಯೆಯ ಬೆಳವಣಿಗೆಯನ್ನು ದೇಶವೊಂದು ಅತ್ಯಂತ ಬಡತನದ ಸ್ಥಿತಿಯಲ್ಲಿರುವಾಗಲೂ ನಿಯಂತ್ರಿಸಬಹುದು ಎನ್ನುವುದು ಇದರಿಂದ ತಿಳಿದುಬರುತ್ತದೆ. ಆರ್ಥಿಕ ಅಭಿವೃದ್ಧಿಯು ತನ್ನಷ್ಟಕ್ಕೆ ತಾನೇ ಜನಸಂಖ್ಯೆಯ ಬೆಳವಣಿಗೆಯನ್ನು ತಡೆಯುತ್ತದೆ ಎಂಬುದನ್ನು ಮೇಲಿನ ನಿದರ್ಶನವು ಹುಸಿಯಾಗಿಸಿದೆ.

**ಅನುಸರಿಸಬಹುದಾದ ಮಾದರಿ**

ಇಲ್ಲಿ ಕೋಷ್ಟಕದಲ್ಲಿನ ಅಂಕಿ-ಅಂಶಗಳು ಡ್ರೀಜ್-ಸೇನ್ ಪ್ರಮೇಯವನ್ನು ಸಿದ್ಧಮಾಡಿ ತೋರಿಸುತ್ತವೆ. ಮಹಿಳೆಯರ ಸ್ಥಾನಮಾನವನ್ನು ಉತ್ತಮಪಡಿಸುವ ಮತ್ತು ಲಿಂಗ ಸಮಾನತೆಯನ್ನು ಸಾಧಿಸಿಕೊಳ್ಳುವ ಕ್ರಮಗಳ ಮೂಲಕ ಜನಸಂಖ್ಯೆಯ ನಿಯಂತ್ರಣವನ್ನು ಯಶಸ್ವಿಯಾಗಿ ಸಾಧಿಸಿಕೊಳ್ಳಬಹುದಾಗಿದೆ ಎಂಬುದನ್ನು ಕೋಷ್ಟಕದ ಎರಡನೆಯ ಗುಂಪಿನ ರಾಜ್ಯಗಳು ತೋರಿಸುತ್ತವೆ. ಜನಸಂಖ್ಯೆಯ ಬೆಳವಣಿಗೆಯ ಗತಿಯನ್ನು ಪರಿಣಾಮಕಾರಿಯಾಗಿ ನಿರ್ವಹಿಸಲು ಲಿಂಗ ಸಂಬಂಧಿ ಸಮಾನತೆಯನ್ನು ಸಾಧಿಸಿಕೊಳ್ಳುವ ಅಗತ್ಯವಿದೆ. ಲಿಂಗ ಸಮಾನತೆಯೆನ್ನುವುದು ಮಹಿಳೆಯರಿಗೆ ಮಾತ್ರ ಸಂಬಂಧಿಸಿದ ಸಂಗತಿಯಲ್ಲ, ಅದೊಂದು ಸಾಮಾಜಿಕವಾದ, ಅಭಿವೃದ್ಧಿಗೆ ಸಂಬಂಧಿಸಿದ ಸಂಗತಿಯಾಗಿದೆ.

**ಡಾ|| ಟಿ. ಆರ್. ಚಂದ್ರಶೇಖರ**
ಪ್ರಾಧ್ಯಾಪಕ, ಅಭಿವೃದ್ಧಿ ಅಧ್ಯಯನ ವಿಭಾಗ, ನಿರ್ದೇಶಕರು, ಅಧ್ಯಯನಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬

*೩೮ನೇ ಪುಟದಿಂದ...*

ಅಲ್ಲಿಯವರೆಗೆ ಸಂಸ್ಕೃತಭೂಯಿಷ್ಠ ಚಂಪೂ ಪ್ರಕಾರದಲ್ಲಿದ್ದ, ಪಂಡಿತರಿಗೆ ಮಾತ್ರ ಅರ್ಥವಾಗುವಂತಿದ್ದ ಸಾಹಿತ್ಯವನ್ನು ಜನರ ಭಾಷೆಯಲ್ಲಿ, ಜನರಿಗೆ ಬೇಕಾದಂತೆ, ಅವರಿಗೆ ಸ್ಪಂದಿಸುವಂತೆ ರಚಿಸಲು ಮುಂದಾದುದೇ ವಚನಕಾರರ ಸಾಧನೆ. ಪಂಡಿತ ಭಾಷೆಯನ್ನು ಕೈಬಿಟ್ಟು, ಆಡುನುಡಿಯ ಸರಳ ಕನ್ನಡವನ್ನು ಬಳಸಿದ್ದು ವಚನದ ರೂಪ ಬೇಗ ಜನರನ್ನು ತಲುಪಲು ಪ್ರಮುಖವಾದ ಅಂಶ. ಹಿರಿಕಿರಿಯ ವಚನಕಾರರು ಸೇರಿ ಈ 'ವಚನ' ಎಂಬ ಗದ್ಯರೂಪದ, ಪದ್ಯದ ಲಯ ಹಾಗೂ ಗುಣವುಳ್ಳ ಹೊಸರೂಪವೊಂದನ್ನು ಹೊಸವಸ್ತುವಿಗಾಗಿ ರಚಿಸಿದರು. ಹೊಗಳುವುದಕ್ಕೆ ಮಾತ್ರವಿದ್ದ ಸಾಹಿತ್ಯವನ್ನು ಪ್ರತಿಭಟನೆಯ ಅಸ್ತ್ರವಾಗಿ ವಚನ ಚಳವಳಿ ಸಮರ್ಥವಾಗಿ ರೂಪಿಸಿತು.



ಸಾಗರದ ಗಾಂಧಿ ಮಂದಿರದಲ್ಲಿ ನವಕರ್ನಾಟಕ ಪುಸ್ತಕ ಪ್ರದರ್ಶನವನ್ನು ಪತ್ರಕರ್ತರ ಸಂಘದ ನಿರ್ದೇಶಕರಾದ ಶ್ರೀ ಕೆ. ಎನ್. ಭಟ್ ಉದ್ಘಾಟಿಸಿದರು. ಕಾಂಗ್ರೆಸ್ ಪಕ್ಷದ ಶ್ರೀ ಜಿ. ಎನ್. ಪೈ, ಸಮಾಜ ಸೇವಕ ಶ್ರೀ ಶಿವಾನಂದ ಕುಗ್ವೆ, ಪ್ರಜ್ಞಾರಂಗದ ಶ್ರೀ ಎಚ್. ಬಿ. ರಾಘವೇಂದ್ರ ಉಪಸ್ಥಿತರಿದ್ದರು.

ಕವಿಯೊಬ್ಬ ಜನರೊಂದಿಗಿದ್ದಾಗ ಎಷ್ಟು ಜನಪರವಾದ, ಜನರಿಗೆ ಹತ್ತಿರವಾದ ಭಾಷೆಯಲ್ಲಿ ಸಾಹಿತ್ಯ ಸೃಷ್ಟಿಯಾಗುತ್ತದೆಂಬುದಕ್ಕೆ ವಚನ ಚಳವಳಿ ಸಾಕ್ಷೀಭೂತವಾಗುತ್ತದೆ. ನಿತ್ಯ ಬದುಕಿನ ಉಪಮೆ, ರೂಪಕಗಳಿಂದ ವಚನಕಾರರು ಸಾಹಿತ್ಯವನ್ನು ರಚಿಸಿದರು.

ಸಮಾಜದ ಆಮೂಲಾಗ್ರ ಬದಲಾವಣೆಗೆ ಸಂಕಲ್ಪ ಮಾಡಿದ ಕಾಯಕಜೀವಿಗಳ ಚಳವಳಿ ಬ್ರಾಹ್ಮಣವರ್ಗದ ಪಿತೂರಿ ಹಾಗೂ ಪ್ರಭುತ್ವದ ದಬ್ಬಾಳಿಕೆಯಿಂದ, ತೀವ್ರ ಹಿನ್ನೆಡೆ ಅನುಭವಿಸಿದ್ದು ಈಗ ಇತಿಹಾಸ. ಬಸವಣ್ಣನವರು ''ನ್ಯಾಯನಿಷ್ಠುರಿ ದಾಕ್ಷಿಣ್ಯಪರನು ನಾನಲ್ಲ'' ಶರಣನಾರಿಗೂ ಅಂಜುವನಲ್ಲ ಎಂದು ಹೇಳಿದರೂ ಸಹ ಪ್ರಭುತ್ವವು ಕುಶಲಕರ್ಮಿಗಳು, ಸೇವಾಕಾರರ ಮೇಲೆ ದಾಳಿ ಶುರುಮಾಡಿದಾಗ ತನ್ನ ಮಂತ್ರಿಪದವಿಗೆ ರಾಜೀನಾಮೆ ನೀಡುವ ಮೂಲಕ ಅದನ್ನು ಧಿಕ್ಕರಿಸುತ್ತಾರೆ. ''ಅರಸು ಮುನಿದರೆ ನಾಡೊಳಗಿರಬಾರದಯ್ಯ'' ಎಂದೆನ್ನುತ್ತಾ ಕಲ್ಯಾಣಕ್ಕೆ ನಡೆದುಬಿಡುತ್ತಾರೆ.

ಬಿಜ್ಜಳನ ಸೇನೆಯ ವಿರುದ್ಧ ಮಡಿವಾಳ ಮಾಚಿದೇವನಂತಹ ಉಗ್ರಶರಣರು ಹೋರಾಡಿದಂತೆ ಬಸವಣ್ಣನವರು ಹೋರಾಡಬಹುದಿತ್ತಲ್ಲ ಎಂಬ ಪ್ರಶ್ನೆಯನ್ನು ಅನೇಕರು ಮುಂದಿಡುತ್ತಾರೆ. ಬಸವಣ್ಣನವರ ವರ್ಗಹಿನ್ನೆಲೆ ನೋಡಿದರೆ ಅದು ಅವರಿಂದ ಸಾಧ್ಯವಾಗದ ಮಾತು ಎಂಬುದು ಸ್ಪಷ್ಟವಾಗುತ್ತದೆ. ಶೋಷಕ ಬ್ರಾಹ್ಮಣ ಕುಟುಂಬದಲ್ಲಿ ಹುಟ್ಟಿ, ಅಧಿಕಾರದಲ್ಲಿದ್ದು ಹೋರಾಡಿದವರು ದಮನ ಎದುರಾದಾಗ ಜನರಿಗೆ ದ್ರೋಹ ಬಗೆಯದೇ ಜನರ ಪರವಾಗಿ ನಿಂತು ಬೆಂಬಲಿಸಿದ ಬಸವಣ್ಣನವರ ನೇತೃತ್ವದಲ್ಲಿ ಜರುಗಿದ ಕಾಯಕಜೀವಿಗಳ ಚಳವಳಿಯನ್ನು ಅಂದು ಕ್ರೂರವಾಗಿ ಹತ್ತಿಕ್ಕದೇ ಹೋಗಿದ್ದರೆ ಇಂದು ಕರ್ನಾಟಕದ ಪರಿಸ್ಥಿತಿಯೇ ಬದಲಾಗಿರುತ್ತಿತ್ತು.

**ವೈ. ಗ. ಜಗದೀಶ್**
ಕರುನಾಡ ಸಂಜೆ, ನೆಲ್ಲಿಕೃಪ, ಪಾರ್ಕ್ ಬಡಾವಣೆ, ಶಿವಮೊಗ್ಗ

# ಖರೇ ವಾರಸುದಾರರು

ವೈಕೊಮ್ ಮುಹಮ್ಮದ್ ಬಶೀರ್ ಅವರ
*'The Rightful Inheritors of the Earth'*
ಕತೆಯ ಭಾವಾನುವಾದ

**ಬಿ. ಆರ್. ಪ್ರೊಲೀಸ್ ಪಾಟೀಲ**

ನೆಲ ಇದ್ದರೇ ನೆಲೆ ಎಂಬ ಮಾತು ನನಗೆ ಸತ್ಯದಾಚೆಗಿನ ಸತ್ಯ ಎನ್ನಿಸಿದ್ದು ಈ ವಿಶಾಲ ಭೂಮಿಯ ತುಂಡೊಂದರ ಮಾಲೀಕನಾದಾಗಲೇ. ಅದೇ ಗಳಿಗೆಯಲ್ಲೆ ನನ್ನ ಭವಿಷ್ಯವೂ ಭದ್ರವಾಯಿತು ಎಂಬ ಧೈರ್ಯ ತುಂಬಿಕೊಂಡದ್ದು. ಅದೊಂದು ಎರಡೆಕೆರೆ ತೆಂಗಿನ ತೋಪು. ಅದರಲ್ಲೊಂದು ಹಳೆಯ ಬಿಳಲುಮನೆ. ತೆಂಗಿನ ಕಾಯಿಯ ಬೆಲೆ ತೆಂಗಿನಮರದಷ್ಟೇ ಎತ್ತರಕ್ಕೇರಿದ ದಿನಗಳವು. ಮರಗಳ ತುಂಬ ನೂರರ ಮೊತ್ತದ ಅಸಂಖ್ಯ ಗೊನೆಗಳನ್ನು ಕಲ್ಪಿಸಿಕೊಂಡು ಹಿರಿಹಿರಿ ಹಿಗ್ಗಿದೆ. ಒಟ್ಟಾರೆಯಾಗಿ ಅದೊಂದು ಸುಕಾಲ.

ಹೀಗೇ ಕೆಲದಿನ ಸುಖದಿಂದಿರುವಾಗಲೇ ಬಂದರು ನೋಡಿ ಅಡ್ಡಕಸಬಿಗಳು; ಮಾಲೀಕತ್ವದ ಹಕ್ಕನ್ನೇ ಧಿಕ್ಕರಿಸಿ, ಬದು-ಬೇಲಿಗಳನ್ನು ಕಡೆಗಣಿಸಿ, ನನ್ನ ದೆವ್ವಿನಂಥ ಕಾವಲುನಾಯಿಯನ್ನು ಸೋಲಿಸಿಯೋ, ಸಮ್ಮೋಹನಗೊಳಿಸಿಯೋ ನನ್ನ ತೋಟವನ್ನು ಆಕ್ರಮಿಸಿಕೊಂಡರು. ಯಾರದೆಂದರೆ ಯಾರದೂ, ಸರಕಾರದ್ದೂ ಕೂಡ ದರಕಾರ ಇರಲಿಲ್ಲ ಈ ಅತ್ರಿಕಮಣಕಾರರಿಗೆ. ಯಾರಪ್ಪಾ ಇಂಥವರು, ಎಂಬ ಕುತೂಹಲ ಅಲ್ಲವೇ ನಿಮಗೆ ?

ನಾನಾ ತರದ ಹಕ್ಕಿಗಳು ಹಾಗೂ ಪಾತರಗಿತ್ತಿಗಳು ಇವರಲ್ಲಿ ಮೊದಲಿಗರು. ಚಿಗಿತ ಹಾಗೂ ಫಲಿತ  ರೆಂಬೆಕೊಂಬೆಗಳ ಮೇಲೆ ಕುಳಿತು ಹಕ್ಕಿಗಳ ಕಲರವವನ್ನು ಕೇಳುವುದು, ಹೂವಿಂದ ಹೂವಿಗೆ ಹಾರುವ ಬಣ್ಣ-ಬಣ್ಣದ ಪಾತರಗಿತ್ತಿಗಳನ್ನು ನೋಡುವುದು ಒಂದು ಆಹ್ಲಾದಕರ ಅನುಭವ. ಸ್ವರ್ಗದ ಅನುಭವ ನೀಡುವ ಇಂಥ ಹಕ್ಕಿಗಳನ್ನು, ಚಿಟ್ಟೆಗಳನ್ನು ಬೆದರಿಸಿ ಓಡಿಸುವುದು ಸಾಧುವೆ ? ಸಾಧ್ಯವೆ ?

ನಂತರ ಬಂದದ್ದು 'ಕಾವ್-ಕಾವ್' ಎಂಬ ಕರ್ಕಶ ಸದ್ದು ಮಾಡುವ ಕಾಗೆಗಳು. ಬರಿ ಸದ್ದು ಮಾಡಿದ್ದರೆ ಕಿವಿಯಲ್ಲಿ ಅರಳೆ ಹಾಕಿಕೊಂಡಾದರೂ ಸಹಿಸಿಕೊಳ್ಳಬಹುದಿತ್ತು. ಆದರೆ ಇವು ಆಗಾಗ ನಮ್ಮ ಕೋಳಿಮರಿಗಳ ಮೇಲೆರಗಿ ಎದೆ ನಡುಗಿಸತೊಡಗಿದವು.

ಆಮೇಲೆ ಬಂದವು ನೋಡಿ ಹದ್ದುಗಳು ;  ತೆಂಗಿನಗರಿಗಳ ಮೇಲೆ ಉಸಿರು ಬಿಗಿಹಿಡಿದು ಜಪ್ಪಿಸಿ ಕುಳಿತು ನಮ್ಮ ಕೋಳಿಹಿಂಡನ್ನೇ ದಿಟ್ಟಿಸತೊಡಗಿದವು.



ಹತ್ತಿರವೇ ಇದ್ದ ಬಿದಿರುಮೆಳೆಗಳಲ್ಲಿ ನಂತರ ಕಾಣಿಸಿಕೊಂಡದ್ದು ಮುಂಗುಸಿಗಳು. ಬೆನ್ನಹಿಂದೆಯೇ ಬಂದು ಕಂಟಿಗಳಲ್ಲಿ ಮನೆ ಮಾಡಿಕೊಂಡು ನಿದ್ದೆಗೆಡಿಸಿದವು ನರಿಗಳು. ಈ ಎಲ್ಲ ಎಲ್ಲರ ಕಣ್ಣೂ ನಮ್ಮ ಮುದ್ದು ಕೋಳಿಗಳ ಮೇಲೆಯೇ.

ಇವರೆಲ್ಲ ಇಲ್ಲಿಗೇಕೆ ಬಂದು ಟೆಂಟ್ ಹಾಕಬೇಕು ? ನಮ್ಮ ತೋಟದ ಮೇಲೆ ಇವರಿಗೆಲ್ಲಿದೆ ಹಕ್ಕು ? ಎಂದು ಆಲೋಚಿಸುತ್ತ ತೋಟದ ಮನೆಗೆ ಹೊರಟಾಗ ಧುತ್ತೆಂದು ಎದುರು ನಿಲ್ಲಬೇಕೆ ಮತ್ತೊಬ್ಬ ಅತಿಥಿ ! ಕಾಲು-ಕೈ-ರೆಕ್ಕೆ ಪುಕ್ಕಗಳಿಲ್ಲದಿದ್ದರೂ ಕಾಲ ಕಳೆಯುವಂಥ ವ್ಯಕ್ತಿತ್ವದ ಬುಸುಬುಸು ನಾಗಪ್ಪ !!

ಮಿಂಚು ಮೈ, ಹೊಂಚುಹಾಕುವ ಕಣ್ಣು, ಟಿಸಿಲೊಡೆದ ನಾಲಿಗೆ, ಬಿಚ್ಚಿಹಿಡಿದ ಬೊಗಸೆಯಂಥ ಜೋಡಿಪದುಮದ ಹೆಡೆ. ಅಬ್ಬಾ ! ನಿಜವಾದ ರಾಜ ಈ ನಾಗರಾಜ. ''ನಿನ್ನದೂ ಅಲ್ಲ, ನಿನ್ನಪ್ಪನದೂ ಅಲ್ಲ ಈ ಭೂಮಿ. ಯಾಕೆ ಇದು 'ನನ್ನದು' ಎಂದು ಜಂಭಕೊಚ್ಚಿಕೊಳ್ಳುತ್ತೀ ಏ ಜಂಭದಕೋಳಿ ಮನುಷ್ಯನೇ'' ಎಂಬ ಸವಾಲೆಸೆಯುವಂತೆ ನನ್ನೆದುರು ನಿಂತಿದ್ದ ಈ ನಾಗರಾಜ. ''ನಿನ್ನ ತಂಟೆಗೆ ನಾನು ಬರೋದಿಲ್ಲ ಮಹಾರಾಯಾ ಆದಷ್ಟು ಬೇಗ ನನ್ನ ಈ ಎರಡೆಕರೆ ಮಾಲ್ಕಿ ನೆಲಬಿಟ್ಟು ಆಚೆ ತೊಲಗು'' ಎಂದೆ ನಾನು.

ಆದರೆ ಅದು ಮಾಲ್ಕಿಯಲ್ಲದ ನೆಲ ಹುಡುಕಿ ಸೇರಿಕೊಳ್ಳುವುದಾದರೂ ಎಲ್ಲಿ? ಮನುಷ್ಯ ಎಂಬ ಈ ಎರಡು ಕಾಲಿನ ಪ್ರಾಣಿ ಒಂದಿಂಚು ಬಿಡದೆ ಎಲ್ಲ ನೆಲವನ್ನು ಮಾಲ್ಕಿಯನ್ನಾಗಿ ಮಾಡಿಕೊಂಡಿದ್ದಾನಲ್ಲ! ಪಿಸುಮಾತನ್ನೂ ಆಡದೆ ಅದು ಹೊರಟುಹೋಯಿತೆನ್ನುವಷ್ಟರಲ್ಲಿ ಬುಸುಗುಡುತ್ತ ಬಂದಳು ನನ್ನ ಹೆಂಡತಿ :

''ಗಂಡಸರು ನೀವು, ಜವಾಬ್ದಾರಿ ಅದ ಏನ್ರಿ ನಿಮಗ ? ಹಲಸಿನಹಣ್ಣು ಇಣಚಿ ಪಾಲಾಗಾಕ ಹತ್ಯಾವು, ಕಾಗಿ ಕಣ್ಣಕಪ್ಪಡಿ, ಮಾವು, ಪೇರಲ, ಚಿಕ್ಕು ಹಣ್ಣು ತಿಂದು ಹೋಗಾಕ ಹತ್ಯಾವು. ಇದನ್ನ ನೋಡಿ ಏನೂ ಅನಸೂದಿಲ್ಲೇನು ನಿಮಗ ?''

''ಬ್ಯೂಟಿಫುಲ್ !''

''ಏನ್ ಬ್ಯೂಟಿಫುಲ್. ನಿಮ್ಮ ತಲಿ !''

''ಕಣ್ಣುಬಿಟ್ಟು ನೋಡೇ ಗೊತ್ತಾಗ್ತದ. ಆ ಸರ್ವಶಕ್ತ, ಸರ್ವವ್ಯಾಪಿ ಭಗವಂತ ಅವನೇ  ಈ ವಿಶ್ವದ ಮಾಲೀಕ, ಅವನೇ ವಿಶ್ವನಾಥ. ತನ್ನ ಅಗಾಧ ಸೃಷ್ಟಿಯೊಳಗ ಏನೆಲ್ಲ ಸೃಷ್ಟಿ ಮಾಡೀದಾನ ನೋಡು. ಹಣ್ಣು-ಹಂಪಲ, ಗೆಡ್ಡೆ-ಗೆಣಸು. ಹುಲ್ಲು-ಹೂವು, ಕಾಳು-ಕಡಿ, ನೀರು-ಗಾಳಿ, ಚಳಿ-ಬಿಸಿಲು...ಇದರ ಅರ್ಥ ಏನ್ ಹೇಳು... ನಾನೇ ಹೇಳ್ತೀನಿ ಕೇಳು : ಈ ಎಲ್ಲಾ ವಸ್ತುಗಳ ಮ್ಯಾಲೆ ಮನುಷ್ಯನದು ಎಷ್ಟು ಹಕ್ಕು ಅದೆಯೋ ಅಷ್ಟೇ ಹಕ್ಕು ಹಕ್ಕಿ-ಪಕ್ಕಿಗಳದೂ ಅದ.''

''ಇರಬಹುದು. ಆದರ ನಮ್ಮ ತೋಟ ಬಿಟ್ಟು ಹೊರಗಹೋಗಿ ಏನಬೇಕಾದ್ದು ಮಾಡಿಕೋಳ್ಳಿ ಅವ್ರು. ಇಲ್ಲೇ ಯಾಕೆ ಈ ಅಧಿಕಾರ ತೋರಸಬೇಕು. ಹಕ್ಕು ಸಾಧಿಸಬೇಕು ? ನನಗ ಇದಕಿಂತ ಮಹತ್ವ ಕೆಲಸದ ಪ್ಯಾಟಿಯೊಳಗ'' ಎಂದವಳು ಬಿರಬಿರನೆ ಹೊರಟುಹೋದಳು. ನಾನು ನಿಟ್ಟುಸಿರಿಟ್ಟೆ. ಯಾಕೆಂದರೆ ಇವಕ್ಕೆ ಉಳಿಗಾಲ ಇಲ್ಲ ಎಂಬ ಸತ್ಯದ ಅರಿವು ನನಗಾಗಿತ್ತು.

''ದೇವರೆ, ಇದೆಂಥಾ ದುರ್ದೈವ. ಮನುಷ್ಯ ಬದುಕಬೇಕಾದರ ಇಲಿಗಳನ್ನ ಯಾಕ ಕೊಲ್ಲಬೇಕು ? ಇತರ ಪ್ರಾಣಿಗಳನ್ನ ಕೊಲ್ಲದ ಮನುಷ್ಯ ಬದುಕೋದು

ಸಾಧ್ಯ ಇಲ್ಲೇನು ? ಹೀಂಗ ಬದುಕಲಿಕ್ಕೆ ಸಾಧ್ಯ ಆಗೂವಂಥ ಒಂದು ಹೊಚ್ಚ ಹೊಸ ವೈಜ್ಞಾನಿಕ ಮಾರ್ಗ ಹುಡುಕಬೇಕಲ್ಲ'' ಎಂದುಕೊಂಡೆ.

''ಓ ಮೂಷಿಕಪಿತನೆ, ಪಶುಪತಿನಾಥನೆ, ಕೊಲ್ಲುವವರನ್ನು ಕಾಯಪ್ಪಾ ತಂದೆ. ನಿನ್ನ ಮಕ್ಕಳಾದ ಇಲಿಗಳನ್ನು ಕೊಲ್ಲುವವರಿದ್ದೇವೆ, ಸಮ್ಮೋಹದಿಂದಾದರೂ ಸೈ, ದ್ರೋಹದಿಂದಾದರೂ ಸೈ. ಕೊಲ್ಲುವುದು ಮಾತ್ರ ಗ್ಯಾರಂಟಿ. ನಾವಾದರೂ ಏನು ಮಾಡೇವು ? ತಿಂಗಳಿಗೆ ಒಂಬೈನೂರು ಎಳೆನೀರಕಾಯಿಗಳು ನೆಲಕಚ್ಚುವಂತೆ ಮಾಡುತ್ತಿವೆ ನಿನ್ನ ಈ ಮಕ್ಕಳು. ನಮ್ಮ ಬದುಕಿಗೆ ಈ ಕಾಯಿಗಳೇ ಶ್ರೀರಕ್ಷೆ. ಆದ್ದರಿಂದ ನೀನೇ ನಮ್ಮನ್ನು ರಕ್ಷಿಸಬೇಕು'' ಎಂದು ನಾನು ಭಗವಂತನಲ್ಲಿ ಮೊರೆಯಿಟ್ಟೆ.

ಎರಡು ತಾಸುಗಳ ನಂತರ ಪೇಟೆಯಿಂದ ಮರಳಿದ ನನ್ನ ಹೆಂಡತಿ ಅದು ಇದು ಕೊಳ್ಳುವುದರ ಜೊತೆಗೆ ಪಟ್ಟಣದಿಂದ ಇಲಿ ಪಾಷಾಣದ ಒಂದು ದೊಡ್ಡ ಪೊಟ್ಟಣವನ್ನೂ ಕೊಂಡು ತಂದಿದ್ದಳು.

ಬಾಳೆಹಣ್ಣು, ಅನ್ನ-ಅಂಬಲಿ ಜೊತೆಗೆ ಇದನ್ನೂ ಬೆರೆಸಿ ಎಲ್ಲ ಕಡೆಗೂ ಇಡಲಾಯಿತು. ತೆಂಗಿನ ಮರಗಳ ಕೆಳಗೂ, ನಾಲ್ಕು ದಿನ ಬಿಟ್ಟೂ ಬಿಡದೆ ಹೀಗೆಮಾಡಿದಾಗ : ಐದುಕೋಳಿ, ಹನ್ನೆರಡು ಅಳಿಲು, ಇನ್ನೂರು ಇಲಿಗಳು, ಒಂದು ಬೆಕ್ಕು ಪರದೆ ಹಿಂದೆ ಸರಿದು ಅಪ್ಪನಮನೆ ಸೇರಿದವು. ಎಲ್ಲಿ ನೋಡಿದರಲ್ಲಿ ಸಾವಿನ ಸುಗ್ಗಿ!

ಅಟ್ಟದ ಮೇಲೆ ಸತ್ತ ಇಲಿಗಳ ಗಬ್ಬುನಾತ. ದಿನವೂ ನೂರರ ಸಂಖ್ಯೆಯಲ್ಲಿ ಇಲಿಗಳೇನೋ ಸತ್ತವು. ಆದರೆ ಎಳೆತೆಂಗಿನಕಾಯಿಗಳು ಎಂದಿನಂತೆ ಬೀಳುತ್ತಲೇ ಇದ್ದವು. ಯಾಕೆ ಹೀಗೆ ? ಯಾರು ಇದಕ್ಕೆಲ್ಲ ಕಾರಣ ? ಎಂಬೆಲ್ಲ ಲೆಕ್ಕಾಚಾರ ನಡೆಯಿತು ಹದಿನೈದು ದಿನಗಳ ಕಾಲ.

''ಹಾಂ ಸಿಕ್ಕರು ಚೋರರು. ಎಳೆತೆಂಗಿನಕಾಯಿಗಳನ್ನು ಕುಕ್ಕಿ ನೀರು ಹೀರಿ ಕೆಳಗೆ ಕೆಡವುವ ಕಿಡಿಗೇಡಿಗಳು ಈ ಗೂಬೆಗಳು'' ಎಂದರು ಮರವೀರರು.

ನನಗೆ ನಗುಬಂತು. ''ಗೂಬೆಗಳು ಶಾಕಾಹಾರಿಗಳಲ್ಲ'' ಎಂಬ ಪೌರಾಣಿಕ ಸತ್ಯಕ್ಕೆ ಮಣ್ಣುಕೊಡುವುದೇ ? ಕೇಳಿತು ಮನಸ್ಸು. ಮತ್ತೆರಡು ತಿಂಗಳು ಕಳೆಯುವುದರೊಳಗೆ ಖರೇ ಅಪರಾಧಿಗಳನ್ನು ಪತ್ತೆಹಚ್ಚಲಾಯಿತು. ಕಣ್ಣುಕಪ್ಪಡಿಗಳೇ ಈ ಘೋರ ಅಪರಾಧ ಎಸಗಿದ್ದು. ಮುಸ್ಸಂಜೆಯಾಗುತ್ತಲೆ ಗುಂಪುಗುಂಪಾಗಿ ಹಾರಿಬಂದು ಎಳೆತೆಂಗುಗಳ ಮೇಲೆ ದಾಳಿ ಮಾಡುತ್ತಿದ್ದವು; ಕವಚ ಗೀರಿಗೀರಿ, ಎಳೆನೀರು ಹೀರಿಹೀರಿ, ಎಳೆಕೊಬ್ಬರಿ ತಿಂದು ಹಾರಿಹೋಗುತ್ತಿದ್ದವು, ಎಲ್ಲ ಬೆಳಗಾಗುವುದರೊಳಗಾಗಿ.

''ಒಂದು ಬಂದೂಕು, ಸುಂದರವಾದ ಗನ್ನು ಕೊಳ್ಳಬೇಕು, ಈ ಕಣ್ಣುಕಪ್ಪಡಿ, ಗುಳ್ಳೆನರಿ, ಹದ್ದು, ಕಾಗೆ, ಕಾಡುಬೆಕ್ಕುಗಳನೆಲ್ಲ ಕೊಂದು ಹಾಕಬೇಕು'' ಎಂದಳು ಮನೆಯಾಕೆ.

''ಯಾಕೇ ಯಾಕೆ ಗನ್ನು, ಕೊಲ್ಲು ಕೊಲ್ಲು ಎಂಬ ಸ್ಲೋಗನ್ನು ? ಗನ್ನು ಕ್ರೌರ್ಯದ ತಂದೆ, ಪಾಪದ ಮಗ. ಮನುಷ್ಯ ಈ ಗನ್ನು ಎಂಬ ವಸ್ತುವನ್ನು ಯಾಕಾದರೋ ಶೋಧಿಸಿದನೊ'' ಎಂದರೆ...

''ನಿಮ್ಮ ಕೈಯಿಂದೇನಾಗ್ತದ ಬಿಡ್ರಿ... ನಮ್ಮ ತಮ್ಮನ್ನ ಕರಸ್ತೀನಿ ಅಂವಾ ಎಲ್ಲಾ ನೋಡಿಕೋತಾನ.''

ಅಂದಂತೆ ಮಾಡುವುದೇ ಈ ಅಂದಗಾತಿಯ ಜಾಯಮಾನ. ಬಂದೇಬಿಟ್ಟ ಇವಳ ತಮ್ಮ ಬಂದೂಕು ಬಗಲಿಗೆ ನೇತು ಹಾಕಿಕೊಂಡು.

''ಹತ್ತು ಚದರಮೈಲು ಏರಿಯದೊಳಗ ಕಮ್ಮಿ ಅಂದರೂ ದಿನಕ್ಕ ಹತ್ತುಸಾವಿರ ಎಳೆ ತೆಂಗಿನಕಾಯಿ ನೆಲಕ್ಕ ಬೀಳ್ತಾವ. ಅಂದರೇನು. ಈ ರೈತರು ಬದುಕೋದು ಹ್ಯಾಂಗ ? ಬಾಳೋದು ಹ್ಯಾಂಗ ?'' ಇದು ನನ್ನವಳ ವಾದ.

''ಈ ಕಣ್ಣಕಪ್ಪಡಿಗಳನ್ನು ಇಲ್ಲಿ ಕೊಂದರ ಶಾಶ್ವತ ಪರಿಹಾರ ಸಾಧ್ಯ ಇಲ್ಲ. ಇವುಗಳ ಮೂಲ ಹುಡುಕಿ ಒಂದೂ ಬಿಡದಾಂಗ ಎಲ್ಲಾ ಎಲ್ಲಾ ಕೊಂದುಹಾಕಬೇಕು.''

ನನ್ನ ಹೆಂಡತಿ, ಅವಳ ತಮ್ಮ, ಮತ್ತವರ ಬಳಗ ಎಲ್ಲ ತಲೆಗೂಡಿಸಿ ಹಾಕಿದ ಲೆಕ್ಕಾಚಾರ ಇದು.

ಕೊನೆಗೂ ಇವರ ತಲೆಯಲ್ಲಿ ದೀಪ ಹತ್ತಿತು. ಹತ್ತಿರದ ದ್ವೀಪವೊಂದರಲ್ಲಿ ಒಂದು ಹಳೆಯ ಗುಡಿ. ಅದರ ಪಕ್ಕದಲ್ಲಿರುವ ಎರಡು ದೊಡ್ಡ ಆಲದಮರಗಳೇ ಈ ಕಣ್ಣಕಪ್ಪಡಿಗಳ ತವರು ಎಂದು ಗುರುತಿಸಿಬಿಟ್ಟರು ಗುರಿಕಾರರು.

''ಇನ್ನು ಇವುಗಳ ಕತಿ ಮುಗೀತು. ಒಂದೆರಡು ದಿನದೊಳಗ, ಇವನ್ನೆಲ್ಲ ಮುಗಿಸಿಬಿಡ್ತೀನಿ. ಭಾವ, ಬರ್ರಿ ಬಂದು ನೋಡೂದಿಲ್ಲೇನು. ನಾನು ಆಡೊ ಕಣ್ಣಕಪ್ಪಡಿ ಬ್ಯಾಟೀನ ?'' ಆಹ್ವಾನಿಸಿದ ಭಾವಮೈದ.

''ಅಯ್ಯೊ ಬಡಪಾಯಿ ಬ್ಯಾಟುಗಳೇ ರಕ್ಷಿಸಿಕೊಳ್ಳಿ ನಿಮ್ಮನ್ನು ನೀವೇ'' ನಾನು ಪ್ರಾರ್ಥಿಸಿದೆ ಮನದೊಳಗೇ.

ನನ್ನ ಪ್ರಾರ್ಥನೆಗೆ ಫಲ ದೊರಕಿತು, ಪವಾಡ ನಡೆದೇ ಬಿಟ್ಟಿತು. ಕಣ್ಣಕಪ್ಪಡಿಗಳ ಪ್ರಾಣ ಉಳಿಯಿತು.

ಹೂಂಕರಿಸುತ್ತ ಹೋಗಿದ್ದ ನನ್ನ ಹೆಂಡತಿ, ಭಾವಮೈದ ಮತ್ತು ಊರ ಬಳಗ ಹ್ಯಾಪುಮೋರೆ ಹಾಕಿಕೊಂಡು ಮರಳಿದರು.

''ಯಾಕೆ, ಬೇಗ ಬಂದಿರಿ ?'' ಎಂದರೆ,

''ಪ್ರಾಣವುಳಿಸಿಕೊಂಡು ಮರಳಿ ಬಂದದ್ದೇ ಹೆಚ್ಚು'' ಎಂದರು.

''ಯಾಕೆ ಏನಾಯ್ತು ?''

''ಆ ದ್ವೀಪದ ನಿವಾಸಿಗಳು ನೂರಾರು ಜನ ಬಡಿಗೆ, ಜಂಬೆ, ಹತ್ಯಾರು ಹಿಡಿದು ನಮ್ಮನ್ನ ಕೊಲ್ಲಾಕ ಬಂದರು. ಈ ಕಣ್ಣಕಪ್ಪಡಿ ಕೊಂದರ ನಿಮ್ಮ ಕಿಪ್ಪಡಿ ಮುರೀತೀವಿ. ನಿಮ್ಮನ್ನ ಕಡದು ಚೂರ್‌ಚೂರ್ ಮಾಡ್ತಿವಿ ಅಂತ ಅಟ್ಟಿಸಿಗೊಂಡು ಬಂದರು. ಯಾಕ್ ಗೊತ್ತಾ?''

''ಯಾಕೆ ?''

''ಈ ಕಣ್ಣಕಪ್ಪಡಿಗಳು ಅಂದರ ಅವರ ಅಜ್ಜ, ಮುತ್ತಜ್ಜರ ಆತ್ಮ ಅಂತ ನಂಬ್ಯಾರ ಮೂರ್ಖರು'' ಎಂದರು ಈ ಜಾಣರು.

''ಮೂರ್ಖರಿಗೆ ಜಯವಾಗಲಿ'' ಜೋರಾಗಿ ಚೀರಿತು ನನ್ನ ಮನಸ್ಸು.

ಕಣ್ಣಕಪ್ಪಡಿ ಯಾರ ಆತ್ಮಗಳೂ ಅಲ್ಲ. ಅವೂ ನಮ್ಮ ಹಾಂಗ. ಉಳಿದೆಲ್ಲಾ ಪ್ರಾಣಿಪಕ್ಷಿಗಳ ಹಾಂಗ ಪರಮಾತ್ಮನ ಸೃಷ್ಟಿ. ಎಳಿತೆಂಗು ಬೀಳ್ತಾನs ಇರಲಿ, ಅವು ಉಂಡು ತಿಂದು ಬಿಟ್ಟದ್ದಷ್ಟು ನಮ್ಮ ಪಾಲಿಗಿರಲಿ ; ತೆಂಗಿನಮ್ಯಾಲ ನಮಗಿದ್ದಷ್ಟು ಹಕ್ಕು ಅವಕ್ಕು ಇರಲಿ. ತಾಳೆ-ತೆಂಗು, ಬಾಳೆ-ಕಂಗು ಹ್ಯಾಂಗೊ ಹಂಗೇ ಇಲಿ-ಬೆಕ್ಕು, ಹಾವು-ಮುಂಗಲಿ, ಹದ್ದು-ಕಾಗಿ, ಗಿಳಿ-ಗೊರವಂಕ ಎಲ್ಲಾ ಎಲ್ಲಾ ಆ ಭಗವಂತನ ಸೃಷ್ಟಿ, ಈ ಭೂಮಿಯ ವಾರಸುದಾರರು ಇವರೆಲ್ಲಾ...

ಅವರಂತೂ ನನ್ನ ಮಾತು ಪೂರ್ತಿ ಕೇಳಲಿಲ್ಲ – ನೀವು ?

---

ಭಾವಾನುವಾದ : **ಬಿ. ಆರ್. ಪೊಲೀಸ್ ಪಾಟೀಲ**
'ವಾತ್ಸಲ್ಯ', ಬನಹಟ್ಟಿ - ೫೮೭ ೩೧೧
ಬಾಗಲಕೋಟೆ ಜಿಲ್ಲೆ

# ನಭದ ಗುರುವಿನ ಹಕ್ಕು ಭುವಿಯ ಗುರುವಿಗೆ ಕೋಕ್

ಅರವಿಂದ ಚೊಕ್ಕಾಡಿ

ನನ್ನ ಭಾರತದಲ್ಲಿ ಹೊಟ್ಟೆ ತುಂಬಾ ಉಣ್ಣಲು ಅನ್ನವಿಲ್ಲದ, ಮೈ ತುಂಬಾ ತೊಡಲು ಬಟ್ಟೆಯಿಲ್ಲದ, ಬರೆಯಲು ಸ್ಲೇಟು-ಬಳಪವಿಲ್ಲದ, ಓದಲು ಚೂರು ಪೇಪರೂ ಸಿಗದ, ತಲೆಯ ಮೇಲೊಂದು ಸೂರೂ ಇಲ್ಲದ ಪುಟ್ಟ ಪುಟ್ಟ ಮಕ್ಕಳು ರಾಶಿರಾಶಿ ಇದ್ದಾರೆ.

ಬಾನಲಿ ತಾರಾವೃಂದದ ನಡುವೆ ಚಂದ್ರಗೆ
ಮೆರವಣಿಗೆ
ಭೂಮಿಯೆ ಹಾಸಿಗೆ ಗಗನವೆ ಹೊದಿಕೆ ಎಂದೂ
ಬಡವನಿಗೆ
ಬೀದಿಯೆ ಮನೆಯವಗೆ...

ಈ ಪುಟ್ಟ ಮಕ್ಕಳ ತಾಯಿ ತಂದೆಯರು ಇದಕ್ಕಿಂತ ಹೆಚ್ಚು ಬೇರೇನೂ ಅಲ್ಲ. ಮಕ್ಕಳಿಗೆ ನಾಲ್ಕಕ್ಷರ ಕಲಿಸಬೇಕಾದ ಅಗತ್ಯ ಈ ತಾಯಿತಂದೆಯರಿಗಿನ್ನೂ ಅರಿವಾಗಿಲ್ಲ. ಮನವರಿಕೆ ಮಾಡಿದವರೂ ಇಲ್ಲ.

ಇಲ್ಲೆಲ್ಲ ಹರಕಲು ಮುರುಕಲು ಶಾಲೆಗಳಿವೆ. ಒಬ್ಬರೊ ಇಬ್ಬರೋ ಶಿಕ್ಷಕರು ಏದುಸಿರು ಬಿಡುತ್ತಾ ಎಲ್ಲ ಪಾಠಗಳನ್ನು ಮಾಡುತ್ತಾರೆ. ಬಿಇಒ ಕಚೇರಿಗೆ ಓಡುತ್ತಾರೆ. ಸಿಕ್ಕ ಬಿಟ್ಟಿ ಚಾಕರಿಗಳನ್ನೆಲ್ಲ ಮಾಡುತ್ತಾರೆ. ಅವರಿಗೆ ಸಂಬಳ ಬರುತ್ತದೊ ಇಲ್ಲವೋ ಎಂಬುದರ ಬಗ್ಗೆ ಖಾತ್ರಿಯಿಲ್ಲ. ಶಾಲೆಯಲ್ಲಿ ಚಾಕ್‌ಪೀಸ್ ಇಲ್ಲ, ಪಾಠ ಪುಸ್ತಕವಿಲ್ಲ, ಕರಿಹಲಗೆಯಿಲ್ಲ. ಈ ಶಾಲೆಗೆ ಬರುವ ಮಕ್ಕಳು ರೇಡಿಯೋದ ಹೆಸರು ಕೇಳಿದ್ದಾರೆ. ದೂರದರ್ಶನ ದೂರವೆ ಉಳಿಯಿತು. ಹಾಗೋ ಹೀಗೋ ಇರುವ ಶಿಕ್ಷಕರು ನಾಲ್ಕಕ್ಷರ ಹೇಳಿಕೊಡುವ ಪ್ರಯತ್ನ ಮಾಡುತ್ತಿದ್ದಾರೆ.

ಇಲ್ಲೇ ಪಕ್ಕದಲ್ಲಿ, ''ಅಮೆರಿಕದಲ್ಲಿ ಶಿಕ್ಷಣ ವ್ಯವಸ್ಥೆ ಎಷ್ಟು ಚೆನ್ನಾಗಿದೆ ಗೊತ್ತುಂಟಾ. ನಿಮಗೇನು ಧಾಡಿ? ನಮ್ಮ ಶಿಕ್ಷಕರು ದಡ್ಡು ಕಟ್ಟಿ ಹೋಗಿದ್ದಾರೆ. ನೀವು ಪಿಯಾಜೆಯನ್ನು ಓದಿದ್ದೀರಾ? ಮಾಂಟೆಸರಿ ಗೊತ್ತಾ? ಏನೂ ಇಲ್ಲ, ಬರೀ ಅನ್ನದಂಡಕ್ಕೆ. ಹೋಗಲಿ, ಈಗ ಎಜುಸ್ಯಾಟ್ ಬಂದಿದೆ. ಮುಂದಾದರೂ ಚೆನ್ನಾಗಿ ಪಾಠ ಮಾಡುತ್ತೀರಾ ನೋಡೋಣ'' ಅಂತ ಶಿಕ್ಷಣ ಚಿಂತಕರು ಗದರುತ್ತಿದ್ದಾರೆ.

ಅಮೆರಿಕ ಮಾದರಿಯ ಅಭಿವೃದ್ಧಿಯೇ ನಿಜವಾದ ಅಭಿವೃದ್ಧಿಯೆಂಬ ಹುಚ್ಚು ತಲೆಗೇರಿದವರಿಗೆ ನನ್ನ ಭಾರತದ ಶಾಲೆಗಳು ಅರ್ಥವಾಗುವುದಿಲ್ಲ. ಅಸಲಿಗೆ ನನ್ನ ಭಾರತದ ಶಾಲೆಗಳ ಒಂದು ತರಗತಿಯನ್ನು ಒಂದು ಪಿರಿಯೆಡ್ ಆದರೂ ಎದುರಿಸುವ ತಾಕತ್ತೂ ಇಲ್ಲ. ಯಾಕೆಂದರೆ ತರಗತಿಯ ಒಳಗೆ ಮಕ್ಕಳನ್ನು ಮುಖಾಮುಖಿಯಾಗುವಾಗ ಸಿಗುವ ಅನುಭವವಿದೆಯಲ್ಲ ಅದು ಎಲ್ಲ ಥಿಯರಿಗಳನ್ನೂ ಪಟಪಟನೆ ಹೊಡೆದುರುಳಿಸಿಬಿಡುತ್ತದೆ. ಇದು ಅರ್ಥವಾಗುವ ಯಾವ ವ್ಯಕ್ತಿಯೂ ಅಮೆರಿಕದ ಮಾದರಿಯನ್ನೇ ನಮ್ಮ ಶಿಕ್ಷಣದ ಮಾದರಿಯಾಗಿ ಮುಂದೊಡ್ಡಲಾರ. ಅಮೆರಿಕದ ಸಮಾಜದ ಸ್ವರೂಪವೂ ನಮ್ಮ ಸಮಾಜದ ಸ್ವರೂಪವೂ ಬೇರೆಬೇರೆಯಾಗಿರುವಾಗ ಅಲ್ಲಿನ ಮಾದರಿಗಳು ಅದೇ ಸ್ವರೂಪದಲ್ಲಿ ಇಲ್ಲಿ ಕಾರ್ಯಗತವಾಗಲಾರವು. ಆದಾಗ್ಯೂ ಅಮೆರಿಕ ಮತ್ತದರ ಮಿತ್ರಕೂಟದ ಶಿಕ್ಷಣ ಮಾದರಿಯನ್ನೇ ಸರಿಯಾದ ಶಿಕ್ಷಣದ ಮಾದರಿ ಎಂದೇ ಭಾವಿಸೋಣ. ಆದರೆ ಅಮೆರಿಕದ ಶಿಕ್ಷಣ ವ್ಯವಸ್ಥೆಗೆ ಗಾಂಧಿಯಂತಹ ಒಂದು ವ್ಯಕ್ತಿತ್ವವನ್ನು, ಬುದ್ಧನಂತಹ ಮತ್ತೊಂದು ವ್ಯಕ್ತಿತ್ವವನ್ನು ರೂಪಿಸಲು ಸಾಧ್ಯವಾಗಲಿಲ್ಲ. ಲಿಂಕನ್‌ನನ್ನು ರೂಪಿಸಿದ ಅದೇ ಶಿಕ್ಷಣ ವ್ಯವಸ್ಥೆ ಬುಶ್‌ನನ್ನೂ ರೂಪಿಸಿದೆ. ನಮ್ಮ ಕೆಲವು ಶಿಕ್ಷಣ ಚಿಂತಕರು ಮಾದರಿಯಾಗಿ ತೆಗೆದುಕೊಂಡಿರುವ ಶಿಕ್ಷಣ ವ್ಯವಸ್ಥೆಯಿಂದಲೇ ಬಂದ ಬುಶ್ ಮಹಾಶಯ ಒಬ್ಬ ಸುಶಿಕ್ಷಿತ, ಸುಸಂಸ್ಕೃತ ವ್ಯಕ್ತಿ ನಡೆದುಕೊಳ್ಳುವ ಹಾಗೆ ಎಂದೂ ನಡೆದುಕೊಂಡುದಿಲ್ಲ ಎಂಬುದು ಇಡೀ ಜಗತ್ತಿಗೆ ಗೊತ್ತಿದೆ. ಹೀಗಿರುವಾಗ ಅಮೆರಿಕದ ಶಿಕ್ಷಕರು ಅನುಸರಿಸುವ ವಿಧಾನವನ್ನೇ ನಮ್ಮ ಶಿಕ್ಷಕರೂ ಅನುಸರಿಸಬೇಕಾದ ದರ್ದು ಏನಿದೆ? ಅಥವಾ ನಮ್ಮ ಶಿಕ್ಷಕರ ಬೋಧನಾ ವಿಧಾನಗಳು ಸರಿಯಿಲ್ಲ ಎನ್ನುವುದಕ್ಕೆ ಆಧಾರವೇನಿದೆ? ನೆನಪಿಡಿ, ಅಮೆರಿಕದಲ್ಲಿ ನಡೆದ ಮನೋವೈಜ್ಞಾನಿಕ ಸಂಶೋಧನೆಗಳ ಮಿತಿಗಳನ್ನು ಮೀರಿ ಒಬ್ಬ ವಿದ್ಯಾರ್ಥಿ ರೂಪುಗೊಳ್ಳುತ್ತಾ ಹೋಗಬಲ್ಲ. ಅದಕ್ಕೆ ಅಂಬೇಡ್ಕರ್‌ಗಿಂತ ಒಳ್ಳೆಯ ಉದಾಹರಣೆ ಬೇಕಾಗಿಲ್ಲ.

ಇಷ್ಟೆಲ್ಲ ಪೀಠಿಕೆ ಯಾಕೆಂದರೆ, ನಮ್ಮ ಶೈಕ್ಷಣಿಕ ವಲಯದ ಒಂದು ವರ್ಗ ಎಜುಸ್ಯಾಟ್ ಉಡ್ಡಯನವನ್ನು 'ನಭದಲ್ಲಿರುವ ಗುರು', 'ಮುಂದಿನ ಶಿಕ್ಷಣ ಕ್ರಾಂತಿಯ ಹರಿಕಾರ' ಎಂದೆಲ್ಲ ಬಣ್ಣಿಸಿರುವುದಕ್ಕಾಗಿ. ನಿಜ ಹೇಳಬೇಕೆಂದರೆ ಎಜುಸ್ಯಾಟ್‌ನ ಪ್ರಯೋಜನಗಳು, ಯಾವುದೇ ಹೊಸದನ್ನು ಅತ್ಯಂತ ಸ್ಥಿತಿಸ್ಥಾಪಕವಾಗಿ ಸ್ವೀಕರಿಸುವ ಭಾರತದ ಬೆರಳೆಣಿಕೆಯ ಮೇಲುವರ್ಗವನ್ನು ಬಿಟ್ಟರೆ ಬೇರಾರನ್ನೂ ತಲುಪಲಾರದು. ಈ ಪ್ರಯೋಜನವನ್ನು ಪಡೆಯಲು ಬೇಕಾದ ಆರ್ಥಿಕ ಸಾಮರ್ಥ್ಯ ಇಲ್ಲದಿರುವವರ ಸಂಖ್ಯೆ ಜಾಸ್ತಿ ಇರುವುದು ಒಂದು ಕಾರಣವಾದರೆ, ಸರಕಾರವೇ ಎಲ್ಲ ಖರ್ಚನ್ನು ಭರಿಸಿದರೂ ಎಜುಸ್ಯಾಟ್ ಅನ್ನು ಸ್ವೀಕರಿಸಲು ಬೇಕಾದ ಮನೋಧರ್ಮವಿಲ್ಲದೆ ಇರುವುದು ಮತ್ತೊಂದು ಪ್ರಬಲ ಕಾರಣವಾಗಿದೆ. ಇವತ್ತಿಗೂ ನಮ್ಮ ಸಮಾಜದ ಶೇಕಡ ೯೦ ಜನರು ಶಿಕ್ಷಕ-ಶಾಲೆ-ಪಾಠಪುಸ್ತಕಗಳನ್ನು ಶಿಕ್ಷಣದ ಸಂಕೇತಗಳಾಗಿ ಸ್ವೀಕರಿಸಿದ್ದಾರೆಯೇ ವಿನಾ ರೇಡಿಯೋ, ಟಿ.ವಿ., ಕಂಪ್ಯೂಟರ್‌ಗಳನ್ನು ಶಿಕ್ಷಣ ಮಾಧ್ಯಮಗಳಾಗಿ ಸ್ವೀಕರಿಸಿಲ್ಲ. (ಅವನ್ನು ಮನರಂಜನಾ ಮಾಧ್ಯಮವಾಗಿ, ಔದ್ಯೋಗಿಕ ಮಾಧ್ಯಮವಾಗಿ ಸ್ವೀಕರಿಸುವುದಕ್ಕೂ ಶಿಕ್ಷಣ ಮಾಧ್ಯಮವಾಗಿ ಸ್ವೀಕರಿಸುವುದಕ್ಕೂ ವ್ಯತ್ಯಾಸವಿದೆ ಎಂಬುದನ್ನು ಗಮನಿಸಬೇಕು.) ಹೀಗಿರುವಾಗ ರೇಡಿಯೋ, ಟಿ.ವಿ., ಕಂಪ್ಯೂಟರ್‌ಗಳ ಮೇಲೆ ಪ್ರಭುತ್ವ ಸಾಧಿಸಿರದ ಮಕ್ಕಳು ದೂರವಾಣಿ ಮೂಲಕ ಎಲ್ಲೋ ಕುಳಿತಿರುವ ಎಂದೂ ಕಾಣದಿರುವ ಸಂಪನ್ಮೂಲ ವ್ಯಕ್ತಿಗಳೊಂದಿಗೆ ಸಂಭಾಷಣೆ ನಡೆಸಿ ಶಿಕ್ಷಣ ಪಡೆಯುವುದು ಎಷ್ಟರಮಟ್ಟಿಗೆ ಸಾಧ್ಯ? ನಮ್ಮ ಹಳ್ಳಿಯ ಮಕ್ಕಳು ಬಿಇಒ ಜೀಪ್‌ನಲ್ಲಿ ಬಂದರೆ ಹೆದರುತ್ತಾರೆ. ಟೈ-ಕೋಟು ಕಟ್ಟಿದವರನ್ನು ಕಂಡರೆ ಬೆವರುತ್ತವೆ. ಪೊಲೀಸರನ್ನು ಕಂಡರಂತೂ ಮುಗಿದೇ ಹೋಯಿತು. ಇಂತಹ ಮಕ್ಕಳು ಹೈಲೆವೆಲ್ ಸಂಪನ್ಮೂಲ ವ್ಯಕ್ತಿಗಳೊಂದಿಗೆ ದೂರವಾಣಿಯಲ್ಲಿ ಸಂಭಾಷಿಸಿ ಎಷ್ಟರಮಟ್ಟಿಗೆ ಉತ್ತರ ಪಡೆಯಬಲ್ಲರು? ಜಾತಿ ತಾರತಮ್ಯ, ಲಿಂಗ ತಾರತಮ್ಯ, ವರ್ಗ ತಾರತಮ್ಯ, ಮಕ್ಕಳ ಕುರಿತ ಅವಜ್ಞೆಗಳಂತಹ ಸನ್ನಿವೇಶದಿಂದ ಪ್ರಭಾವಿತರಾಗಿ ಮಾತನಾಡುವ ಶಕ್ತಿಯನ್ನೇ ಕಳೆದುಕೊಂಡಿರುವ ಮಕ್ಕಳು ತಮ್ಮ ಸಮಸ್ಯೆಗಳನ್ನು ದಿಟ್ಟವಾಗಿ ಎಜುಸ್ಯಾಟ್ ಸಂಪನ್ಮೂಲ ವ್ಯಕ್ತಿಗಳ ಮುಂದಿಡುವುದು

ಅಮೆರಿಕ ಮಾದರಿಯ ಅಭಿವೃದ್ಧಿಯೇ ನಿಜವಾದ ಅಭಿವೃದ್ಧಿಯೆಂಬ ಹುಚ್ಚು ತಲೆಗೇರಿದವರಿಗೆ ನನ್ನ ಭಾರತದ ಶಾಲೆಗಳು ಅರ್ಥವಾಗುವುದಿಲ್ಲ. ಅಸಲಿಗೆ ನನ್ನ ಭಾರತದ ಶಾಲೆಗಳ ಒಂದು ತರಗತಿಯನ್ನು ಒಂದು ಪಿರಿಯೆಡ್ ಆದರೂ ಎದುರಿಸುವ ತಾಕತ್ತೂ ಇಲ್ಲ. ಯಾಕೆಂದರೆ ತರಗತಿಯ ಒಳಗೆ ಮಕ್ಕಳನ್ನು ಮುಖಾಮುಖಿಯಾಗುವಾಗ ಸಿಗುವ ಅನುಭವವಿದೆಯಲ್ಲ ಅದು ಎಲ್ಲ ಥಿಯರಿಗಳನ್ನೂ ಪಟಪಟನೆ ಹೊಡೆದುರುಳಿಸಿಬಿಡುತ್ತದೆ.

ಅಷ್ಟು ಸುಲಭವಲ್ಲ. ಅವರ ಕೀಳರಿಮೆಯನ್ನು ತೊಲಗಿಸದ ಹೊರತು ಖಂಡಿತವಾಗಿಯೂ ಎಜುಸ್ಯಾಟ್ ಈ ಮಕ್ಕಳನ್ನು ತಲುಪಲಾರದು. ಈ ಕೀಳರಿಮೆಯಿಂದ ಹೊರತಾಗ ಬೇಕಾದರೆ ಒಟ್ಟೂ ವ್ಯವಸ್ಥೆಯ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ ಸನ್ನಿವೇಶಗಳು ಬದಲಾಗಬೇಕಾಗುತ್ತವೆ. ಈ ಕೆಲಸವನ್ನು ಒಳ್ಳೆಯ ತಿಳಿವಳಿಕೆ ಹೊಂದಿದ ಶಿಕ್ಷಕರು ಮಾಡಬಲ್ಲರೇ ಹೊರತು ಯಂತ್ರಗಳು ಮಾಡಲಾರವು. ತರಗತಿಯಲ್ಲಿ ವಿದ್ಯಾರ್ಥಿಯನ್ನು ನೇರವಾಗಿ ಮುಖಾಮುಖಿ ಯಾಗುವ ಶಿಕ್ಷಕನಿಗೆ ವಿದ್ಯಾರ್ಥಿಗಳೊಂದಿಗೆ ಸಂಬಂಧ ಏರ್ಪಡಿಸಿಕೊಳ್ಳಲೇಬೇಕಾದ ಅನಿವಾರ್ಯತೆ ಇದೆ. ಆ ಅನಿವಾರ್ಯತೆಯೇ ದುರ್ಬಲ ವಿದ್ಯಾರ್ಥಿಗಳನ್ನು ಕೊಂಚ ಮೇಲೆತ್ತಲು ಸಹಾಯಮಾಡಬಲ್ಲಂಥದಾಗಿದೆ.

ಈ ಅನಿವಾರ್ಯತೆಯನ್ನು ಗಮನಿಸದೆ ಇರುವುದರ ಪೂರ್ವ ವೇದಿಕೆ ಈಗಾಗಲೇ ಸಿದ್ಧವಾಗಿದೆ. 'ಕಂಪ್ಯೂಟರ್ ಇಲ್‌ಲಿಟರೇಟ್' ಎಂಬ ಪದವನ್ನು ನಾವೆಲ್ಲ ಕೇಳಿದ್ದೇವೆ. ಕಂಪ್ಯೂಟರ್ ಗೊತ್ತಿಲ್ಲದವರನ್ನು ಇಲ್‌ಲಿಟರೇಟ್ ಗಳೊಂದಿಗೆ ಹೊಂದಿಸುವುದು ಸರಿ ಅಂತಾದರೆ ಬೂದಿ ಸೃಷ್ಟಿಸಲು ಗೊತ್ತಿಲ್ಲದವರನ್ನು ಬೂದಿ ಇಲ್‌ಲಿಟರೇಟ್, ಮಾನವಿಕಗಳು ಗೊತ್ತಿಲ್ಲದವರನ್ನು ಆರ್ಟ್ಸ್ ಇಲ್‌ಲಿಟರೇಟ್, ವಿಜ್ಞಾನ ಗೊತ್ತಿಲ್ಲದವರನ್ನು ಸಯನ್ಸ್ ಇಲ್‌ಲಿಟರೇಟ್ ಅಂತೆಲ್ಲ ಕರೆಯಬೇಕಾಗುತ್ತದೆ. ಇದನ್ನೆಲ್ಲ ಬಳಸದೆ ಕಂಪ್ಯೂಟರ್ ಇಲ್‌ಲಿಟರೇಟ್ ಎಂಬ ಪದವನ್ನು ಕಾರ್ಪೊರೇಟ್ ವರ್ಲ್ಡ್ ಜಾರಿಗೆ ತಂದಿರುವುದರ ಉದ್ದೇಶ ಲಿಟರಸಿ=ಕಂಪ್ಯೂಟರ್ ಎಂಬ ಪ್ರಜ್ಞೆಯನ್ನು ಹರಡಿ ತನ್ನ ಮಾರುಕಟ್ಟೆಯನ್ನು ವಿಸ್ತರಿಸುವುದರ ಹೊರತು ಬೇರೇನೂ ಅಲ್ಲ. ಆದರೆ, ಅ, ಆ, ಇ, ಈ ಗೊತ್ತಿಲ್ಲದ ಜನರಿಗೆ ಕಂಪ್ಯೂಟರ್ ಲಿಟರಸಿಯನ್ನು ಮುಂದಿಟ್ಟರೆ ಅವರು ಅ, ಆ, ಇ, ಈ ಕಲಿಯುವ ಪ್ರಯತ್ನವನ್ನೂ ತೊರೆದು ಬಿಡುತ್ತಾರೆ. ಜಗಲಿ ಹಾರುವುದಕ್ಕೂ ಮೊದಲೇ ಗಗನಕ್ಕೆ ಹಾರೆಂದರೆ ಆತ ಎಲ್ಲಿಗೂ ಹಾರದೆ ಉಳಿದುಬಿಡುತ್ತಾನೆ. ಇದರರ್ಥ ಕಂಪ್ಯೂಟರ್‌ನ ಕೊಡುಗೆಯನ್ನು ನಿರಾಕರಿಸು ವುದಲ್ಲ. ಬದಲಿಗೆ ಶಿಕ್ಷಣಕ್ಷೇತ್ರದ ಕೇಂದ್ರ ಸ್ಥಾನದಲ್ಲಿ ಕಂಪ್ಯೂಟರ್ ನಿಲ್ಲದೆ ಭಾಷಿಕ ಸಾಕ್ಷರತೆ ನಿಲ್ಲಬೇಕೆಂಬುದಷ್ಟೇ ಆಗಿದೆ.

ಇನ್ನೊಂದು ಸಂಗತಿಯನ್ನು ಗಮನಿಸಿ. ಈ ದಿನ ನನ್ನ ಮುಂದಿರುವ ದಿನಪತ್ರಿಕೆ ಸರ್ವಶಿಕ್ಷಾ ಅಭಿಯಾನದಲ್ಲಿ ಸಾವಿರ ಚಿಲ್ಲರೆ ಪಿಸಿಎಂ ಶಿಕ್ಷಕರನ್ನು ತೆಗೆದುಕೊಳ್ಳಲಾಗುವುದು ಎಂದು ಹೇಳುತ್ತಿದೆ. ಒಪ್ಪೋಣ. ಆದರೆ ಸರ್ವಶಿಕ್ಷಾ ಅಭಿಯಾನಕ್ಕೆ ಒಂದೇ ಒಂದು ಲ್ಯಾಂಗ್ವೇಜ್ ಹ್ಯಾಂಡ್ ಬೇಡ್ವೇ? ಒಂದೆ ಒಂದು ಆರ್ಟ್ಸ್‌ಹ್ಯಾಂಡ್ ಬೇಡ್ವೇ? ಯಾಕೆಂದರೆ ವಿಜ್ಞಾನದ ಕಲಿಕೆ ಬೌದ್ಧಿಕ ಸೂಕ್ಷ್ಮಗಳನ್ನು ಕಲಿಸುವ ಮಿತಿ ಮತ್ತು ಸಾಧ್ಯತೆ ಇಟ್ಟುಕೊಂಡಿದ್ದರೆ, ಭಾಷಿಕಗಳು ಮತ್ತು ಮಾನವಿಕಗಳು ಬೌದ್ಧಿಕ ಸೂಕ್ಷ್ಮ ಗಳನ್ನು ವಿಸ್ತರಿಸುವ, ಭಾವ ಜಗತ್ತನ್ನು ಅರಳಿಸುವ ಕೆಲಸ ಮಾಡುತ್ತವೆ. ವಿಜ್ಞಾನದ ಕಲಿಕೆ ವರ್ಟಿಕಲ್ ಆಗಿರುತ್ತದೆ. ಮಾನವಿಕ ಮತ್ತು ಭಾಷಿಕಗಳ ಕಲಿಕೆ ಹಾರಿಜಾಂಟಲ್ ಆಗಿರುತ್ತದೆ. ಆಕ್ಸಿಜನ್‌ನ ಒಂದು ಆಟಮ್ ಮತ್ತು ಹೈಡ್ರೋಜನ್‌ನ ಎರಡು ಆಟಮ್‌ಗಳು ಜಗತ್ತಿನ ಯಾವ ಪ್ರದೇಶದಲ್ಲಿ ಸೇರಿದರೂ ನೀರಿನ ಹೊರತಾಗಿ ಬೇರೇನೂ ಆಗುವುದಿಲ್ಲ. ಆದರೆ ಜೀವನ ವಿಧಾನ, ಜೀವನ ದೃಷ್ಟಿ, ಸಮಾಜದ ಸ್ವರೂಪ, ಜೀವ ವೈವಿಧ್ಯ ಇವೆಲ್ಲ ಸ್ಥಳದಿಂದ ಸ್ಥಳಕ್ಕೆ ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿರುತ್ತವೆ. ಈ ವೈವಿಧ್ಯ ಪೂರ್ಣ ಬದುಕನ್ನು ನಮ್ಮ ಮಕ್ಕಳು ತಿಳಿದುಕೊಳ್ಳುವುದು ಬೇಡವೇ? ಬೇಡ ಅಂತಾದರೆ ನಮ್ಮ ಮಕ್ಕಳಲ್ಲಿ ಮಾರ್ದವತೆ ಇರುವುದಿಲ್ಲ. ಹೃದಯವಿರುವ ಜಾಗದಲ್ಲಿ ಕಲ್ಲುಬಂಡೆ ಇರುತ್ತದೆ. ಅದರಿಂದಾಗಿ ವಿಜ್ಞಾನದ ದುಷ್ಪರಿಣಾಮಕ್ಕೂ ನಮಗೂ ಸಂಬಂಧವಿಲ್ಲ ಎನ್ನುವ ವಿಜ್ಞಾನಿಗಳು ಸಿಗಬಲ್ಲರೇ ವಿನಾ ಸ್ವತಃ ವೈಜ್ಞಾನಿಕ ಕ್ಷೇತ್ರವೂ ಕೂಡ ಒಬ್ಬ ಸಾರಾ ಭಾಯಿ, ಒಬ್ಬ ಭಾಭಾ, ಒಬ್ಬ ರಾಜಾರಾಮಣ್ಣರಂತಹ ವಿಜ್ಞಾನಿ ಗಳನ್ನು ಕಾಣಲು ಸಾಧ್ಯವಿಲ್ಲವಾಗುತ್ತದೆ.

ಇನ್ನೊಂದು ಸಂಗತಿಯತ್ತ ಬನ್ನಿ. ಇತ್ತೀಚೆಗೆ ಒಂದನೇ ತರಗತಿಯಲ್ಲೇ ಇಂಗ್ಲಿಷ್ ಕಲಿಸುವ ಆಶಯಗಳು ತೀವ್ರ ಗೊಳ್ಳುತ್ತಿವೆ. ಇದು ಯಾವ ಬುದ್ಧಿವಂತರ ಸಲಹೆಯೇ ಇರಬಹುದು, ಯಾವ ದೊಡ್ಡ ಇನ್ಸ್ಟಿಟ್ಯೂಷನ್‌ನ ಸಲಹೆ ಇರಬಹುದು. ಆದರೆ ಇದು ಅವೈಚಾರಿಕವಾದುದಾಗಿದೆ. ಯಾಕೆಂದರೆ, ಕನ್ನಡ ಮತ್ತು ಇಂಗ್ಲಿಷ್ ಹುಟ್ಟಿಕೊಂಡ ಸಾಂಸ್ಕೃತಿಕ ಸನ್ನಿವೇಶಗಳು ಬೇರೆ ಬೇರೆ. ಅವೆರಡು ಭಾಷೆಗಳ ಸ್ವರೂಪವೂ ಬೇರೆ ಬೇರೆ. ಬೇಕಿದ್ದರೆ ಕನ್ನಡ-ತೆಲುಗು, ಕನ್ನಡ-ಮಲಯಾಳಂಗಳನ್ನು ಜೊತೆ ಜೊತೆಗೆ ಕಲಿಯಬಹುದು. ಆದರೆ ಕನ್ನಡ-ಇಂಗ್ಲಿಷ್, ಹಿಂದಿ-ಇಂಗ್ಲಿಷ್ ಒಂದನೇ ತರಗತಿಯಲ್ಲಿ ಒಟ್ಟೊಟ್ಟಿಗೇ ಕಲಿಯ ಬಲ್ಲಂತಹ ಸ್ವರೂಪಾತ್ಮಕ ಹೊಂದಾಣಿಕೆಯನ್ನು ಇಟ್ಟು ಕೊಂಡಿಲ್ಲ. ಉದಾಹರಣೆಗೆ, ಹಿಂದಿಯಲ್ಲೂ 'ಫೂಲ್' ಬರುತ್ತದೆ. ಇಂಗ್ಲಿಷ್‌ನಲ್ಲೂ 'ಫೂಲ್' ಬರುತ್ತದೆ. ಅವೆರಡರ ಅರ್ಥಗಳು ಬೇರೆ ಬೇರೆ. ಮಗು ಇಲ್ಲಿ ಗೊಂದಲಕ್ಕೊಳ ಗಾಗಿಬಿಡುತ್ತದೆ. ಹೇಳಿ ಕೇಳಿ ಅದು ಒಂದನೇ ತರಗತಿಯ ಮಗು ಸ್ವಾಮೀ, ಭಾಷಾ ಪಂಡಿತನಲ್ಲ. ಆ ಮಗುವಿನ ಸಾಮರ್ಥ್ಯಕ್ಕೆ ಒಂದು ಮಿತಿ ಇದೆ. ಇಷ್ಟಾಗಿಯೂ ಒಬ್ಬ ನುರಿತ ಅಧ್ಯಾಪಕ ಅರ್ಥ ಗೊಂದಲದಿಂದ ಮಗುವನ್ನು ರಕ್ಷಿಸಬಲ್ಲ. ಆದರೆ ಇಂಗ್ಲಿಷ್ ಮತ್ತು ದೇಸೀ ಭಾಷೆಗಳ ಧ್ವನಿಶಕ್ತಿಯೇ ಭಿನ್ನ ಸ್ವರೂಪದ್ದು. ಭಾಷೆಯ ಸ್ಪಿರಿಟ್ ಭಿನ್ನ ಸ್ವರೂಪದ್ದು. ಇದರಿಂದಾಗಿ ಉಂಟಾಗುವ ಗೊಂದಲದಿಂದ ಹೊರತರಲು ಸಾಧ್ಯವಿಲ್ಲ.

ಮೇಲಿನ ಮೂರೂ ಅಂಶಗಳು ಬಹಳ ಸೂಕ್ಷ್ಮವಾಗಿ ಕಾರ್ಪೊರೇಟ್ ವರ್ಲ್ಡ್‌ನ ಅಗತ್ಯಕ್ಕೆ ತಕ್ಕಂತೆ ಶಿಕ್ಷಣವನ್ನು ಹೊಂದಿಸುವ ಪ್ರಯತ್ನಗಳಾಗಿವೆಯೇ ಹೊರತು ನೈಜ ಶೈಕ್ಷಣಿಕ ಕಾಳಜಿಯ ಪ್ರಯತ್ನಗಳಲ್ಲ. ಇಂತಹ ಪ್ರಯತ್ನ ಗಳಿಗೆ ಈ ದೇಶದ ಶೈಕ್ಷಣಿಕ ಸುಧಾರಣೆಗಳು ಶಿಕ್ಷಕ-ವಿದ್ಯಾರ್ಥಿಗಳ ನಡುವೆ ಸಂಬಂಧ ಏರ್ಪಡುವುದ ರಿಂದಲೇ ಮುಂದುವರಿಯಬೇಕಾದ ಅನಿವಾರ್ಯತೆಗಳು ಅರ್ಥವಾಗುವುದಿಲ್ಲ. ಈಗ ಅದಕ್ಕೆ ಎಜುಸ್ಯಾಟ್ ಎಂಬ ಹೊಸ ಸಂಗತಿ ಸೇರ್ಪಡೆಯಾಗಿದೆ. ಅರ್ಥಾತ್ ಎಜುಸ್ಯಾಟ್, ಕಾರ್ಪೊರೇಟ್ ವರ್ಲ್ಡ್‌ನ ಅಗತ್ಯದ ಹಿನ್ನೆಲೆಯಲ್ಲಿ ಹೊರ ಹೊಮ್ಮಿರುವ ತಂತ್ರಜ್ಞಾನದ ಸಾಧನೆಯಾಗಿದೆಯೇ ವಿನಾ ಸತ್ಯಶೋಧನೆಯ ಸೃಜನಶೀಲ ಉದ್ದೇಶದಿಂದ ಮೂಡಿ ಬಂದಿರುವ ವೈಜ್ಞಾನಿಕ ಆವಿಷ್ಕಾರವಲ್ಲ.

ಇವತ್ತು ಎಜುಸ್ಯಾಟ್‌ನಿಂದ ಶಿಕ್ಷಣ ಕ್ರಾಂತಿಯಾಗುತ್ತದೆ ಎನ್ನುವಾಗ ಯಾವುದೇ ಕ್ರಾಂತಿಯೊಂದರ ಉದ್ಭವದ ಸ್ಥಿತಿಯನ್ನು ಹುಡುಕಬೇಕಾಗುತ್ತದೆ. ಬದಲಾವಣೆ ಎನ್ನುವುದು ಬಹುದೊಡ್ಡ ಜನಸಮುದಾಯದ ಅಂತರಂಗದ ತುಡಿತದ ಫಲವಾಗಿ ಬಂದಾಗ ಅಥವಾ ಯಾವುದೇ ಸಂಗತಿ ಯಥಾಸ್ಥಿತಿಯನ್ನು ಆಮೂಲಾಗ್ರವಾಗಿ ಪರಿಷ್ಕರಿಸಲು ಸಾಧ್ಯವಾದಾಗ ಅದನ್ನು ಕ್ರಾಂತಿ ಎನ್ನಬಹುದು. ಇಂಥಲ್ಲಿ ಭಾರತದ ಯಾವ ಸಮುದಾಯ ಕೂಡ ಎಜುಸ್ಯಾಟ್‌ಗಾಗಿ ಬೇಡಿಕೆ ಮುಂದಿಟ್ಟದ್ದು, ಎಜುಸ್ಯಾಟ್‌ಗಾಗಿ ಧರಣಿ-ಮುಷ್ಕರ ಹೂಡಿದ್ದು, ಎಜುಸ್ಯಾಟ್ ಬೇಕೇಬೇಕೆಂದು ಆತ್ಮಾರ್ಪಣೆ ಮಾಡಿ ಕೊಂಡದ್ದು ನನ್ನ ಗಮನಕ್ಕೆ ಬಂದಿಲ್ಲ. ಎಜುಸ್ಯಾಟ್‌ನ ಅಪೇಕ್ಷೆ ಏನಿದ್ದರೂ ಶೇ. 0.0000 ಗಿಂತಲೂ ಕಡಿಮೆ ಜನರದಿರಬಹುದು ಅಷ್ಟೇ. ಹಾಗಿರುವಾಗ ಇದಕ್ಕೆ ಕ್ರಾಂತಿಕಾರಕ ಸುಧಾರಣೆಗೆ ಬೇಕಾದ ಮೂಲ ಶಕ್ತಿಯೇ ಇಲ್ಲವೆಂದು ಹೇಳಬೇಕಾಗುತ್ತದೆ.

ಎಜುಸ್ಯಾಟ್ ಶೈಕ್ಷಣಿಕ ಸ್ಥಿತಿಯನ್ನು ಆಮೂಲಾಗ್ರವಾಗಿ ಪರಿಷ್ಕರಿಸಲು ಸಾಧ್ಯವಿದೆಯೇ ಎಂಬ ಪ್ರಶ್ನೆಗೆ ಬಂದಾಗ ಭಾರತದಲ್ಲಿ ಶಿಕ್ಷಣದ ಮೂಲಭೂತ ಅವಶ್ಯಕತೆ ಏನು ಎಂಬುದಕ್ಕೆ ಉತ್ತರ ಕಂಡುಕೊಳ್ಳಬೇಕಾಗುತ್ತದೆ. 'ಜ್ಞಾನಾರ್ಜನೆ', 'ಸಂಸ್ಕಾರ ಪಡೆಯುವುದು' ಇತ್ಯಾದಿ ಪೊಳ್ಳು ಘೋಷಣೆಗಳನ್ನು ಬದಿಗಿರಿಸಿ ಹೇಳುವುದಾದರೆ ಭಾರತದಲ್ಲಿ ಶಿಕ್ಷಣದ ಉದ್ದೇಶ ಉದ್ಯೋಗ ಪಡೆಯುವುದೇ ಆಗಿದೆ. ಆರ್ಥಿಕ ದೃಢತೆಯನ್ನು ಕಾಣದಿರುವ ಯಾವುದೇ ಸಮಾಜದಲ್ಲೂ ಶಿಕ್ಷಣದ ಉದ್ದೇಶ ಉದ್ಯೋಗವೇ ಆಗಿರುವುದು ಅತ್ಯಂತ ಸ್ವಾಭಾವಿಕ. ಅಂಥಲ್ಲಿ ಆರ್ಥಿಕ ದೃಢತೆ ಸಾಧಿಸಲು ನಮ್ಮಲ್ಲಿರುವ ಪರಿಕರವನ್ನು ಜನಸಮುದಾಯಕ್ಕೆ ಕೊಡಮಾಡಿ ಸಮಾಜ ಆರ್ಥಿಕ ದೃಢತೆಯನ್ನು ಸಾಧಿಸಿದ ಬಳಿಕವಷ್ಟೇ ಜ್ಞಾನಕ್ಕಾಗಿ ಶಿಕ್ಷಣ ಎಂಬ ಘೋಷಣೆಯನ್ನು ಹೊರಡಿಸಲು ಸಾಧ್ಯ. ಆದರೆ ನಮ್ಮ ಯಾವ ಶಿಕ್ಷಣ ಚಿಂತಕರ ಬಳಿಯಾಗಲಿ, ಸರಕಾರದ ಬಳಿಯಾಗಲಿ ಶಿಕ್ಷಣೇತರ ಆರ್ಥಿಕ ಪರಿಕರಗಳಿಲ್ಲ. ಗಾಂಧಿಯನ್ನು ಹೊರತುಪಡಿಸಿದರೆ ಮಿಕ್ಕ ಆರ್ಥಿಕ ಚಿಂತಕರ ಬಳಿ ಇರುವುದು ಜನಸಂಖ್ಯಾ ನಿಯಂತ್ರಣದ ಪರಿಕರ ಮಾತ್ರವೇ ಆಗಿದೆ. ಜನಸಂಖ್ಯಾ ನಿಯಂತ್ರಣಕ್ಕೆ ಸರಕಾರದ ನೇರಕ್ರಮಗಳನ್ನು ನಿರಾಕರಿಸುವ ಅಮರ್ತ್ಯ ಸೇನ್ ಶಿಕ್ಷಣದಿಂದಲೇ ಜನಸಂಖ್ಯಾ ನಿಯಂತ್ರಣ ಸಾಧ್ಯ ಎಂಬ ವಾದ ಮುಂದಿಡುತ್ತಾರಾದರೂ ಈ ವಾದ ಜ್ಞಾನಾರ್ಜನೆಗಾಗಿ ಶಿಕ್ಷಣವನ್ನು ಪಡೆಯುವ ಶೈಕ್ಷಣಿಕ ಸನ್ನಿವೇಶದಲ್ಲಿ ಸಾಧ್ಯವೇ ಹೊರತು ಉದ್ಯೋಗಕ್ಕಾಗಿ ಶಿಕ್ಷಣದ ಶೈಕ್ಷಣಿಕ ಸನ್ನಿವೇಶದಲ್ಲಲ್ಲ. ನಮ್ಮ ಅಂಕಿ-ಅಂಶಗಳು ಸುಶಿಕ್ಷಿತರು ಕುಟುಂಬಯೋಜನೆ ಅನುಸರಿಸಿದ ದಾಖಲೆಯನ್ನು ಕೊಡುತ್ತವೆ. ಆದರೆ ಆ ಸುಶಿಕ್ಷಿತರು ಒಂದು ಮಟ್ಟದ ಆರ್ಥಿಕ ದೃಢತೆಯನ್ನೂ ಸಾಧಿಸಿದವ ರಾಗಿದ್ದಾರೆ ಎಂಬುದನ್ನು ಹೇಳುವುದಿಲ್ಲ. ಇದರ ಮಥಿತಾರ್ಥವೇನೆಂದರೆ ಆರ್ಥಿಕ ಸಾಮರ್ಥ್ಯವುಳ್ಳ ಸುಶಿಕ್ಷಿತರು ಜನಸಂಖ್ಯಾ ನಿಯಂತ್ರಣ ಸಾಧಿಸಬಲ್ಲರೇ ಹೊರತು ಬರಿಯ ಶಿಕ್ಷಣದಿಂದ ಜನಸಂಖ್ಯಾ ನಿಯಂತ್ರಣ ಸಾಧ್ಯವಿಲ್ಲ. ಅಂದರೆ ಶಿಕ್ಷಣ ಸುಧಾರಣೆಗೆ ಆರ್ಥಿಕತೆ ಯೊಂದಿಗೆ ನೇರ ಸಂಬಂಧವಿದೆ.

ಇನ್ನು ಮುಂದಿನದು ಬಹಳ ಮುಖ್ಯವಾದ ಪ್ರಶ್ನೆ. ಭಾರತದ ಶಿಕ್ಷಣದ ಮೂಲ ಅಗತ್ಯವಾದ ಉದ್ಯೋಗವನ್ನು ಸೃಷ್ಟಿಸುವ ಸಾಧ್ಯತೆ ನಭದ ಗುರು ಎಜುಸ್ಯಾಟ್‌ಗಿದೆಯೇ ಎಂಬುದು. ಭಾರತದ ಸಾಮಾಜಿಕ-ಸಾಂಸ್ಕೃತಿಕ ಸಂದರ್ಭದಲ್ಲಿ ಎಜುಸ್ಯಾಟ್ ನಿರೀಕ್ಷಿತ ರೀತಿಯಲ್ಲಿ ಯಶಸ್ಸು ಪಡೆಯಲಾರದು. ಕಂಪ್ಯೂಟರ್ ಕೂಡ ಇಲ್ಲಿ

## ಸಾದರ ಸ್ವೀಕಾರ

ಚರಿತ್ರೆಯ ಏಕತ್ರೀಕರಣ — ಆದಿತ್ಯ ನಾರಾಯಣ
ಪುಟ : ೮೦ — ಬೆಲೆ : ರೂ. ೨೫

ನಮ್ಮ ಆಹಾರ ಹೇಗಿರಬೇಕು ? — ಡಾ|| ನಾ. ಸೋಮೇಶ್ವರ
ಪುಟ : ೧೧೬ — ಬೆಲೆ : ರೂ. ೪೦

ಪರೀಕ್ಷೆಯನ್ನು ಯಶಸ್ವಿಯಾಗಿ ಎದುರಿಸುವುದು ಹೇಗೆ ?
ಅರವಿಂದ ಚೊಕ್ಕಾಡಿ
ಪುಟ : ೧೦೦ — ಬೆಲೆ : ರೂ. ೪೦

ಯಶಸ್ವೀ ಶಿಕ್ಷಕರಾಗುವುದು ಹೇಗೆ ? — ಅರವಿಂದ ಚೊಕ್ಕಾಡಿ
ಪುಟ : ೯೬ — ಬೆಲೆ : ರೂ. ೪೦

ಕಾಲೇಜು ವಿದ್ಯಾರ್ಥಿನಿಯರ ವ್ಯಕ್ತಿತ್ವ ವಿಕಾಸ ಹೇಗೆ ?
ಡಾ|| ಪಿ. ಎಸ್. ಗೀತಾ
ಪುಟ : ೯೬ — ಬೆಲೆ : ರೂ. ೪೦

ಬಿಡುವಿನ ವೇಳೆಯ ಸದುಪಯೋಗ ಹೇಗೆ ?
ಕಮಲಾ ರಾಮಸ್ವಾಮಿ
ಪುಟ : ೧೧೨ — ಬೆಲೆ : ರೂ. ೪೦

ಮನಸ್ಸೇ ನೀ ಪ್ರಶಾಂತವಾಗಿರು
ಡಾ|| ಸಿ. ಆರ್. ಚಂದ್ರಶೇಖರ್
ಪುಟ : ೧೦೮ — ಬೆಲೆ : ರೂ. ೪೦

ನೀವು ಚೆನ್ನಾಗಿ ಆಲೋಚಿಸಬಲ್ಲಿರಾ ?
ಡಾ|| ಜಾನಕಿ ಸುಂದರೇಶ್
ಪುಟ : ೧೦೪ — ಬೆಲೆ : ರೂ. ೪೦

ಮೇಲಿನ ಎಂಟು ಪುಸ್ತಕಗಳ ಪ್ರಕಾಶಕರು
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೧

ಅದೃಶ್ಯ ತೈಲ ಮತ್ತು ಇತರ ಕಥೆಗಳು — ಡಾ|| ಪಿ. ಶಿವರಾಮ ರೈ
ಪುಟ : ೧೨೦ — ಬೆಲೆ : ರೂ. ೪೫

ಅಣಬೆ ಕೃಷಿ — ಮುನಿಯಾಲ್ ಗಣೇಶ್ ಶೆಣೈ
ಪುಟ : ೫೬ — ಬೆಲೆ : ರೂ. ೧೫

ಕಂಪ್ಯೂಟರ್ ಕಲಿಯೋಣ
ಎಂ. ಸಿ. ಪ್ರವೀಣ್ ಕುಮಾರ್, ಹಾಲಾಡಿ
ಪುಟ : ೧೨೦ — ಬೆಲೆ : ರೂ. ೭೫

ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ಪುಸ್ತಕ ನಿಧಿ,** ಗಾವಳಿ ಶಾಲೆ ಹತ್ತಿರ, ಅಂಚೆ : ಹಳ್ಳಾಡಿ-ಹರ್ಕಾಡಿ - ೫೭೬ ೨೧೦, ಕುಂದಾಪುರ

ಆದರ್ಶ ನಾಗರಿಕ — ಸ್ವಾಮಿ ರಂಗನಾಥಾನಂದ
ಪುಟ : ೧೬೧ — ಬೆಲೆ : ರೂ. ೫
**ಶ್ರೀರಾಮಕೃಷ್ಣ ಆಶ್ರಮ,** ಮೈಸೂರು - ೫೭೦ ೦೨೦

ಕಾರ್ತೀಕಾಯಣ (ಕಾವ್ಯ) — ಡಾ|| ಎ. ವೃಷಭೇಂದ್ರಾಚಾರ್
ಪುಟ : ೧೬೮ — ಬೆಲೆ : ರೂ. ೧೦೦
**ಶ್ರೀ ಕುಮಾರ ಪ್ರಕಾಶನ,** ಸಂಡೂರು, ಬಳ್ಳಾರಿ ಜಿಲ್ಲೆ

ಮಳೆ ಬಂದ ಮಾರನೆಯ ದಿನ (ಪದ್ಯ) — ಗುಂಡಣ್ಣ ಕಲಬುರ್ಗಿ
ಪುಟ : ೭೮ — ಬೆಲೆ : ರೂ. ೭೫
**ಸೌಜನ್ಯ ಪ್ರಕಾಶನ,** 'ಸೃಷ್ಟಿ', ಈರಣ್ಣನಗರ, ಮೂಡಲಗಿ - ೫೯೧ ೩೧೨

ಶ್ರೀ ಅರವಿಂದ ಶಬ್ದಾವಳಿ — ಸಂ : ಕೋ. ಚೆನ್ನಬಸಪ್ಪ
ಪುಟ : ೧೦೪ — ಬೆಲೆ : ರೂ. ೫೦
**ಕರ್ನಾಟಕ ನಿಲಯಂ ಟ್ರಸ್ಟ್ (ರಿ),** ಪಾಂಡಿಚೇರಿ - ೧

ನಿರೀಕ್ಷಿತ ಯಶಸ್ಸನ್ನು ಪಡೆದಿಲ್ಲ. ಆದರೂ ಕಂಪ್ಯೂಟರ್ ಮೇಲೆ ಎರಡು ದಿನ ಕೈಯಾಡಿಸುವ ತರಬೇತಿಕೊಟ್ಟು ಅವರನ್ನೆಲ್ಲ ಕಂಪ್ಯೂಟರ್ ಸಾಕ್ಷರರು ಎಂದು ಘೋಷಿಸಿದ ವ್ಯವಸ್ಥೆ ಶಾಲೆಗೊಂದು ಟಿವಿ ಕೊಟ್ಟು ಎಜುಸ್ಯಾಟ್ ಸಂಪರ್ಕ ಕಲ್ಪಿಸಿ, ಮಕ್ಕಳು ಎಜುಸ್ಯಾಟ್ ಉಪಯೋಗ ಪಡೆಯದಿದ್ದರೂ ಎಜುಸ್ಯಾಟ್ ಯಶಸ್ವಿಯಾಗಿದೆ ಎಂದು ಹೇಳಲಾಗದು ಎನ್ನುವಂತಿಲ್ಲ. ಹಾಗಾದಾಗ ನಿಜವಾದ ಅರ್ಥದಲ್ಲಿ ಎಜುಸ್ಯಾಟ್‌ನ ಉಪಯೋಗ ಪಡೆಯದೆ ಇರುವ ಜನಸಮುದಾಯವನ್ನು ಮುಂದಿನ ಶೈಕ್ಷಣಿಕ ಸನ್ನಿವೇಶದಲ್ಲಿ ಯಾರೂ ಪ್ರತಿನಿಧಿಸುವುದಿಲ್ಲ. ಆಗ ನಾನಾ ಕಾರಣಗಳಿಗಾಗಿ ಪ್ರತಿನಿಧಿಗಳನ್ನು ಕಳೆದುಕೊಂಡು ಈಗಾಗಲೇ ಪರ್ಯಾಯ ಸಮಾಜವಾಗಿರುವ ಸಮುದಾಯಕ್ಕೆ ಮತ್ತಷ್ಟು ಜನರು ಸೇರ್ಪಡೆಯಾಗುತ್ತಾರೆ. ಅವರನ್ನು ಪ್ರತಿನಿಧಿಸುವವರು ಇಲ್ಲದೆ ಹೋದಾಗ ತಮ್ಮದೇ ಆದ ರಾಜಕೀಯ ಅಸ್ತಿತ್ವವನ್ನು ಕಂಡುಕೊಳ್ಳಬಯಸುತ್ತಾರೆ. ಅರ್ಥಾತ್ ರಾಷ್ಟ್ರದೊಳಗೆ ಮತ್ತೊಂದು ರಾಷ್ಟ್ರದ ಕಲ್ಪನೆಗಳು ಬೆಳೆಯಲು ಪ್ರೇರಣೆಯಾಗುತ್ತದೆ. ಈ ವಿಚಾರ ಬೇರೆ ಸಂದರ್ಭದಲ್ಲಿ ಚರ್ಚಿಸಬೇಕಾದಂಥದಾದ್ದರಿಂದ ಅದು ಬದಿಗಿರಲಿ.

ಒಂದೊಮ್ಮೆ ಎಜುಸ್ಯಾಟ್ ನಿರೀಕ್ಷಿತ ಯಶಸ್ಸು ಪಡೆಯದೆಯೂ ಪಡೆದಿದೆ ಎಂಬ ಚಿಂತನೆ ವ್ಯವಸ್ಥೆಯ ಚಾಲಕ ಶಕ್ತಿಯಾದಾಗ ಅಥವಾ ಎಜುಸ್ಯಾಟ್ ನಿಜವಾಗಿಯೂ ನಿರೀಕ್ಷಿತ ಯಶಸ್ಸು ಪಡೆದಾಗ ಏನಾಗುತ್ತದೆ? ಶೇಕಡಾ ೮೦ ಶಿಕ್ಷಕರನ್ನು ಮನೆಗೆ ಕಳಿಸಲಾಗುತ್ತದೆ! ಯಾಕೆಂದರೆ ಶಿಕ್ಷಕರ ಅಗತ್ಯ ಆಗ ತುಂಬಾ ಕಡಿಮೆಯಾಗುತ್ತದೆ. ಅಲ್ಲಿಗೆ ಮುಗಿಯಲಿಲ್ಲ. ಶಿಕ್ಷಣ ಇಲಾಖೆಯ ಉದ್ಯೋಗಿಗಳ ಸಂಖ್ಯೆಯನ್ನೂ ಕಡಿತಗೊಳಿಸಲಾಗುತ್ತದೆ. ಇಲಾಖೆಗೆ ಬೇಕಾದ ಸಾಮಗ್ರಿಗಳು ಕಡಿಮೆಯಾಗಿ ಅದನ್ನು ಪೂರೈಸುವವರು, ಉತ್ಪಾದಕರು ಕೆಲಸ ಕಳೆದುಕೊಳ್ಳುತ್ತಾರೆ. ಮನೆಯಲ್ಲೇ ಕಲಿಯಬಹುದಾದ ವಾತಾವರಣ ಉಂಟಾದಾಗ ಶಾಲೆ ಕಟ್ಟುವ ಕೂಲಿಯವನಿಗೂ ಆ ಮಟ್ಟಿಗೆ ಉದ್ಯೋಗ ವಿಲ್ಲದಾಗುತ್ತದೆ. ಎಜುಸ್ಯಾಟ್‌ಅನ್ನು ಹಾಡಿಹೊಗಳುವ ಶಿಕ್ಷಣ ಚಿಂತಕರು ಗಮನವಿಟ್ಟು ಕೇಳಿಕೊಳ್ಳಬೇಕು, ಮನುಷ್ಯ ಸದಾ ಅಪರಿಪೂರ್ಣನಿರುತ್ತಾನೆ. ಶಿಕ್ಷಕ ಒಬ್ಬ ಮನುಷ್ಯನಾಗಿದ್ದಾಗ, ಅದರಲ್ಲೂ ಶಿಕ್ಷಣ ಚಿಂತಕರ ಹಾಗೆ ಥಿಯರಿಗಳನ್ನು ಮುಂದಿಟ್ಟು ವಾದಿಸಲು ಅಶಕ್ತರಾದ ಶಿಕ್ಷಕರು ಬಹಳ ಮಂದಿ ಇರುವಾಗ ಶಿಕ್ಷಕರನ್ನು ತರಬೇತುಗೊಳಿಸುವ ಕೆಲಸಗಳು ಶಿಕ್ಷಣ ಚಿಂತಕರಿಗೆ, ಸಂಪನ್ಮೂಲ ವ್ಯಕ್ತಿಗಳಿಗೆ ದೊರಕುತ್ತಿರುತ್ತದೆ. ಆದರದು ಸಿದ್ಧಮಾದರಿಯ (ಅದರಲ್ಲೂ ಶಿಕ್ಷಣ ಚಿಂತಕರಿಗೆ ಪ್ರಿಯವಾಗಿರುವ ಅಮೆರಿಕದ ಮಾದರಿಯದಾಗಿರುವಾಗ!) ಸೀಮಿತ ಸಂಪನ್ಮೂಲ ವ್ಯಕ್ತಿಗಳಿಂದ ಎಜುಸ್ಯಾಟ್ ಮೂಲಕ ಬರುವಾಗ ಶಿಕ್ಷಣ ಚಿಂತಕರಿಗೆ ಯಾವ ಕೆಲಸವೂ ಇರುವುದಿಲ್ಲ. ಅಂದರೆ ಎಜುಸ್ಯಾಟ್ ಭಾರತೀಯರು ಶಿಕ್ಷಣಾಕಾಂಕ್ಷಿಗಳಾಗಲು ಇರುವ ಮೂಲಭೂತ ಅಗತ್ಯವಾದ ಔದ್ಯೋಗಿಕ ಅಗತ್ಯವನ್ನು ಭರಿಸಿಕೊಡುವುದಿಲ್ಲ. ಬದಲು ಕಡಿತಗೊಳಿಸುತ್ತದೆ. ನಭದ ಗುರು ಭುವಿಯ ಗುರುವನ್ನು ನಾಶಪಡಿಸುತ್ತಾನೆ.

ಇದರರ್ಥ ಎಜುಸ್ಯಾಟ್‌ಗೆ ಆರ್ಥಿಕ ಸಾಧ್ಯತೆಯನ್ನು ಕೊಡುವ ಸಾಮರ್ಥ್ಯವೇ ಇಲ್ಲವೆಂದಲ್ಲ. ಕಾರ್ಪೊರೇಟ್ ವರ್ಲ್ಡ್‌ನ ಎಲ್ಲ ತಿಳಿವಳಿಕೆಯನ್ನೂ ಕೊಟ್ಟು ಸಾವಿರ ಶಿಕ್ಷಕರ ಸಂಪಾದನೆಯನ್ನು ಒಬ್ಬನಿಗೇ ಒದಗಿಸಿಕೊಡುವ ಸಾಮರ್ಥ್ಯ ಅದಕ್ಕಿದೆ. ಆದರೆ ಒಬ್ಬ ಸಾವಿರ ಮಂದಿಯ ಅನ್ನವನ್ನು ತಿನ್ನುವಾಗ ಸಾವಿರ ಮಂದಿ ಸಾಯುತ್ತಲೂ ಇರುತ್ತಾರೆ. ಸಂಪತ್ತಿನ ಕೇಂದ್ರೀಕರಣ ಹೆಚ್ಚುತ್ತಾ ಹೋಗುತ್ತದೆ. ಕಾರ್ಪೊರೇಟ್ ವರ್ಲ್ಡ್ ಬಲಗೊಳ್ಳುತ್ತದೆ. ಆದರೆ ಕಾರ್ಪೊರೇಟ್ ವರ್ಲ್ಡ್ ಬಲಗೊಳ್ಳುವಾಗ ಇತರ ಆರ್ಥಿಕ, ಸಾಂಸ್ಕೃತಿಕ ರಂಗಗಳು ಸೊರಗುತ್ತಲೂ ಸಾಗುತ್ತವೆ. ಮುಖ್ಯವಾಗಿ ಕಾರ್ಪೊರೇಟ್ ವರ್ಲ್ಡ್ ಬಲಗೊಂಡಂತೆಲ್ಲ ಭಾರತದ ಕೃಷಿರಂಗ ಸೊರಗಿರುವುದು ಹೊಡೆದು ಕಾಣುತ್ತಿದೆ. ಕೃಷಿರಂಗದ ಸೊರಗುವಿಕೆಯೆಂದರೆ ಸುಮಾರು ಅರ್ಧಪಾಲು ಜನಸಂಖ್ಯೆಯ ಅನ್ನದ ಹಕ್ಕಿನ ನಿರಾಕರಣೆಯಲ್ಲದೆ ಬೇರೇನಲ್ಲ.

ಎಜುಸ್ಯಾಟ್ ಬಗ್ಗೆ ಭ್ರಮೆಪಡುವಾಗ ಶಿಕ್ಷಣ ಚಿಂತಕರು ಇದನ್ನೆಲ್ಲ ಯೋಚಿಸಬೇಕು. ಅದರಲ್ಲೂ ತಮ್ಮನ್ನು ತಾವು ಸೋಷಿಯಲಿಸ್ಟ್ ಶಿಕ್ಷಣ ಚಿಂತಕರು ಎಂದುಕೊಳ್ಳುವವರಿಗೆ ಹೆಚ್ಚು ಜವಾಬ್ದಾರಿಯಿದೆ. ಚಿಂತನೆ, ವೈಚಾರಿಕತೆಯೆಂದರೆ ಬಡಪಾಯಿಯೊಬ್ಬ ಗಂಧದ ಕಡ್ಡಿ ಹಚ್ಚಿ ತೆಂಗಿನಕಾಯಿ ಒಡೆಯುವುದನ್ನು ಟೀಕಿಸುವುದಲ್ಲ. ನಿಜ ಹೇಳಬೇಕೆಂದರೆ ಯಾವುದೇ ಆಕ್ರಮಣವನ್ನು ತಮ್ಮ ಪಾಡಿಗೆ ತಾವು ಬಾಳುತ್ತಾ ಎದುರಿಸುತ್ತಿರುವವರು ಇವರೇ. ಈ ನೆಲದ ಜೀವಂತಿಕೆ, ಸ್ವಂತಿಕೆ ಉಳಿದಿದ್ದರೆ ಅದರ ಗೌರವ ಈ ಬಡಪಾಯಿಗಳಿಗೆ ಸಲ್ಲಬೇಕೇ ವಿನಾ ಅಮೆರಿಕ ಮಾದರಿಯ ಶಿಕ್ಷಣಕ್ಕಲ್ಲ. ಅಮೆರಿಕದ ಯಾವುದೇ ಮಾದರಿಯಲ್ಲಿ ಸಹಜವಾಗಿಯೇ ಕ್ಯಾಪಿಟಲಿಸ್ಟಿಕ್ ಲಕ್ಷಣಗಳಿರುವಾಗ ಪೂರ್ಣವಾಗಿ ಆ ಮಾದರಿಯ ಶಿಕ್ಷಣವನ್ನು ಮುಂದಿಡುವವರು ಪರೋಕ್ಷವಾಗಿ ತಮಗರಿವಿಲ್ಲದಂತೆಯೇ ಶಿಕ್ಷಣದ ಸಾಮಾಜಿಕ ನ್ಯಾಯವನ್ನು ಅಲ್ಲಗಳೆದುಬಿಡುತ್ತಾರೆ!

ಇಷ್ಟೆಲ್ಲ ಹೇಳಿದ್ದು ಅಮೆರಿಕ ಮಾದರಿಯ ಶಿಕ್ಷಣವನ್ನು, ಎಜುಸ್ಯಾಟ್‌ಅನ್ನು ನಮ್ಮ ಶಿಕ್ಷಣ ವ್ಯವಸ್ಥೆಗೆ ಪೂರಕವಾಗಿ ಹೊಂದಿಸಬಾರದೆಂದಲ್ಲ. ಒಳ್ಳೆಯ ಅಂಶಗಳು ಎಲ್ಲಿದ್ದರೂ ಸ್ವೀಕಾರಾರ್ಹವೇ. ಆದರೆ ಈ ಮಾದರಿಗಳನ್ನು ಶಿಕ್ಷಣ ರಂಗದ ಪ್ರಧಾನ ವೇದಿಕೆಯಲ್ಲಿ ತಂದು ನಿಲ್ಲಿಸುವಾಗ, ಈ ಮಾದರಿಗಳಿಗೆ ಪೂರಕವಾಗುವಂತೆ ನಮ್ಮ ಶಿಕ್ಷಣವನ್ನು ಹೊಂದಿಸುವ ಪ್ರಯತ್ನ ಮಾಡುತ್ತಿರುವಾಗ ಇದನ್ನೆಲ್ಲ ಹೇಳಬೇಕಾಗುತ್ತದೆ. ಅಂದಹಾಗೆ ಇದು ಅಭಿವೃದ್ಧಿ ವಿರೋಧಿಯೊಬ್ಬನ ವಟಗುಟ್ಟುವಿಕೆಯಲ್ಲ. ಆದರೆ ನನ್ನ ಭಾರತದ ಚಿಂದಿಯುಟ್ಟ ಮಕ್ಕಳ ಕಣ್ಣುಗಳಲ್ಲಿ ಕನಸುಗಳನ್ನೇ ಕಟ್ಟಲಾಗದ ಮಾದರಿಗಳನ್ನು ಅಭಿವೃದ್ಧಿಯ ಸಂಕೇತವೆಂದು ಹೇಗೆ ಭಾವಿಸಲಿ ?

*(ಮಂಗಳೂರು ತಾಲೂಕು ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಕೆ. ಆನಂದ, ಪ್ರಾಥಮಿಕ ಶಾಲಾ ಅಧ್ಯಾಪಕರಾದ ರಾಮಮೂರ್ತಿ ಉಡುಪ, ಶಿಕ್ಷಣ ಚಿಂತಕರಾದ ಸಿ. ಎಚ್. ಕೃಷ್ಣಶಾಸ್ತ್ರಿಯವರೊಂದಿಗೆ ನಡೆಸಿದ ವೈಯಕ್ತಿಕ ಸಂವಾದದಲ್ಲಿ ಸಿಕ್ಕ ಹೊಳಹುಗಳನ್ನೇ ಸಾಪೇಕ್ಷವಾಗಿ ಈ ಲೇಖನಕ್ಕೆ ಬಳಸಿಕೊಂಡಿದ್ದೇನೆ. – ಲೇಖಕ).*

**ಅರವಿಂದ ಚೊಕ್ಕಾಡಿ**
ಕೋಡಂಗಲ್ಲು - ೫೭೪ ೧೯೭, ಮೂಡಬಿದ್ರೆ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ

ಸೈರನ್ನಿನ ಶಬ್ದವಾಗುತ್ತದೆ, ನಿಧಾನವಾಗಿ ರಂಗದ ಮೇಲೆ ಬೆಳಕಾಗುತ್ತದೆ. ಸಮಾಜದ ವಿವಿಧ ವೃತ್ತಿ ಮಾಡುವ ಜನರು – ಕುಂಬಾರ,ಅಗಸ, ಬಡಗಿ, ಚಮ್ಮಾರ, ದರ್ಜಿ, ರೈತ – ತಮ್ಮ ಕೆಲಸದಲ್ಲಿ ಮಗ್ನರಾಗಿದ್ದಾರೆ. ಇನ್ನೊಂದೆಡೆ, ಯಂತ್ರವೊಂದು ಕೆಲಸ ಮಾಡುತ್ತಿದೆ. ಯಾರಿಗೂ ಬಿಡುವಿಲ್ಲ, ಯಾರ ಮುಖದ ಮೇಲೂ ಜೀವಂತಿಕೆ ಇಲ್ಲ. ಅವರೂ ಯಂತ್ರದಂತೆ ಕಾರ್ಯಮಗ್ನರಾಗಿದ್ದಾರೆ.

ಹಾಡು ಪ್ರಾರಂಭವಾಗುತ್ತದೆ : ಎಲ್ಲರೂ ನಿರ್ಭಾವದಿಂದ ಹಾಡುತ್ತಿದ್ದಾರೆ; ಹಾಡು ಪ್ರಾರಂಭವಾದಾಗಿನ ಉತ್ಸಾಹ ಕ್ರಮೇಣ ಬಳಲಿದಂತೆ ಕಡಿಮೆಯಾಗಿ ನಿಲ್ಲುತ್ತದೆ. ಹಾಡು ನಿಲ್ಲುತ್ತಿದ್ದಂತೆ ಪುನಃ ಸೈರನ್ ಶಬ್ದವಾಗುತ್ತದೆ.

ಹಾಡು:

*ದುಡಿ ಇಲ್ಲವೆ ಮಡಿ*
*ಹಗಲು ಇರುಳು, ಒಳಗು ಹೊರಗು,*
*ಹುಡುಗ-ಹುಡುಗಿ, ಯುವಕ-ಯುವತಿ*
*ಮುದುಕ-ಮುದುಕಿ,*
*ದುಡಿ ಇಲ್ಲವೆ ಮಡಿ ॥ ದುಡಿ ॥*

(ಈಗ ರೈತ ನೇಗಿಲನ್ನು ಉಳುತ್ತಾ ಸಾಗಿದ್ದಾನೆ. ಹಿಂದಿನಿಂದ ಹೆಂಗಸರು ಬೀಜ ಬಿತ್ತುತ್ತಿದ್ದಾರೆ. ಕೆಲವರು ಹೊಳೆಯಿಂದ ನೀರನ್ನು ತಂದು ಗಿಡಗಳಿಗೆ ಹಾಕುತ್ತಿದ್ದಾರೆ.)

*ನೆಲವ ಉತ್ತು, ಬೀಜ ಬಿತ್ತು*
*ಹೊರೆಯ ಹೊತ್ತು, ಮುರಿದು ಕತ್ತು*
*ದುಡಿ ಇಲ್ಲವೆ ಮಡಿ*

(ರಾಜಕಾರಣಿಯೊಬ್ಬ ತನ್ನ ಬೆಂಬಲಿಗರೊಂದಿಗೆ ಬರುತ್ತಿದ್ದಾನೆ)

*ನಾಡಿಗೆ ದುಡಿ, ನಾಳೆಗೆ ದುಡಿ*
*ಇಲ್ಲವಾದರೆ ಮಡಿ*

ರಾಜಕಾರಣಿ : ''ಕಾಂ ಕರೋ ಯಾ ಮರೋ''

(ಅವನ ಬೆಂಬಲಿಗರೂ ಅದನ್ನೇ ಕೂಗುತ್ತಾ ಹೋಗುತ್ತಾರೆ. ಬಡಗಿ, ಚಮ್ಮಾರ, ಅಗಸ ಮುಂತಾದ ಕಸುಬಿನವರು ಕಾರ್ಯಮಗ್ನರಾಗಿದ್ದಾರೆ)

*ಕಾಯಕವೇ ಕೈಲಾಸ, ಇಲ್ಲವಾದರೆ ಉಪವಾಸ*
*ಕೈ ಕೆಸರಾದರೆ ಬಾಯಿ ಮೊಸರು,*
*ಇಲ್ಲವಾದರೆ ಇಲ್ಲ ಉಸಿರು*
*ದುಡಿ ಇಲ್ಲವೆ ಮಡಿ ॥ ದುಡಿ ॥*

(ಪುಸ್ತಕದ ಹೊರೆ ಹೊತ್ತು ಶಾಲೆಯ ಮಕ್ಕಳ ಗುಂಪು ಬರುತ್ತಿದೆ)

*ನಾಳೆ ಮಾಡುವುದ ಇಂದೇ ಮಾಡು*
*ಇಂದು ಮಾಡುವುದ ಈಗಲೇ ಮಾಡು*
*ಇಲ್ಲವಾದರೆ ಬಾಳೇ ಸುಡುಗಾಡು*
*ದುಡಿ ಇಲ್ಲವೆ ಮಡಿ ॥ ದುಡಿ ॥*

ಹೀಗೆ ಎಲ್ಲಾ ಗುಂಪುಗಳೂ ಹಾಡುತ್ತ ನಡೆಯುತ್ತಿದ್ದಾಗ ಕಲಾವಿದನೊಬ್ಬ (ಬಣಗಾರ) ಎಲ್ಲಿಂದಲೋ ಬಂದು ಇವರ ನಡುವೆ ತೂರಿಕೊಳ್ಳುತ್ತಾನೆ. ಕೆಲವರು ಅವನನ್ನು ಸೇರಿಸಿಕೊಳ್ಳುತ್ತಾರೆ. ಆದರೆ ಅವನಿಗೇ ಸರಿಹೊಂದದೆ ಬೇರಾಗುತ್ತಾನೆ. ಆಗಾಗ ಅವನ ಮುಖ ಅರಳುತ್ತದೆ, ಖಿನ್ನವಾಗುತ್ತದೆ. ಈಗ ಅವನು ಒಬ್ಬೊಂಟಿಯಾಗಿದ್ದಾನೆ. ತನ್ನ ಚೀಲದಿಂದ ಬಿಳಿಯ ಹಾಳೆಯನ್ನು ತೆಗೆದುಕೊಂಡು ಚಿತ್ರ ಬರೆಯತೊಡಗುತ್ತಾನೆ.

ಇದ್ದಕ್ಕಿದ್ದಂತೆ ಜೋರಾಗಿ ಸೈರನ್ ಶಬ್ದವಾಗುತ್ತದೆ. ಜನರೆಲ್ಲರೂ ತಮ್ಮ ಕೆಲಸವನ್ನು ಅಲ್ಲಿಗೇ ಬಿಟ್ಟು ಚದುರುತ್ತಾರೆ. ಈಗ (ಮೂಕಾಭಿನಯದಲ್ಲಿ) ಯಂತ್ರವೊಂದು ಚಲಿಸುತ್ತಿದೆ.

ಜನರ ನಡುವಿದ್ದ ಹೆಂಗಸರು ಕೊಡವನ್ನು ಹಿಡಿದು ನೀರಿಗೆ ಹೊರಟಿದ್ದಾರೆ. ಅವರನ್ನು ನೋಡುತ್ತಿದ್ದಂತೆ ಬಣಗಾರನ ಮುಖ ಅರಳುತ್ತದೆ. ಸುಂದರ ವಸ್ತುವನ್ನು ನೋಡುವಂತೆ ಕಣ್ಣರಳಿಸಿ ನೋಡುತ್ತಿದ್ದಾನೆ. ಒನ್ನೆಲೆಯಲ್ಲಿ ಹಾಡು :

*ಬೆಡಗಿ ಬಂದಾಳು ನಡೆದು ನಡೆದು*
*ನಡುವಿನಲಿ ಕೊಡವ ಹಿಡಿದು*
*ಬೆಡಗಿ ಬಂದಾಳು ನಡೆದು ನಡೆದು*

*ಹೊಳೆವ ಕಣ್ಣಿನ ಹುಡುಗೀ*
*ಹೊಳೆಗೆ ನಡೆದಾಳು ಬೆಡಗಿ*
*ಹೊಳೆಯಾಗಿ ನಡೆದಾಳು ತುಡುಗಿ*
*ಹುಡುಗರ ಒಡಲೊಳಗೆ ಹುಡುದಿ*
*ಹುಡುಗರ ಒಡಲೊಳಗೆ ಹುಡುದಿ ॥ ಬೆಡಗಿ ಬಂದಾಳು ॥*

ಹುಡುಗಿಯರು ಯಾಂತ್ರಿಕವಾಗಿ ಹೊಳೆಯ ನೀರನ್ನು ಕೊಡದಲ್ಲಿ ತುಂಬಿಕೊಂಡು ಹೊರಡುತ್ತಾರೆ. ಕೆಲವರು ಕೆಲಸಗಾರರಿಗೆ ನೀರನ್ನು ಕೊಡುತ್ತಾರೆ. ಕೆಲವರು ಯಂತ್ರಕ್ಕೆ ನೀರನ್ನು ತುಂಬುತ್ತಾರೆ.

ನೀರನ್ನು ತರಲು ಬಂದ ಹುಡುಗಿಯರು ಈ

# ಕಾಯಕದ ಕೈಲಾಸದಲ್ಲೊಬ್ಬ ಬಣಗಾರ ಹುಡುಗ



ಬಣಗಾರನನ್ನು ನೋಡುತ್ತಾರೆ – ಕೆಲವರು ಕುತೂಹಲದಿಂದ, ಕೆಲವರು ತಮಾಷೆಯೆಂಬಂತೆ, ಮತ್ತೆ ಕೆಲವರು ಭಯದಿಂದ, ಇನ್ನೂ ಕೆಲವರು ನಿರ್ಭಾವದಿಂದ. ಕೊನೆಗೆ ಎಲ್ಲರೂ ಸೇರಿಕೊಂಡು ಜೋರಾಗಿ ನಗುತ್ತಾ ನೀರನ್ನು ಹೊತ್ತು ಹೊರಟುಹೋಗುತ್ತಾರೆ.

ಆದರೆ, ಅವರಲ್ಲೊಬ್ಬ ಹುಡುಗಿ, ಒಂದೆರಡು ಬಾರಿ ಹಿಂದೆ ನೋಡುತ್ತಾ, ನಗು ಬೆರಸಿ, ''ಪಾಪ !'' ಎಂದು ಹೋಗುತ್ತಾಳೆ. ಅಷ್ಟರಲ್ಲಿ ಹುಡುಗಿಯರೆಲ್ಲಾ ಕೊಡದೊಂದಿಗೆ ಮತ್ತೆ ನೀರಿಗೆ ಬರುತ್ತಾರೆ.

**ಹುಡುಗಿ-೧ :** (ಬಣಗಾರನಿಗೆ) ಪಾಪ! ನಿನಗೆ ಏನೂ ಕೆಲಸವೇ ಇಲ್ಲ, ಅಲ್ಲವಾ ?

**ಬಣಗಾರ :** ಕೆಲಸ ? ನನಗೆ ?? ಬೇಕಾದಷ್ಟಿದೆ !!

**ಹುಡುಗಿ-೨ :** ಇಲ್ಲದಿದ್ದರೆ ಕೆಲಸ - ನೀನು ಬರಿ ಅಲಸ !

(ಕೆಲವು ಹುಡುಗಿಯರು ಇದನ್ನೇ ರಾಗವಾಗಿ ಹೇಳುತ್ತಾ ಮುಖ ತಿರುವಿ, ಕೈ ತಿರುವುತ್ತಾ ಹೋಗುತ್ತಾರೆ.)

**ಬಣಗಾರ :** ನನಗೆ ಒಂದು ಕ್ಷಣವೂ ಬಿಡುವಿರೋದಿಲ್ಲ, ನಾನು ಕೆಲಸ ಯಾವಾಗ ಮಾಡಲಿ ?

**ಹುಡುಗಿ-೩ :** (ಅರ್ಥವಾಗದೆ) ನಿನಗ ನಾನೊಂದು ಕೆಲಸ ಕೊಡ್ತೀನಿ ಮಾಡ್ತೀಯಾ ?

**ಹುಡುಗ :** ಹೊಳೆಯ ಹಾಗೆ ನಳನಳಿಸುವ ಹುಡುಗಿ, ಕೊಡು ಕೆಲಸವ, ಇಗೋ, ಕಾದು ಕುಳಿತಿದ್ದೇನೆ.

(ಅವನ ನಾಟಕೀಯ ಮಾತು ಕೆಲವರಿಗೆ ನಗು ಬರಿಸಿದೆ)

**ಹುಡುಗಿ-೩ :** ನಿನಗೆ ಎಂಥ ಕೆಲಸ ಇಷ್ಟವಾಗುತ್ತದೆ ? ಹೇಳು.

**ಬಣಗಾರ :** ಹುಡುಗಿ, ನಿನ್ನ ಕೈಯಲ್ಲಿ ಎರಡು ಕೊಡಗಳಿವೆಯಲ್ಲ, ಅದರಲ್ಲಿ ಒಂದನ್ನು ನನಗೆ ಕೊಡುವೆಯಾ ?

**ಹುಡುಗಿ-೩ :** ಕೊಡುವೆ ! (ಸಹಜವಾಗಿ) ಕೊಡುವೆ. ಯಾಕೆ ? ಹೊಳೆಯಿಂದ ನೀರು ತರ್ತೀಯಾ ?

**ಬಣಗಾರ :** ಇಲ್ಲ ಕೊಡದ ಮೇಲೆ ಚಿತ್ತಾರ ಬಿಡಿಸುವೆ.

**ಹುಡುಗಿ :** (ಅಸಡ್ಡೆಯಿಂದ) ಚಿತ್ರಾ ? ಅಷ್ಟೇನಾ ?... ಅಯ್ಯೋ ! ನಿನ್ನ ಹತ್ರ ಕಾಲಹರಣ ಮಾಡೋಕೆ ನಂಗೆ ಪುರುಸೊತ್ತಿಲ್ಲ, ನಾನು ಹೋಗ್ತೀನಪ್ಪ. ಏ ! ನಿಲ್ರೇ...

(ಹೋಗುತ್ತಾಳೆ. ಬಣಗಾರ, ಆಕೆ ಹೋದ ದಿಕ್ಕನ್ನೇ ನೋಡುತ್ತಾ ನಿಂತಿದ್ದಾನೆ – ಹಿನ್ನೆಲೆಯಲ್ಲಿ ಹಾಡು)

*ಏನು ಬಗೆಯೊ, ಯಾವ ಹಗೆಯೊ*
*ಮೊಗವ ತಿರುಗಿ ನಡೆದಳು। ಮುಗುದೆ ನಡೆದಳು।*
*ಕೊಡವ ಕೊಡದ ನಡೆದಳೆಂತೂ*
*ಹೊಳೆಯ ಹುಡುಗಿಯು। ಇಳೆಯ ಬೆಡಗಿಯು।*

(ಈಗ ಅವನು ನೀರನ್ನು ಹೊತ್ತ ಹುಡುಗಿಯ ಚಿತ್ರ ಬಿಡಿಸುವುದರಲ್ಲಿ ತಲ್ಲೀನನಾಗಿದ್ದಾನೆ)

*ಕಲೆಯ ಕಡಲ ಮಡಿಲಿನೊಳಗೆ*
*ತುಡುಗ ನಿರತನು। ಹುಡುಗ।*
*ನಗುವ ಮರೆತನು।*
*ಒಡಲ ನುಡಿಯ ಬಿಡಿಸುವಲ್ಲಿ*
*ತುಡುಗ ನಿರತನು। ಹುಡುಗ।*
*ಜಗವ ಮರೆತನು।*

*ನಗುವ ಮರೆತು, ಜಗವ ಮರೆತು*
*ಕಲೆ ನಿರತನು। ಹುಡುಗ।*
*ನೆಲವ ಮರೆತನು।*

(ಹಾಡು ಮುಗಿಯುತ್ತಿದ್ದಂತೆ ಹುಡುಗಿಯರೆಲ್ಲಾ ನೀರಿನ ಕೊಡವನ್ನು ಹೊತ್ತು ಬರುತ್ತಿದ್ದಾರೆ. ಮೊದಲು ಇವನ ಚಿತ್ರವನ್ನು ನೋಡುತ್ತಾರೆ. ಹುಡುಗಿ-೧ ಹಾಗೂ ೨, ಮುಸಿ ಮುಸಿ ನಗುತ್ತಾ ನೀರಿಗೆ ಹೋಗುತ್ತಾರೆ. ಬಣಗಾರ ತಿರುಗಿ ನೋಡುವಾಗ ಹುಡುಗಿ-೩ ನಿಂತಿದ್ದಾಳೆ.)

**ಬಣಗಾರ :** (ಚಿತ್ರ ಬಿಡಿಸುವುದನ್ನು ನಿಲ್ಲಿಸಿ) ನೀರ ನೀರೆ, ಕೊಡುವೆಯಾ ನನಗೆ ನಿನ್ನ ಕೊಡವ ? ಚಂದನೆಯ ಚಿತ್ತಾರ ಬಿಡಿಸಿಕೊಡುವೆ !

**ಹುಡುಗಿ-೩ :** (ಯೋಚಿಸಿ, ಕುತೂಹಲದಿಂದ, ಒಂದು ಕೊಡವನ್ನು ಕೊಡುತ್ತಾಳೆ. ಇದ್ದಕ್ಕಿದ್ದಂತೆ ತನ್ನ ಗೆಳತಿಯರೆಲ್ಲಾ ನೀರಿಗೆ ಹೋಗಿರುವುದನ್ನು ನೋಡಿ ತಾನೂ ಗಾಬರಿಯಿಂದ ಓಡುತ್ತಾಳೆ... ಈಗ ಹಿನ್ನೆಯಲ್ಲಿ, ''ಕಲೆಯ ಕಡಲ ಮಡಿಲಿನೊಳಗೆ...'' ಹಾಡಿನ ಸಂಗೀತವಿದೆ. ಹುಡುಗಿಯರು ನೀರನ್ನು ಹೊತ್ತು ಮತ್ತೆ ಬರುವಷ್ಟರಲ್ಲಿ ಬಣಗಾರ, ಹೂ-ಬಳ್ಳಿ-ಹಣ್ಣಿನ ಚಿತ್ರ ಬಿಡಿಸುತ್ತಿದ್ದಾನೆ. ಮೂವರೂ ಹುಡುಗಿಯರು ಬಂದು ಚಿತ್ರವನ್ನು ಕುತೂಹಲದಿಂದ ನೋಡುತ್ತಾರೆ. ಒಬ್ಬಳಿಗೆ ಅದು ಅರ್ಥವಾದಂತಿಲ್ಲ.)

**ಹುಡುಗಿ-೧ :** ಏನಿದು ? ಈ ಸಾಲು ಹೀಗೆ – ಆ ಸಾಲು ಹಾಗೆ !

**ಹುಡುಗಿ-೨ :** ಒಂದು ಸಾಲು ಮೇಲೆ, ಒಂದು ಸಾಲು ಕೆಳಗೆ !

**ಹುಡುಗಿ-೧ :** ಸುರುಳಿ-ಸುರುಳಿ-ಸುರುಳಿ.

**ಹುಡುಗಿ-೨ :** ಸೊನ್ನೆ-ಸೊನ್ನೆ-ಸೊನ್ನೆ! (ಬಣಗಾರನಿಗೆ) ಏನಿದು ?

**ಹುಡುಗಿ-೧ :** ಏನಿದರ ಅರ್ಥ ?

**ಹುಡುಗಿ-೨ :** ಇದರ ಉದ್ದೇಶ ಏನು ?

**ಬಣಗಾರ :** ಇಲ್ಲ, ಏನೂ ಇಲ್ಲ, ಚಿತ್ತಾರಕ್ಕೆ ಅರ್ಥ ಇರಬೇಕಿಲ್ಲ– ಸಾರ್ಥವೂ ಇರಬೇಕಿಲ್ಲ

(ಹುಡುಗಿ-೧ ಹಾಗೂ ೨, ಜೋರಾಗಿ ನಗುತ್ತಾರೆ. ಆದರೆ, ಹುಡುಗಿ-೩ ಚಿತ್ರದಲ್ಲಿ ಮೈಮರೆತಿರುವುದನ್ನು ನೋಡಿ, ಅವಳನ್ನು ಕಾಡಿಸುವಂತೆ, ಅವಳ ಸುತ್ತ ತಿರುಗುತ್ತಾ, ಕಚಗುಳಿಯಿಡುತ್ತಾ ಇದ್ದಾರೆ. ಹಿನ್ನೆಲೆಯಲ್ಲಿ ಹಾಡು)

*ಏನು ತಿಳಿಯಿತೆ ? ಗೆಳತೀ, ಏನು ಹೇಳಿತೆ ?*
*ಮೇಲೆ ಏರಿ, ಕೆಳಗೆ ಜಾರಿ,*
*ಸುರುಳಿ-ಸುರುಳಿ ಆಯಿತೆ। ಏನು ತಿಳಿಯಿತೆ।*

*ಕರಿಯ ಕೊಡದ ಮೇಲೆ ಬರೆದ*
*ಬಿಳಿಯ ಗೆರೆಯು ಏನು ಹೇಳಿತೇ। ಏನು ತಿಳಿಯಿತೆ ?*
*ತರುವ ಬಳಸಿ, ತಳಿರು ಲತೆಯು*
*ಮುಗಿಲಿಗೇರಿತೇ ? ಗೆಳತೀ। ತಾರೆ ಅರಳಿತೇ ? ॥*
*ಏನು ॥*

*ನೆಲದ ಕರಿಯು, ಮುಗಿಲ ಬಿಳಿಯು*
*ಒಲಿದು ಸೇರಿತೇ ? ಏನು ತಿಳಿಯಿತೇ ?*
*ಗೆಳತೀ, ಏನು ಹೇಳಿತೇ ?*

*ನಡಿಗೆ ಏಕೆ ಹಗುರವಾಯಿತೇ, ಗೆಳತೀ*
*ಕೊಡವು ಏಕೆ ಭಾರವಾಯಿತೇ ?*
*ಕೊಡದ ಮೇಲೆ ಕಡೆದ ಗೆರೆಯೆ ಭಾರವಾಯಿತೆ ?*
*ಗೆಳತೀ, ನಡಿಗೆಯೇಕೆ ಹಗುರವಾಯಿತೇ ? ॥ ಏನು ॥*

(ಹಾಡು ನಿಧಾನವಾಗುತ್ತಿದ್ದಂತೆ, ಹುಡುಗಿ-೩, ಮೈಮರೆತು ನಿಂತಿದ್ದಾಳೆ. ಅವಳ ಗೆಳತಿಯರು ಹಾಗೂ ಬಣಗಾರ ಹಿನ್ನೆಲೆಗೆ ಸರಿದಿದ್ದಾರೆ.)

**ಹುಡುಗಿ-೩ :** ನನ್ನ ಬಾಳಿನಲ್ಲಿ ಮೊಟ್ಟಮೊದಲ ಬಾರಿಗೆ ನಾನು ಮನುಷ್ಯಳಾಗಿದ್ದೇನೆ... ಯಾವುದಕ್ಕೆ ಅರ್ಥವೇ ಇಲ್ಲವೆಂದುಕೊಂಡಿದ್ದೆನೋ ಅದರಲ್ಲಿ ಅರ್ಥವನ್ನು ಕಂಡಿದ್ದೇನೆ... ಯಾವುದು ವ್ಯರ್ಥವೆಂದುಕೊಂಡಿದ್ದೆನೋ ಅದರಲ್ಲಿ ಸಾರ್ಥವನ್ನು ಕಂಡಿದ್ದೇನೆ...

(ನಿಧಾನವಾಗಿ ಕತ್ತಲಾಗುತ್ತದೆ. ಹಿನ್ನೆಲೆಯಲ್ಲಿರುವ ಯಂತ್ರವು ವಿಚಿತ್ರ ಶಬ್ದ ಮಾಡುತ್ತದೆ. ಒಬ್ಬ ಕೆಲಸಗಾರ, ''ನೀರು-ನೀರು'' ಎಂದು ಜೋರಾಗಿ ಕೂಗುತ್ತಾನೆ. ಹುಡುಗಿಯರು ಓಡೋಡಿ ಬಂದು ನೀರನ್ನು ಕೊಡುತ್ತಾರೆ. ಯಂತ್ರ ನಿಧಾನವಾಗಿ ಚಾಲನೆಗೊಳ್ಳುತ್ತದೆ. ಯಂತ್ರದಲ್ಲಿ ಕೆಲವೆಡೆ ಕೊಡದ ಚಿತ್ರವಿದೆ. ಕೆಲವರು ಅದನ್ನು ನೋಡುತ್ತಾ, ತಿದ್ದುತ್ತಿದ್ದಾರೆ. ಕೆಲವರು ಅದನ್ನು ನೋಡಿ ಆನಂದಿಸುತ್ತಿದ್ದಾರೆ. ಕೆಲಸ ಮೊದಲಿನಂತೆ ಚುರುಕಾಗಿ ನಡೆಯುತ್ತಿಲ್ಲ. ಯಂತ್ರ-ಚಾಲಕ ಸಿಡಿಮಿಡಿಗೊಂಡಿದ್ದಾನೆ. ಹುಡುಗಿಯರಿಗೆ ಬೇಗನೆ ನೀರು ತರಬೇಕೆಂದು ಸೂಚಿಸುತ್ತಾನೆ.

(ಈಗ ಹುಡುಗ ಚಿತ್ರಕ್ಕೆ ಬಣ್ಣ ಹಚ್ಚುತ್ತಿದ್ದಾನೆ. ನೀರನ್ನು ತರಲು ಬಂದ ಹುಡುಗಿಯರು ಮುಂದೆ ಮುಂದೆ ಹೋದಂತೆ, ಹುಡುಗಿ-೩, ನಿಧಾನವಾಗಿ, ಹಿಂದೆ ಹಿಂದೆ ಉಳಿದಿದ್ದಾಳೆ. ಬಣಗಾರ ತನ್ನ ಚಿತ್ರವನ್ನು ಬದಿಗಿಟ್ಟು ನಿಂತಿದ್ದಾನೆ. ಹುಡುಗಿ-೩, ಹತ್ತಿರ ಬಂದು ನಿಲ್ಲುತ್ತಾಳೆ.)

**ಹುಡುಗಿ-೩ :** ಬಣ್ಣಗಾರ, ಬಣ್ಣಗಾರ, ಇಗೋ ಬಂದೆ ಒಬ್ಬಳೆ ಏನು ಕೊಡುವೆ ? ಏನು ಕೊಡಲಿ ? ಇಲ್ಲಿ ನಾವು ಇಬ್ಬರೆ !

**ಬಣಗಾರ :** ಹೊಳೆಯ ಚಲುವೆ, ಹೇಳೆ, ಮುಗುದೆ, ಏನ ಕೊಡುವುದೆ ?

**ಹುಡುಗಿ-೩ :** ಬಣ್ಣಗಾರ, ಬಣ್ಣಗಾರ, ಏನ ಕೊಡುವೆ ನೀನು-ಅದನೆ ಪಡೆವೆ ನಾನು.

**ಬಣಗಾರ :** ಹೊಳೆಯ ಹುಡುಗಿ, ಇಳೆಯ ಬೆಡಗಿ,
ಮುಗಿಲ ತೋಟದಿಂದ ತಂದೆ
ಮುಡಿಗೆ ಹೂವು ಮುಡಿಸಲೆಂದೆ.

(ಬಣಗಾರ ಸುಂದರವಾದ ಬಣ್ಣ-ಬಣ್ಣದ ಹೂ-ಗೊಂಚಲನ್ನು ಅವಳಿಗೆ ಮುಡಿಸುತ್ತಾನೆ. ಹುಡುಗಿಯು ನಾಚಿ, ಕೊಡವನ್ನು ಅಲ್ಲಿಯೇ ಬಿಟ್ಟು ಓಡುತ್ತಾಳೆ. ಬಣ್ಣಗಾರ, ಆ ಕೊಡವನ್ನು ತೆಗೆದುಕೊಂಡು, ಚಿತ್ರವನ್ನು ತಿದ್ದುತ್ತಿದ್ದಾನೆ. ಅಷ್ಟರಲ್ಲಿ, ಹುಡುಗಿಯರೆಲ್ಲ ಮತ್ತೆ ಬರುತ್ತಾರೆ.)

**ಹುಡುಗಿ-೧ :** ಬಣ್ಣಗಾರ, ಬಣ್ಣಗಾರ, ಕೊಡೋ ನಮಗೆ ಕೊಡವನು...

**ಹುಡುಗಿ-೨ :** ಬಣ್ಣಗಾರ, ಬಣ್ಣಗಾರ ಬೇಗ ಕೊಡೊ ಕೊಡವನು...

**ಹುಡುಗಿ-೩ :** ಬಣ್ಣಗಾರ, ಬಣ್ಣಗಾರ, ಕೊಡೋ, ನನ್ನ ಕೊಡವನೂ...

**ಬಣಗಾರ :** ಹೊಳೆಯ ಹುಡುಗಿ, ಇಳೆಯ ಬೆಡಗಿ,
ಇಗೋ, ಕೊಡುವೆ ಕೊಡವನು
ಬಣ್ಣ ಹಚ್ಚಿ ಕೊಡುವೆನು.

**ಹುಡುಗಿ-೧ :** ಬಣ್ಣ? ಯಾವ ಬಣ್ಣ? ಎಲ್ಲಿಯ ಬಣ್ಣ?

ಬಣಗಾರ : ಹಸಿರು ಬಣ್ಣ, ತಂದು ಕೊಡುವೆಯಾ ಚಿಣ್ಣ ?

**ಹುಡುಗಿ-೨** : ಹಸಿರೆ ? ಯಾವ ಹಸಿರು ?

**ಹುಡುಗಿ-೧** : ಬಾಬಾ ಹಸಿರೆ, ನೇಸರದುಸಿರೇ ?

**ಹುಡುಗಿ-೩** : ಎಲ್ಲಿಯ ಹಸಿರೇ ? ಎಲ್ಲೂ ಇರುವ ಹುಲ್ಲಿನ ಹಸಿರೇ ?

ಬಣಗಾರ : ಅಲ್ಲ... ಅಲ್ಲ...

**ಹುಡುಗಿ-೨** : ಮರಗಳಲಿರುವಾ ತಳಿರಿನ ಹಸಿರೇ ?

ಬಣಗಾರ : ಅಲ್ಲ

**ಹುಡುಗಿ-೧** : (ಮುನಿಸಿನಿಂದ), 'ಅಲ್ಲ... ಅಲ್ಲ...' ಇನ್ನೆಲ್ಲಿಯ ಹಸಿರು ?

**ಹುಡುಗಿ-೩** : ಹಸಿರು ?...ಹಸಿರು... ಗಿಳಿ ಹಸಿರು ?

(ಬಣ್ಣಗಾರ, 'ಹೌದೆ'ನ್ನುವಂತೆ ತಲೆಹಾಕುತ್ತಾನೆ)

**ಹುಡುಗಿ-೧** : ಬಾ ಬಾ ಗಿಳಿಯೇ, ಬಣ್ಣದ ಗಿಳಿಯೇ,
*ಬಾ ಬಾ ಗಿಳಿಯೇ, ಬಾನಿಂದಿಳಿಯೇ,*
*ಬಾನಿಂದಿಳೆಗಿಳಿಯೇ,*
*ಗಿಳಿಯೇ, ಗಿಳಿಯೇ, ಇಳೆಗಿಳಿಯೇ,*
*ಇಳೆಗಿಳಿ, ಇಳಿ-ಇಳಿ, ಗಿಳಿ-ಗಿಳಿ ಇಳೆಗಿಳಿಯೇ...*
*ಬಾ ಗಿಳಿ...ಬಾ ಗಿಳಿಯೇ...*

(ಗಿಳಿ-ಹಸಿರು ಬಣ್ಣವನ್ನು ಬಣಗಾರನಿಗೆ ಕೊಡುತ್ತಾಳೆ. ಅದನ್ನು ಪಡೆದುಕೊಂಡು, ಕೊಡಕ್ಕೆ ಹಚ್ಚುತ್ತಾನೆ)

ಬಣಗಾರ : ಕೆಂಪು ಬಣ್ಣ ಬೇಕು...

**ಹುಡುಗಿ-೨** : ಕೆಂಪು ? ಯಾವ ಕೆಂಪು ?

**ಹುಡುಗಿ-೩** : ಮೂಡಾಣ ತೆರೆದೂ ಕಣ್ಣಾ...
*ಹರಡುವಾ ಬಣ್ಣಾ...*
*ಕೆಂಪಾನ ಕೆಂಪು ಬಣ್ಣಾ...*

(ಬಣ್ಣವನ್ನು ಕೊಡುತ್ತಾಳೆ. ಬಣ್ಣಗಾರ 'ಅಲ್ಲ'ವೆಂದು ತಲೆಯಾಡಿಸುತ್ತಾನೆ)

**ಹುಡುಗಿ-೧** : ಚಲುವೆಯರ ತುಟಿಯರಳಿ
*ಪುಟಿಯುವ ಬಣ್ಣ*
*ಕೆಂಪಾನೆ ಕೆಂಪು ಬಣ್ಣ....*

(ಬಣ್ಣವನ್ನು ಕೊಡುತ್ತಾಳೆ : ಬಣಗಾರ ಒಪ್ಪುವುದಿಲ್ಲ)

**ಹುಡುಗಿ-೨** : ಹೂಡುವಾ ಹೊಲದಲಿ
*ನೇಗಿಲ ಎಡ-ಬಲದಿ*
*ಹದವಾಗುವ ಬಣ್ಣ*
*ಕೆಂಪಾನ ಕೆಂಪು ಬಣ್ಣಾ...*

(ಕೊಡುತ್ತಾಳೆ. ಬಣಗಾರ ಇದನ್ನು ಪಡೆದು ಕೊಡಕ್ಕೆ ಹಚ್ಚುತ್ತಾನೆ)

ಬಣಗಾರ : ಹಳದಿಯ ಬಣ್ಣ ಬೇಕು...

**ಹುಡುಗಿ-೧** : ಹಳದಿಯನಿಲ್ಲಿ, ಹುಡುಕಲಿ ಎಲ್ಲಿ?...

**ಹುಡುಗಿ-೨** : ನಿಲ್ಲಿ, ನಿಲ್ಲಿ, ಇನ್ನೆಲ್ಲಿ ?
ಕೇದಿಗೆ ಬನದಲ್ಲಿ!

**ಹುಡುಗಿ-೩** : ಒಲ್ಲೆ, ಒಲ್ಲೆ, ನಾನೊಲ್ಲೆ
ಕೇದಿಗೆ ಬನವು-
ಹಾವಿನ ಮನೆಯು !
ಒಲ್ಲೆ! ಒಲ್ಲೆ!...ನಾನೊಲ್ಲೆ!

**ಹುಡುಗಿ-೧** : ಒಲ್ಲೆ!... ಒಲ್ಲೆ!! ನಾನೂ ಒಲ್ಲೆ

**ಹುಡುಗಿ-೩** : ಹುಡುಕಲಿ ಎಲ್ಲೇ ?... ಇನ್ನೆಲ್ಲೆ ?...
*ಓ !! ಹಾರುವ ಚಿಟ್ಟೆ! ಹಿಡಿದೇ ಬಿಟ್ಟೆ!*
*ಹ್ಹ! ಹ್ಹ! ಬಣ್ಣ! ಹುಡಿ-ಹುಡಿ ಚಿನ್ನ!*
*ಹಿಡಿಯೋ ಅಣ್ಣ, ಹಳದಿಯ ಬಣ್ಣ...*

(ಹಳದಿಯ ಬಣ್ಣವನ್ನು ಕೊಡುತ್ತಾಳೆ. ಹುಡುಗಿಯರೆಲ್ಲ ಕುತೂಹಲದಿಂದ ನೋಡುತ್ತಿದ್ದಾರೆ; ಚಿತ್ರ ಸಿದ್ಧವಾಗಿದೆ. ನಂತರ, ಬಣ್ಣದ ಕೊಡವನ್ನು ಹಿಡಿದು ಎಲ್ಲರೂ ನಲಿದಾಡುತ್ತಿದ್ದಂತೆ, ನಿಧಾನವಾಗಿ ಕತ್ತಲಾಗುತ್ತದೆ.)

ತಕ್ಷಣ ಬೆಳಕಾಗುತ್ತದೆ. ನೀರಿಲ್ಲದೇ ಯಂತ್ರ ಬುಸುಗುಡುತ್ತಿದೆ. ಜನರಿಗೂ ನೀರಿಲ್ಲದೆ ತೊಂದರೆಯಾಗಿದೆ. ಆದರೆ, ಅನೇಕ ಕೆಲಸಗಾರರು ಅದರ ಪರಿವೆಯಿಲ್ಲದೆ, ಚಿತ್ರ ಬಿಡಿಸುವುದು, ಕೆತ್ತನೆ, ಹಾಡು, ಹೀಗೆ... ಕಲೋಪಾಸಕರಾಗಿದ್ದಾರೆ. ಹುಡುಗಿಯರೂ, ರಂಗವಲ್ಲಿ ಮುಂತಾದ ಶೃಂಗಾರದಲ್ಲಿ ತೊಡಗಿದ್ದಾರೆ. ಇವೆಲ್ಲ, ಕಾರ್ಮಿಕ ಮುಖಂಡನನ್ನು ರೇಗಿಸಿದೆ. ಆತ, ಇದ್ದಕ್ಕಿದ್ದಂತೆ, ಸೈರನ್ನನ್ನು ಕೂಗಿಸಿ, ಕೆಲಸವನ್ನು ಹಠಾತ್ ನಿಲ್ಲಿಸುತ್ತಾನೆ. ಕೆಲವರ ಮುಖದಲ್ಲಿ ಮಾತ್ರ ಆತಂಕವಿದೆ; ಅನೇಕರು ಇದನ್ನು ಗಮನಿಸಿಯೂ ಇಲ್ಲವೇನೋ – ತಮ್ಮಷ್ಟಕ್ಕೆ ತಾವು ರಂಜನೆಯಲ್ಲಿ ಮೈಮರೆತಿದ್ದಾರೆ. ಇದರಿಂದಾಗಿ, ಮುಖಂಡ ಆತಂಕಗೊಂಡಿದ್ದಾನೆ. ತನ್ನ ಕೆಲವು ಅಧಿಕಾರಿಗಳೊಂದಿಗೆ ಹೊರಟುಹೋಗುತ್ತಾನೆ... ನಿಧಾನವಾಗಿ ಕತ್ತಲಾಗುತ್ತದೆ.

ಮತ್ತೆ ಬೆಳಕಾದಾಗ, ಜನರ ಸಭೆ ಸೇರಿದೆ-ಗದ್ದಲ. ಜನರು ಮಾತನಾಡಿಕೊಳ್ಳುತ್ತಿದ್ದಾರೆ :

''ಇಷ್ಟು ವರ್ಷವಾದರೂ, ಇಂಥ ಸ್ಥಿತಿ ಬಂದಿರಲಿಲ್ಲ.''

''ದೇಶದ ಚಕ್ರಾನೇ ನಿಂತುಹೋಗಿದೆ.''

''ನಾವು ಹಿರಿಯರು ಸತ್ ಹೋಗಿದೀವೇನು ?''

''ಯಾರು ಏನೇ ಹೇಳ್ಲಿ, ಆ ಕಲಾವಿದ ಮಾತ್ರ ಮಹಾನ್ ವ್ಯಕ್ತಿ ಕಣಪ್ಪ.''



## ಆಶಾವಾದ

ನಮ್ಮೂರ ಪದವೀಧರ ತಿಮ್ಮ
ಸರ್ಕಾರಿ ನೌಕರಿಗಾಗಿ ಅಲೆದನು
ಅದು ಸಿಗದೆ ಹೋದಾಗ
ತನ್ನ ಮಗನಿಗಾದರೂ ಸಿಗಲೆಂದು
ಬೇಗನೆ ಮದುವೆಯಾದನು

ಎಸ್. ಎಂ. ಸತ್ತಾರ್
ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಮುಂಡಗೋಡು

''ನಮಗಂತೂ ಕೆಲ್ಸ-ಕೆಲಸಾ ಅಂತ ಜೀವಾನೆ ಸಾಕಾಗಿ ಹೋಗಿತ್ತು.''

''ಕೆಲಸವಿಲ್ಲ-ಬೊಗಸವಿಲ್ಲ-ಸೋಮಾರಿ ನನ್ಮಕ್ಕಳು.''

''ಇದಕ್ಕೆಲ್ಲ ಕಾರಣ – ಆ ಬಣಗಾರ ಹುಡುಗ ; ಶುದ್ಧ ಸೋಂಭೇರಿ.''

''ದಿನದಲ್ಲಿ ೨೪ ಗಂಟೇನೂ ಬಿದ್ಕೊಂಡು ಚಿತ್ರಾ ಬಿಡಿಸ್ತಿರ್ತಾನೆ- ಸೋಮಾರಿ.''

''ಅವನು ಹಾಳಾಗೋದಲ್ಲದೆ-ನಮ್ಮ ಜನಾನ್ನೂ ಹಾಳ್ ಮಾಡ್ತಾನಲ್ಲ- ಅದ್ಹೇಳಿ.''

''ಅದೇನೋ ಕೋತೀ ತಾನು ಹಾಳಾಗೋದಲ್ದೆ, ಇಡೀ ವನಾನೂ ಹಾಳ್ ಮಾಡಿತ್ತಂತಲ್ಲ- ಹಾಗೆ.''

''ಏನೇ ಹೇಳಿ, ನಮ್ಮ ದೇಶಕ್ಕೆ ಆತ ಹೊಸ ಜೀವ ಕೊಟ್ಟ.''

''ಕೆಲಸದ ನಡುವೆ ರಂಜನೇನೂ ಬೇಕಲ್ವಾ ? ಅದನ್ನ, ಅವನು ನಮಗೆ ಕಲಿಸಿಕೊಟ್ಟ.''

''ಸರಿಯಪ್ಪ, ಈ ಮಾತನ್ನ, ಪಂಚರ ಮುಂದೆ ಹೇಳಿ ಬಿಟ್ಟೀಯ, ಗಲ್ಲಿಗೇರಿಸಿಬಿಟ್ಟಾರು.''

''ಹೌದು, ಸುಮ್ನೆ ಹೊಟ್ಟೇನಲ್ಲಿಟ್ಕೊಂಡು ಕೂರ್ಬೇಕು... ಇಲ್ಲ- ಸಾಯ್ಬೇಕು.''

''ಏ ! ಸುಮ್ನೆ ಇರೋ, ಪಂಚರು ಬರ್ತಿದಾರೆ...''

(ಪಂಚರು ಬಂದು ಕುಳಿತಿದ್ದಾರೆ. ಅವರಲ್ಲಿ , ಯಂತ್ರದ ಚಾಲಕ, ಜಜ್, ರಾಜಕಾರಣಿ, ರೈತಮಹಿಳೆ ಹಾಗೂ ಅಧಿಕಾರಿ ಇದ್ದಾರೆ. ಜನರು ಈಗ ಸುಮ್ಮನಾಗಿದ್ದರೂ, ಅಲ್ಲಲ್ಲಿ, ಕೆಲವರು ತಮ್ಮ ತಮ್ಮಲ್ಲೇ ವಾದ ಮಾಡಿಕೊಳ್ಳುತ್ತಿದ್ದಾರೆ.)

**ಜಜ್** : ಸದ್ದು....ಸದ್ದು....ಸದ್ದು... ಮಹಿಳೆಯರೆ ಅಥವಾ ಮಹನೀಯರೆ, ನಾಗರಿಕರೆ ಅಥವಾ ಹಳ್ಳಿಗರೆ, ರೈತರೆ ಅಥವಾ ಕಾರ್ಮಿಕರೆ,

**ರಾಜಕಾರಣಿ** : ನಾವೆಲ್ಲ ಇವತ್ತು ಇಲ್ಲಿ ನೆರೆದಿರುವ ವಿಚಾರ ನಿಮಗೆ ಗೊತ್ತೇ ಇದೆ...

**ರೈತ ಮಹಿಳೆ** : ಸುಲಲಿತವಾಗಿ ಸಾಗ್ತಾ ಇದ್ದ ನಮ್ಮ ಜೀವನ ಚಕ್ರ ನಿಂತುಹೋಗಿದೆ. ಬದುಕು ಅಲ್ಲೋಲ ಕಲ್ಲೋಲವಾಗಿದೆ...

**ಯಂತ್ರ ಚಾಲಕ** : ಹಗಲು-ಇರುಳು ದುಡಿತಾ ಇದ್ದ ನಮ್ಮ ಜನರು ಈಗ ದುಡಿಮೆಯನ್ನು ಮರೆತಿದ್ದಾರೆ....

**ಅಧಿಕಾರಿ** : ಇನ್ನೂ ತಡಮಾಡಿದರೆ ಸರ್ವನಾಶವಾದೀತೆಂದು ಈ ಸಭೆಯನ್ನ ಕರೆದಿದ್ದೇವೆ...

**ಜಜ್** : ಇಲ್ಲಿ ಚರ್ಚಿಸಬೇಕಾದ ವಿಚಾರ ಏನೂ ಇಲ್ಲ...

**ರಾಜಕಾರಣಿ** : ನಾವು ಹೇಳಬೇಕಾದ್ದನ್ನು ಹೇಳ್ತೀವೆ – ನೀವು ತಪ್ಪದೇ ಪಾಲಿಸತಕ್ಕದ್ದು...

**ರೈತ ಮಹಿಳೆ** : ಇದು ನಮ್ಮ ಸಂಪ್ರದಾಯ...

**ಯಂತ್ರ ಚಾಲಕ** : ನೇರವಾಗಿ ವಿಚಾರಕ್ಕೆ ಬರಬೇಕು ಅಂತಂದ್ರೆ...

**ಅಧಿಕಾರಿ** : ನಮ್ಮಲ್ಲಿ, ಇದ್ದಕ್ಕಿದ್ದಹಾಗೆ, ಸೋಮಾರಿತನ ಬೆಳೀತಾ ಇದೆ...

**ಜಜ್** : ಹಿಂದೊಬ್ಬಳು ಮಾಡೋ ಕೆಲಸವನ್ನು ಬಿಟ್ಟು ಹಾಡೋ ದಾಸಯ್ಯನನ್ನು ಕಟ್ಟಿಕೊಂಡು ಹೋಗಿದ್ದಳಂತೆ...

**ರಾಜಕಾರಣಿ** : ಹಾಗೆ, ನಮ್ಮಲ್ಲಿಗೆ ಒಬ್ಬ ದಾಸಯ್ಯ ಬಂದಿದ್ದಾನೆ...

೫೦ನೇ ಪುಟಕ್ಕೆ

# ಶಿಕ್ಷಣ ಹಾಗೂ ಮಹಿಳಾ ಸಬಲೀಕರಣ

ಡಾ|| ಬಸವರಾಜ ಸಬರದ

ತೃತೀಯ ಜಗತ್ತಿನ ದೇಶಗಳಲ್ಲಿ ಮಹಿಳಾ ಸಬಲೀಕರಣದ ವಿಷಯದ ಬಗೆಗೆ ಚರ್ಚೆ ಪ್ರಾರಂಭವಾಗಿರುವುದು ಆಶಾದಾಯಕ ಬೆಳವಣಿಗೆ ಆಗಿದೆ. ಇಪ್ಪತ್ತನೇ ಶತಮಾನ, ಮಹಿಳಾ ಸಬಲೀಕರಣದ ಕಾರಣಕ್ಕಾಗಿ ಬಹುಮಹತ್ವದ ಕಾಲಘಟ್ಟವಾಗಿದೆ. ಮಹಿಳಾ ಶಿಕ್ಷಣ ಹಾಗೂ ಜಾಗೃತಿಯ ಮೂಲಕ ಈ ಶತಮಾನದಲ್ಲಿ ಜಗತ್ತಿನಾದ್ಯಂತ ಸ್ತ್ರೀವಾದಿ ಚಳುವಳಿಗಳು ಪ್ರಾರಂಭವಾದವು. ಮಹಿಳಾ ಮಹಾವಿದ್ಯಾಲಯಗಳು, ವಿಶ್ವವಿದ್ಯಾಲಯಗಳು ಮಹಿಳೆಯರಿಗೆ ಉನ್ನತ ಶಿಕ್ಷಣ ನೀಡುವುದರ ಮೂಲಕ ಅವರ ಆಲೋಚನಾ ಕ್ರಮವನ್ನು ಬದಲಿಸಿದವು. ಇಂತಹ ವೈಚಾರಿಕ ನೆಲೆಯಲ್ಲಿ ಬೆಳೆದುಬಂದ ಕೆಲವು ಮಹಿಳೆಯರು, ಪುರುಷರು ಸ್ತ್ರೀವಾದಿ ಚಳುವಳಿಗಳು ಹುಟ್ಟಿಕೊಳ್ಳಲು ಕಾರಣರಾದರು. ಈ ಶತಮಾನದಲ್ಲಿ ನಡೆದ ಅನೇಕ ಸಾಂಸ್ಕೃತಿಕ ಚಳುವಳಿಗಳು, ಪ್ರಗತಿಪರ ಚಳುವಳಿಗಳು ಮಹಿಳಾ ಸಬಲೀಕರಣಕ್ಕೆ ಸಂಬಂಧಿಸಿದಂತೆ ಬಹುಮುಖ್ಯ ಪಾತ್ರ ವಹಿಸಿದವು. ಸ್ತ್ರೀವಾದಿ ಚಳುವಳಿಯೆಂದರೆ ಅದು ಕೇವಲ ಸ್ತ್ರೀಯರು ನಡೆಸುವ ಚಳುವಳಿ ಮಾತ್ರವಲ್ಲ, ಸಮಾಜ ವ್ಯವಸ್ಥೆಯಲ್ಲಿ ಲಿಂಗಸಮಾನತೆಯನ್ನು ತರ ಬಯಸುವ ಎಲ್ಲ ಜಾಗೃತ ಮನಸ್ಸುಗಳ ಹೋರಾಟ. ಹೀಗಾಗಿ ಮಹಿಳಾ ಸಬಲೀಕರಣದ ಕಾರ್ಯದಲ್ಲಿ ಮಹಿಳೆಯರಂತೆ ಪುರುಷರೂ ಆಸಕ್ತಿ ತೋರಿಸಬೇಕಾಗಿದೆ.



ಚರಿತ್ರೆಯನ್ನು ಗಮನಿಸಿದಾಗ, ಐತಿಹ್ಯಗಳನ್ನು ಅವಲೋಕಿಸಿದಾಗ, ಸಾಂಸ್ಕೃತಿಕ ಸಂಕಥನಗಳನ್ನು ಬಿಚ್ಚಿದಾಗ ಮಹಿಳಾ ಸಾಧ್ಯತೆಗಳು ಸ್ಪಷ್ಟವಾಗುತ್ತವೆ. ಹಿಂದೆ ಅನೇಕ ಮಹಿಳೆಯರು ಸಾಮ್ರಾಜ್ಯವಾಳಿದ್ದಾರೆ, ಉನ್ನತ ಸ್ಥಾನಗಳಲ್ಲಿ ಕಾರ್ಯ ನಿರ್ವಹಿಸಿದ್ದಾರೆ, ಪಾಂಡಿತ್ಯ ಪಡೆದವರಾಗಿದ್ದಾರೆ. ಇಷ್ಟೆಲ್ಲಾ ದೀರ್ಘ ಪರಂಪರೆಯಿರುವ ಮಹಿಳೆ ಇಂದೇಕೆ ದುರ್ಬಲಳಾದಳು ? ಆಕೆಯ ಸಬಲೀಕರಣದ ಮಾತು ಈಗೇಕೆ ಬಂತು ? ಎಂಬ ಪ್ರಶ್ನೆಗಳನ್ನು ಬಿಡಿಸಿಕೊಂಡಾಗ ಸಬಲೀಕರಣದ ಅರ್ಥವ್ಯಾಪ್ತಿ ಸ್ಪಷ್ಟವಾಗುತ್ತದೆ.

ಹಿಂದೂ ಶಿಕ್ಷಣ ಪದ್ಧತಿ ವರ್ಣವ್ಯವಸ್ಥೆಯ ಮೇಲೆ ನಿಂತಿದೆ. ಹೀಗಾಗಿ ವರ್ಣಭೇದ ನೀತಿಯನ್ನುಳಿಸುವುದು, ಬೆಳೆಸುವುದು ಅದರ ಮುಖ್ಯ ಉದ್ದೇಶವಾಗಿದೆ. ಆ ಕಾರಣಕ್ಕಾಗಿಯೆ ಅಲ್ಲಿ ಎಲ್ಲ ವರ್ಗದ ಜನರಿಗೆ, ಎಲ್ಲ ಮಹಿಳೆಯರಿಗೆ ಶಿಕ್ಷಣದ ಅವಕಾಶವಿರಲಿಲ್ಲ. ಕೆಲವರು ಅವಕಾಶ ಪಡೆದುಕೊಂಡರೂ ಕೂಡ, ಅವರಿಗೆ ಭೇದನೀತಿ ಶಿಕ್ಷಣ ಪದ್ಧತಿಯನ್ನು ಪ್ರತಿಭಟಿಸುವುದಾಗಲಿಲ್ಲ. ಹೀಗೆಂದಾಕ್ಷಣ ಈ ಶಿಕ್ಷಣ ಪದ್ಧತಿಯನ್ನು ಸಾರಾಸಗಟಾಗಿ ತಿರಸ್ಕರಿಸಬೇಕೆಂದಲ್ಲ. ಅದರಲ್ಲಿಯೂ ಕೆಲವು ಜೀವಪರ-ಮಹಿಳಾಪರ ವಿಷಯಗಳಿವೆ. ಚರ್ಚೆಯ ಮೂಲಕ, ಸಂಶೋಧನೆಯ ಮೂಲಕ ಅಂತಹ ಪರಂಪರೆಯನ್ನು ಕಟ್ಟಿಕೊಳ್ಳಬಹುದಾಗಿದೆ. ಇನ್ನು ಇಂಗ್ಲಿಷ್ ಶಿಕ್ಷಣ ಪದ್ಧತಿ. ಚಾತುರ್ವರ್ಣ್ಯ ಶಿಕ್ಷಣ ಪದ್ಧತಿಗೆ ಪರ್ಯಾಯವಾಗಿ ಬೆಳೆದುಕೊಂಡು ಬಂದ ಇಂಗ್ಲಿಷ್ ಶಿಕ್ಷಣ ಪದ್ಧತಿಯು ನಮ್ಮ ದೇಶದಲ್ಲಿ ಹೊಸ ಬೆಳವಣಿಗೆಗೆ ನಾಂದಿಯಾಯಿತು. ವೈಜ್ಞಾನಿಕ ಮನೋಭಾವವನ್ನು ಬೆಳೆಸಿತು. ವೈಚಾರಿಕ ನೆಲೆಗಳನ್ನು ಕಟ್ಟಿಕೊಟ್ಟಿತು. ಮಹಿಳೆ ತಲೆಯೆತ್ತಿ ನಿಲ್ಲಲು ಈ ಶಿಕ್ಷಣ ಪದ್ಧತಿ ನೆರವಾಯಿತು. ಈ ಶಿಕ್ಷಣ ಪದ್ಧತಿ ನಮ್ಮಲ್ಲಿ ಬಾರದೇ ಹೋಗಿದ್ದರೆ, ಪಾಶ್ಚಾತ್ಯರ ವೈಚಾರಿಕ ಚಿಂತನೆ ನಮಗೆ ತಿಳಿಯದೇ ಹೋಗಿದ್ದರೆ, ದಲಿತರು ಮಲ ಹೊರುವುದು ತಪ್ಪುತ್ತಿರಲಿಲ್ಲ, ಮಹಿಳೆಯರು ಮಾರಾಟದ ವಸ್ತುಗಳಾಗುವುದು ಕೊನೆಗೊಳ್ಳುತ್ತಿರಲಿಲ್ಲ. ಈ ಕಾರಣಗಳಿಂದ ಇಂಗ್ಲಿಷ್ ಶಿಕ್ಷಣ ಪದ್ಧತಿಯನ್ನು ಸ್ವಾಗತಿಸಿದ್ದು ತುಂಬ ಸೂಕ್ತವಾದುದ್ದಾಗಿದೆ. ಆದರೆ ಮುಖ್ಯ ಪ್ರಶ್ನೆಯೆಂದರೆ ಪ್ರಾರಂಭದಲ್ಲಿ ಈ ಇಂಗ್ಲಿಷ್ ಶಿಕ್ಷಣ ಪದ್ಧತಿ ಕೂಡ ಮೇಲು ವರ್ಗದವರಿಗೆ ಮಾತ್ರ ದೊರೆಯಿತು. ದಲಿತರು-ದುಡಿವವರ್ಗ-ಮಹಿಳೆಯರು ಅದರಿಂದ ದೂರವೇ ಉಳಿದಿದ್ದರು. ಆದರೆ ಕಾಲಕ್ರಮೇಣ ಈ ಶಿಕ್ಷಣ ಪದ್ಧತಿ ಇಡೀ ದೇಶವನ್ನೇ ವ್ಯಾಪಿಸಿತು. ಆದರೆ ನಂತರದಲ್ಲಿ ನಮ್ಮಲ್ಲಿ ಕಾನ್ವೆಂಟ್ ಸಂಸ್ಕೃತಿ ಹೆಚ್ಚಾಯಿತೇ ಹೊರತು, ಇಂಗ್ಲಿಷ್ ಶಿಕ್ಷಣದ ಒಳಗಡೆಯಿದ್ದ ವೈಚಾರಿಕತೆ-ಸಮಾನತೆ-ಫಿಲಾಸಫಿಯಂತಹ ವಿಷಯಗಳು ಜನಸಾಮಾನ್ಯರಿಗೆ ತಲುಪಲೇ ಇಲ್ಲ.

ಇಂದು ಕಾನ್ವೆಂಟ್ ಶಿಕ್ಷಣ ಕಮರ್ಷಿಯಲ್ ಆಗಿದೆ. ಷೇಕ್ಸ್‌ಪಿಯರ್‌ನನ್ನು ಓದಲೆಂದಾಗಲಿ, ಟಾಲ್‌ಸ್ಟಾಯ್ ಚಿಂತನೆಗಳು ತಿಳಿಯಬೇಕೆಂದಾಗಲಿ, ಗಾರ್ಕಿಯ ವೈಚಾರಿಕತೆಯನ್ನು ಅರಿಯಬೇಕೆಂದಾಗಲಿ ಇಂದು ಪಾಶ್ಚಾತ್ಯ ಶಿಕ್ಷಣವನ್ನು ಪಡೆಯುತ್ತಿಲ್ಲ. ಇಂದು ಆ ಶಿಕ್ಷಣದ ಆತ್ಮ ದೂರವಾಗಿ ಅದರ ದೇಹದ ಅಂಗಾಂಗಗಳು ಮಾತ್ರ ನಮ್ಮಲ್ಲುಳಿದುಕೊಂಡಿವೆ. ಇಂದು ತೀವ್ರವಾಗಿ ಬೆಳೆಯುತ್ತಿರುವ ಸಾಫ್ಟ್‌ವೇರ್ ಸಂಸ್ಕೃತಿ ನಮ್ಮ ಮಕ್ಕಳನ್ನು ಕರುಳಬಳ್ಳಿಯ ಸಂಸ್ಕೃತಿಯಿಂದಲೇ ಬೇರ್ಪಡಿಸುವ ಅಪಾಯಗಳಿವೆ.

ನಮ್ಮ ಶಿಕ್ಷಣ ಪದ್ಧತಿಯಲ್ಲಿರುವ ಜನಪರ ನಿಲುವುಗಳನ್ನು ಕಟ್ಟಿಕೊಳ್ಳುತ್ತ, ಸಮಾನತೆಯ ನೆಲೆಗಳನ್ನು ಕಂಡುಕೊಳ್ಳುತ್ತ ಪರ್ಯಾಯವಾದ ಶಿಕ್ಷಣ ಪದ್ಧತಿಯನ್ನು ನಾವಿಂದು ಜಾರಿಗೆ ತರಬೇಕಾಗಿದೆ. ಈ ಪರ್ಯಾಯ ಶಿಕ್ಷಣ ಪದ್ಧತಿಗೆ ನಮ್ಮ ಬುಡಕಟ್ಟು ಸಂಸ್ಕೃತಿ ಹಾಗೂ ಜಾನಪದ ಸಂಸ್ಕೃತಿ ಮೂಲ ನೆಲೆಗಳಾಗಬೇಕು. ಶಿಷ್ಟ ಸಂಸ್ಕೃತಿಗಿಂತ ಭಿನ್ನವಾಗಿ ಬೆಳೆದ ಜಾನಪದ ಸಂಸ್ಕೃತಿಯ ಅಂತಃಕರಣದ ಸೆಲೆಗಳು ಇಲ್ಲಿ ಕಾಣಿಸಿಕೊಳ್ಳಬೇಕು. ಶೈಕ್ಷಣಿಕ ಜಾನಪದದ ಮಾದರಿಗಳನ್ನು ಇಲ್ಲಿ ಜೋಡಿಸಿಕೊಳ್ಳಬೇಕು. ಮಾತೃಪ್ರಧಾನ ಪದ್ಧತಿಯ ಸಾಂಸ್ಕೃತಿಕ ಸಂಕಥನಗಳು ನಮ್ಮ ಪರ್ಯಾಯ ಶಿಕ್ಷಣ ಪದ್ಧತಿಗೆ ತಳಪಾಯವಾಗಬೇಕು. ಇಂತಹ ಪರ್ಯಾಯ ಸಂಸ್ಕೃತಿ ಹಾಗೂ ಶಿಕ್ಷಣದ ಮೂಲಕ ಮಾತ್ರ ಮಹಿಳೆಯ ಸಬಲೀಕರಣ ಸಾಧ್ಯವಾಗುತ್ತದೆ. ಇಲ್ಲದೆ ಹೋದರೆ ಬೇವಿನ ಬೀಜವನ್ನು ಬಿತ್ತಿ ಬೆಲ್ಲದ ಫಲವನ್ನು ಕೇಳಿದಂತಾಗುತ್ತದೆ. ತಳ ಸಂಸ್ಕೃತಿಯ ನೆಲೆಗಳನ್ನು ಕಂಡುಕೊಳ್ಳಲಾರದೆ, ಪರ್ಯಾಯ ಶಿಕ್ಷಣ ಪದ್ಧತಿಯನ್ನು ರೂಪಸಿಕೊಳ್ಳಲಾರದೆ ಸಮಾನತೆಯ ಬಗ್ಗೆ ಮಾತನಾಡುವುದು ವ್ಯರ್ಥವೆನಿಸುತ್ತದೆ. ಯಜಮಾನ ಸಂಸ್ಕೃತಿಯನ್ನು ವೈಭವೀಕರಿಸುವವರೇ ಮಹಿಳಾ ಸಬಲೀಕರಣ ಕುರಿತು ಮಾತನಾಡುವುದರಿಂದ ಏನು ಪ್ರಯೋಜನ ? ಇಂದು ಮಹಿಳೆ ಸಬಲಳಾಗಬೇಕಾದರೆ ಪರ್ಯಾಯ ಶಿಕ್ಷಣ ಪದ್ಧತಿಯನ್ನು ಕಂಡುಕೊಳ್ಳಲೇಬೇಕಾಗಿದೆ.

ಸಂಸ್ಕೃತಿಗೂ ಶಿಕ್ಷಣಕ್ಕೂ ಮಹತ್ವದ ಸಂಬಂಧವಿದೆ. ಸಂಸ್ಕೃತಿಯಿಂದ ಬೇರ್ಪಟ್ಟ ಶಿಕ್ಷಣ ಜೀವವಿಲ್ಲದ ದೇಹದಂತಾಗುತ್ತದೆ. ಮಾತೃ ಪ್ರಧಾನ ಪದ್ಧತಿಯಲ್ಲಿ ಮತ್ತು ಅದರ ಸಾಂಸ್ಕೃತಿಕ ಸಂಕಥನಗಳಲ್ಲಿ ಶಿಕ್ಷಣಕ್ಕೂ-ಸಂಸ್ಕೃತಿಗೂ ಇರುವ ಕರುಳಬಳ್ಳಿಯ ಸಂಬಂಧವನ್ನು ಮನಗಾಣಬಹುದಾಗಿದೆ.

ಶಿಕ್ಷಣವೆಂದರೆ ಕೇವಲ ಅಕ್ಷರ ಕಲಿಯುವುದಲ್ಲ. ಶಿಕ್ಷಣಕ್ಕೂ-ಸಂಸ್ಕೃತಿಗೂ-ಬದುಕಿಗೂ ಅವಿನಾಭಾವ ಸಂಬಂಧವಿದೆ. ಭಾರತದ ಅನೇಕ ಬುಡಕಟ್ಟುಗಳಲ್ಲಿ ಅಕ್ಷರ ಕಲಿಸುವ ಶಿಕ್ಷಣ ಇರಲಿಕ್ಕಿಲ್ಲ; ಆದರೆ ಬದುಕನ್ನು ರೂಪಿಸಿಕೊಳ್ಳುವ ಶಿಕ್ಷಣವಿದೆ, ಸಂಸ್ಕೃತಿಯನ್ನು ಉಳಿಸಿಕೊಳ್ಳುವ ಶಿಕ್ಷಣವಿದೆ. ಆದುದರಿಂದ ಅವರನ್ನು ಅನಕ್ಷರಸ್ಥರೆಂದು ಕರೆಯಬಹುದೇ ಹೊರತು ಅಶಿಕ್ಷಿತರೆಂದು-ಅಸಂಸ್ಕೃತರೆಂದು ಕರೆಯಲಾಗದು. ಸಂಸ್ಕೃತಿಯ ಮೂಲ ಆಕರಗಳು ಅವರ ಶಿಕ್ಷಣ ಪದ್ಧತಿಯಲ್ಲಿವೆ.

''ನೋಡಿ ತಿಳಿ ಮಾಡಿ ಕಲಿ'' – ಇದು ಬುಡಕಟ್ಟು ಜನಾಂಗಗಳ ಶಿಕ್ಷಣ ಪದ್ಧತಿಯಾಗಿದೆ. ಅವರಿಗೆ ಶಿಕ್ಷಣ-ಸಂಸ್ಕೃತಿ-ಸಾಹಿತ್ಯ-ಬದುಕು ಹೀಗೆ ಬೇರೆ ಬೇರೆಯಾಗಿ ಕಾಣುವುದಿಲ್ಲ. ಶಿಕ್ಷಣ ಪಡೆಯಲಿಕ್ಕೆಂದು

ಇಷ್ಟು ವರ್ಷ, ಶಿಕ್ಷಣ ಪಡೆದ ಮೇಲೆ ಕೆಲಸ ಮಾಡಲೆಂದು ಇಷ್ಟು ವರ್ಷ ಅವರಲ್ಲಿ ನಿಗದಿಯಾಗಿರುವುದಿಲ್ಲ. ಅವರು ಶಿಕ್ಷಣ ಪಡೆಯುತ್ತಲೇ ದುಡಿಯುತ್ತಿರುತ್ತಾರೆ. ಕಲಿಕೆ-ಗಳಿಕೆ ಅವರಲ್ಲಿ ಏಕಕಾಲದಲ್ಲಿಯೇ ನಡೆದಿರುತ್ತವೆ. ನಮ್ಮ ಹಳ್ಳಿಗಾಡಿನ ಕೈಕಸುಬುಗಳಾಗಿರಬಹುದು, ಗುಡಿಕೈಗಾರಿಕೆಗಳಾಗಿರಬಹುದು ಇವೆಲ್ಲಾ ಜಾನಪದ ಶಿಕ್ಷಣ ಪದ್ಧತಿಯಿಂದ ಬೆಳೆದು ಬಂದವುಗಳಾಗಿವೆ. ಜಾನಪದ ವೈದ್ಯಪದ್ಧತಿಯನ್ನು ನಿರ್ಲಕ್ಷಿಸುವಂತಿಲ್ಲ. ಪರ್ಯಾಯ ಶಿಕ್ಷಣ ಪದ್ಧತಿ ರೂಢಿಸಿಕೊಳ್ಳುವಾಗ ಈ ಎಲ್ಲ ಸಂಗತಿಗಳನ್ನು ಗಮನಿಸಬೇಕಾಗುತ್ತದೆ.

ಹೆಣ್ಣು-ಗಂಡಿನ ನಡುವಿರುವ ಅಸಮಾನತೆ – ಅದು ಪ್ರಕೃತಿ ಸಹಜವಾದುದೆಂದು ಯಜಮಾನ ಸಂಸ್ಕೃತಿ ಬಿಂಬಿಸುತ್ತ ಬಂದಿದೆ. ಇದನ್ನು ಒಪ್ಪಿಕೊಂಡ ಸಮಾಜ ವ್ಯವಸ್ಥೆ ಹೆಣ್ಣನ್ನು ಅಬಲೆ-ದುರ್ಬಲಳು-ಸದಾ ಇನ್ನೊಬ್ಬರ ರಕ್ಷಣೆಯಲ್ಲಿರುವವಳೆಂದು ಹೇಳುತ್ತ ಬಂದಿದೆ. ಇಂತಹ ಅಸತ್ಯ ಸಂಗತಿಗಳನ್ನು ವಿರೋಧಿಸುವುದರ ಮೂಲಕ ಪರ್ಯಾಯ ಶಿಕ್ಷಣ ತನ್ನ ತಾತ್ವಿಕ ನೆಲೆಗಳನ್ನು ರೂಢಿಸಿಕೊಳ್ಳಬೇಕು. ಶಿಕ್ಷಣ ಕಲಿಯುವ ಇಬ್ಬರು ಮಕ್ಕಳಲ್ಲಿ ಹೆಣ್ಣು-ಗಂಡು ಎಂಬ ವ್ಯತ್ಯಾಸವನ್ನು ದೊಡ್ಡದಾಗಿ ಬೆಳೆಸುವುದು ಅಪಾಯಕಾರಿಯಾದುದಾಗಿದೆ. ಪ್ರಕೃತಿಯಲ್ಲಿ ಎಲ್ಲರೂ ಸಮಾನರು. ಹೀಗೆ ಸಮಾನತೆಯಿಂದ ಬೆಳೆಯುವ ಪರಿಸರವನ್ನು ನಮ್ಮ ಶಿಕ್ಷಣ ಪದ್ಧತಿ ನಿರ್ಮಿಸಬೇಕು. ಗಂಡು ಮಕ್ಕಳನ್ನು ಸ್ವೇಚ್ಛೆಯಿಂದ ಬೆಳೆಸುವುದು, ಹೆಣ್ಣುಮಕ್ಕಳನ್ನು ಭಯದ ನೆರಳಲ್ಲಿ ತಳ್ಳುವುದು ತಪ್ಪಬೇಕು. ವಿದ್ಯಾವಂತ ತಂದೆ-ತಾಯಿಗಳಲ್ಲಿ ಎಷ್ಟೋ ಜನ ತಮ್ಮ ಗಂಡುಮಕ್ಕಳಿಗೆ ವೈದ್ಯಕೀಯ- ಸ್ನಾತಕೋತ್ತರ ವೈದ್ಯಕೀಯ ಶಿಕ್ಷಣ ಕೊಡಿಸಿದಂತೆ, ತಮ್ಮ ಹೆಣ್ಣುಮಕ್ಕಳಿಗೆ ಕೊಡಿಸುವುದಿಲ್ಲ. ಅವಳು ಕೊಟ್ಟ ಮನೆಗೆ ಹೋಗುವವಳೆಂಬ ಭಾವನೆ ಅವರದು.

ಹೀಗೆ ಹೆಣ್ಣು-ಗಂಡು ಪ್ರಕೃತಿ ಸಹಜವಾಗಿ ಅಸಮಾನರೆಂದು ನೋಡುವುದು ಎಷ್ಟು ಅಪಾಯಕಾರಿಯೋ, ಅವರಿಬ್ಬರನ್ನು ಅಸಮಾನತೆಯಿಂದ ಬೆಳೆಸುವುದು ಕೂಡಾ ಅಷ್ಟೇ ಅಪಾಯಕಾರಿಯಾಗಿದೆ. ಶೀಲ-ಪಾತಿವ್ರತ್ಯ-ಸತೀತ್ವದಂತಹ ದೊಡ್ಡ ದೊಡ್ಡ ಸುಳ್ಳುಗಳನ್ನು ಅಮಾಯಕ ಹೆಣ್ಣುಗಳ ಮೇಲೆ ಹೇರಿ, ಅವರು ಸದಾ ಅಂತಹ ಭ್ರಮೆಗಳಲ್ಲಿಯೇ ಮುಳುಗುವಂತೆ ಮಾಡುವ ಪುರುಷ ಪ್ರಧಾನವ್ಯವಸ್ಥೆಯನ್ನು ಭೇದಿಸದ ಹೊರತು ಮಹಿಳೆ ಸಬಲಳಾಗಲಾರಳು. ಸ್ವತಂತ್ರವಾಗಿ ವಿಚಾರ ಮಾಡದ ಹೊರತು ಆಕೆ ಬೆಳೆಯಲಾರಳು. ನಮ್ಮ ಪರ್ಯಾಯ ಶಿಕ್ಷಣ ಇಂತಹ ಬೆಳವಣಿಗೆಯ ಕಡೆಗೆ ಚಿಂತಿಸಬೇಕು.

ಪ್ರತಿ ವ್ಯಕ್ತಿ ಅಥವಾ ಪ್ರತಿ ಜೀವಿಯಲ್ಲಿಯೂ ಹೆಣ್ಣು ಮತ್ತು ಗಂಡು ಗುಣಗಳಿವೆ. ಧೈರ್ಯ-ಪರಾಕ್ರಮ-ಆಕ್ರಮಣನೀತಿ ಗಂಡಿನದೆಂದು, ಸಂಯಮ-ಶೀಲ-ತ್ಯಾಗ-ಸಹನೆ ಹೆಣ್ಣಿನದೆಂದು ಬಿಂಬಿಸಲಾಗಿದೆ. ಇಂತಹ ಭ್ರಮೆಗಳನ್ನು ಮುರಿಯುವುದರ ಮೂಲಕ ಪರ್ಯಾಯ ಶಿಕ್ಷಣ ಬೆಳೆದು ನಿಲ್ಲಬೇಕು.

ಶಿವಸಂಸ್ಕೃತಿಯಲ್ಲಿ ಮೂಡಿ ನಿಂತಿರುವ ಅರ್ಧನಾರೀಶ್ವರ ಪರಿಕಲ್ಪನೆ ಹೆಚ್ಚು ವೈಜ್ಞಾನಿಕವಾದುದಾಗಿದೆ. ಅರ್ಧನಾರೀಶ್ವರನಾದ ಶಿವ ಅರ್ಧ ಹೆಣ್ಣು-ಅರ್ಧ ಗಂಡು ಆಗಿದ್ದಾನೆ. ಈ ಪರಿಕಲ್ಪನೆ ಪರ್ಯಾಯ ಸಂಸ್ಕೃತಿ ನಿರೂಪಿಸುವವರಿಗೆ ಮಾದರಿಯಾಗಿದೆ. ಲಿಂಗಭೇದ ನೀತಿಯನ್ನಳಿಸಿ ಸಮಾನತೆಯ ತತ್ವವನ್ನು ಹೇಳುವ ಇಂತಹ ಪರಿಕಲ್ಪನೆಗಳು ಪುರಾಣದಲ್ಲಿರಲಿ -ಇತಿಹಾಸದಲ್ಲಿರಲಿ ಅದನ್ನು ಗುರುತಿಸುವ, ಆ ಮೂಲಕ ಹೊಸ ತಾತ್ವಿಕತೆಯನ್ನು ಕಟ್ಟಿಕೊಳ್ಳುವ ಕಾರ್ಯ ಹೊಸ ಶಿಕ್ಷಣ ಪದ್ಧತಿಯ ಮೂಲಕ ನಡೆಯಬೇಕು.

ಅರ್ಧನಾರೀಶ್ವರ ಪರಿಕಲ್ಪನೆಗಿಂತ ಮುಂದೆ ಹೋದ ಹನ್ನೆರಡನೇ ಶತಮಾನದ ಶಿವಶರಣರು ''ಶರಣಸತಿ-ಲಿಂಗಪತಿ'' ಎಂದು ಹೇಳಿದರು. ಈ ನುಡಿಯ ಅರ್ಥ ವ್ಯಾಪ್ತಿ ಬಹುದೊಡ್ಡದು. ಶರಣಸತಿಯೆಂದರೆ, ಸತಿಯಾದಾಗಲೇ ಶರಣನಾಗಲು ಸಾಧ್ಯವೆಂದರ್ಥ. ಯಾವುದೇ ವ್ಯಕ್ತಿ ಶರಣನಾಗಬೇಕಾದರೆ ಮೊದಲು ಸತಿಯಾಗಬೇಕು. ಅಂದರೆ ಹೆಣ್ಣಾಗಬೇಕು. ತಾಯಿಯ ಅಂತಃಕರಣ ಹೊಂದಿರಬೇಕು. ಆಗ ಮಾತ್ರ ಶರಣತ್ವ ಲಭಿಸುತ್ತದೆ. ವಿಭೂತಿ-ರುದ್ರಾಕ್ಷಿ ಧರಿಸಿದಾಕ್ಷಣ ಶರಣನಾಗುವುದಿಲ್ಲ; ತಾಯಿಯ ಅಂತಃಕರಣ ಹೊಂದಿದವರು ಮಾತ್ರ ಶರಣರಾಗಲು ಸಾಧ್ಯವೆಂದು ವಚನಕಾರರು ಸ್ಪಷ್ಟಪಡಿಸಿದರು. ಹೀಗೆ ಸತಿಯಾಗಿ-ತಾಯಿಯಾಗಿ-ಅಂತಃಕರಣವುಳ್ಳವರಾಗಿ ಶರಣರಾದವರು ಶಿವನಿಗಿಂತಲೂ ದೊಡ್ಡವರು ಎಂದು ಅವರು ಹೇಳಿದರು. ''ಶಿವನಿಗಿಂತ ಶಿವಶರಣನಧಿಕ'' ಎಂಬ ಮಾತೂ ಕೂಡ ಮಾತೃಪ್ರಧಾನ ಸಂಸ್ಕೃತಿಯ ಮಹತ್ವವನ್ನೇ ಹೇಳುತ್ತದೆ. ಹೀಗೆ ಪರ್ಯಾಯ ಶಿಕ್ಷಣ ಹಾಗೂ ಪರ್ಯಾಯ ಸಂಸ್ಕೃತಿಯ ಮೂಲಕವೇ ಮಹಿಳಾ ಸಬಲೀಕರಣ ಸಾಧ್ಯವಿದೆ.

**ಡಾ|| ಬಸವರಾಜ ಸಬರದ**

ನಿರ್ದೇಶಕರು, ಪ್ರಸಾರಾಂಗ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ - ೫೮೫ ೧೦೬

---

*೪೮ನೇ ಪುಟದಿಂದ*

**ರೈತ ಮಹಿಳೆ :** ದಾಸಯ್ಯ ಅಂದ್ರೆ, ದಾಸಯ್ಯನೆ ಅಂತಲ್ಲ - ಅವನಂತೋನು ಇನ್ನೊಬ್ಬ...

**ಯಂತ್ರ ಚಾಲಕ :** ಏನೇನೋ ಚಿತ್ರ ಬಿಡಿಸ್ತಾ, ನಮ್ಮ ಯುವಜನತೆಯನ್ನ ಹಾದಿ ತಪ್ಪಿಸ್ತಾ ಇದ್ದಾನೆ...

**ಅಧಿಕಾರಿ :** ಅವನಿಂದ, ನಮ್ಮ ಸರ್ವನಾಶ ಆಗ್ತಾ ಇದೆ...

**ಜಜ್ :** ನಾವು ತಕ್ಷಣ ಎಚ್ಚೆತ್ತುಕೊಳ್ಳಬೇಕಾಗಿದೆ.

**ರಾಜಕಾರಣಿ :** ಜನರು ಹಾಡು, ಸಂಗೀತ, ಕಲೆ ಮಣ್ಣು-ಮಸಿ ಅಂತ ಕೆಲಸವನ್ನೇ ಮರೆತುಬಿಟ್ಟಿದ್ದಾರೆ...

**ಜಜ್ :** ಇದಕ್ಕೆ ಪರಿಹಾರ ಒಂದೆ –

**ಯಂತ್ರ ಚಾಲಕ :** ಆ ಬಣಗಾರ ಹುಡುಗನನ್ನ, ಕತ್ತುಹಿಡಿದು ಹೊರಗೆ ಹಾಕೋದು.

**ರೈತ ಮಹಿಳೆ :** ಅಷ್ಟೇ ಯಾಕೆ, ಗಲ್ಲಿಗೇ ಏರಿಸೋಣ...

**ಅಧಿಕಾರಿ :** ಬೇಡ ಅವನಿಗೆ ನಮ್ಮ ಊರಿಂದ ಅರ್ಧಚಂದ್ರ ಪ್ರಯೋಗ ಮಾಡೋಣ.

**ಜಜ್ :** ಅವನನ್ನ ಕರ್ಕೊಂಡು ಬನ್ನಿ.

(ಇಬ್ಬರು ಸೇವಕರು ಅವನನ್ನು ಎಳೆದು ತರುತ್ತಾರೆ.)

**ರಾಜಕಾರಣಿ :** ನೋಡಪ್ಪಾ, ಬಣಗಾರ, ನಾವು ನಿನ್ನನ್ನು ಸುಲಭವಾಗಿ ಗಲ್ಲಿಗೆ ಹಾಕಬಹುದಿತ್ತು...

**ಜಜ್ :** ಆದರೆ, ನಾವು, ನಿನ್ನ ಮೇಲೆ ಕರುಣೆ ತೋರಿಸಿ, ಊರಿಂದ ಹೊರಗೆ ಹಾಕ್ತಾ ಇದ್ದೇವೆ.

**ರೈತ ಮಹಿಳೆ :** ಇನ್ನೊಮ್ಮೆ, ಈ ಕಡೆ ಬಂದರೆ ಸಾಯ್ತೀಯ ಅಷ್ಟೆ.

**ಜಜ್ :** ನಿನ್ನ ಮೇಲಿನ ಆರೋಪ ನಿನಗೆ ಗೊತ್ತೇ ಇದೆಯಲ್ಲ - ಇದು ಕಾಯಕದ ಕೈಲಾಸ; ಇಲ್ಲಿ ಕೇವಲ ಕಾಯಕ ಮಾಡೋರಿಗೆ ಮಾತ್ರ ಸ್ಥಾನ... ನಿನ್ನಂಥ ಬಣ್ಣಾ ಬಳಿಯೋರಿಗೆ ಇಲ್ಲಿ ಖಂಡಿತಾ ಸ್ಥಾನ ಇಲ್ಲ.

**ರಾಜಕಾರಣಿ :** ಇವತ್ತು ಬಣ್ಣಾ ಬಳೀತೀಯ, ನಾಳೆ - ಹಾಡು ಹಾಡ್ತೀಯ...

**ರೈತ ಮಹಿಳೆ :** ನಾಡಿದ್ದು, ಗೆಜ್ಜೆ ಕಟ್ಟಿಕೊಂಡು ಥಕ್ಕ - ತೈಯ್ಯ ಕುಣೀತೀಯ... ನೀನು ಕುಣೀಯೋದೂ ಅಲ್ಲದೆ, ನಮ್ಮ ಹುಡುಗರನ್ನೂ ಕುಣಿಸ್ತೀಯಾ...

**ಜಜ್ :** ಅದಕ್ಕೆ, ನಾವೆಲ್ಲಾ ಪಂಚರೂ, ಒಮ್ಮತದಿಂದ ಒಂದು ನಿರ್ಧಾರಕ್ಕೆ ಬಂದು, ನಿನ್ನನ್ನ –

**ರಾಜಕಾರಣಿ :** ಈ ಕ್ಷಣದಿಂದಲೇ ನಮ್ಮ ಊರಿಂದ, ಅಂದರೆ, ಕಾಯಕದ ಕೈಲಾಸದಿಂದ

**ಅಧಿಕಾರಿ :** ಹೊರಗೆ ಹಾಕ್ತಾ ಇದ್ದೇವೆ...

**ಜಜ್ :** ಹುಂ! ಇವನನ್ನು ಊರಿಂದ ಆಚೆ, ಆದಷ್ಟು ದೂರದಲ್ಲಿ ಬಿಟ್ಟು ಬನ್ನಿ...

**ರೈತ ಮಹಿಳೆ :** ಮತ್ತೆ ಈ ಕಡೆ ಮುಖ ಹಾಕಬಾರದು....

(ಸೇವಕರು ಅವನನ್ನು ಎಳೆದೊಯ್ಯುತ್ತಾರೆ; ಆತ ವಿರೋಧಿಸದೆ ಹೊರಡುತ್ತಾನೆ... ಇದ್ದಕ್ಕಿದ್ದ ಹಾಗೆ, ಹುಡುಗಿ-೩, ಬಣ್ಣದ ಕೊಡವನ್ನು ಹೊತ್ತು ಓಡುತ್ತಾ ಬರುತ್ತಾಳೆ)

**ಹುಡುಗಿ-೩ :** ಬಣಗಾರ... ಬಣಗಾರ... ನಿಲ್ಲು... ನಾನೂ ಬರ್ತೀನಿ...

(ಆಕೆ ಬಣಗಾರ ಹುಡುಗನ ಹಿಂದೆ ಹೊರಟಿದ್ದಾಳೆ; ಜೊತೆಗೆ, ಅವಳ ಗೆಳತಿಯರೂ ಕೂಡ ಹೊರಟಿದ್ದಾರೆ. ಜನರಲ್ಲಿ ಗೊಂದಲವಿದೆ; ಕೆಲವರು ಹುಡುಗಿಯನ್ನು ಅನುಸರಿಸಿ ಹೊರಡುತ್ತಾರೆ - ಕ್ರಮೇಣ ಎಲ್ಲರೂ, ಬಣಗಾರ ಹೋದ ದಿಕ್ಕಿನಲ್ಲೇ ಹೋಗುತ್ತಾರೆ...

ಈಗ ಪಂಚರು ಕಸಿವಿಸಿಗೊಂಡಿದ್ದಾರೆ; ಅವರಲ್ಲಿ ಕೆಲವರು ಜನರನ್ನು ತಡೆಯಲು ಯತ್ನಿಸಿ ವಿಫಲರಾಗುತ್ತಾರೆ... ಪಂಚರೆಲ್ಲರೂ ಅಸಹಾಯಕರಾಗಿ ನಿಂತಿದ್ದಾರೆ... ಇದ್ದಕ್ಕಿದ್ದಂತೆ, ಏನೋ ನಿರ್ಧರಿಸಿದಂತೆ, ವಿರುದ್ಧ ದಿಕ್ಕಿನಲ್ಲಿ ಹೊರಟುಹೋಗುತ್ತಾರೆ.

ಪುನಃ ಬಣಗಾರ ಹುಡುಗ ಬರುತ್ತಾನೆ; ಈಗ ಅವನ ಮುಖದಲ್ಲಿ ಗೆಲುವಿದೆ; ಅವನ ಸುತ್ತ ಜನರಿದ್ದಾರೆ – ಎಲ್ಲರೂ ಸಂತೋಷದಿಂದ, ಹಾಡುತ್ತಾ-ಕುಣಿಯುತ್ತಾ ಮರೆಯಾಗುತ್ತಾರೆ.)

(ಮೂಲಕಥೆ : ರವೀಂದ್ರನಾಥ ಠಾಕೂರ್)

**ರೂಪಾಂತರ : ಲಕ್ಷ್ಮೀನಾರಾಯಣ ಎಚ್. ವಿ.**

ನಂ. ೮೨, 'ಅಲಕ' ತ್ಯಾಗರಾಜ ರಸ್ತೆ, ಬೆಟ್ಟಮಕ್ಕಿ ಬಡಾವಣೆ, ಸೀಬಿನಕೆರೆ ಅಂಚೆ, ತೀರ್ಥಹಳ್ಳಿ

ವಿ. ಚಂದ್ರಶೇಖರ ನಂಗಲಿ

# ಪರಿಸರ ಮತ್ತು ಜೀವಸಂಕುಲ

**ಟಿ.** ವಿ. ಇಲ್ಲದ ನನ್ನ ಬಾಲ್ಯ ಒಂದು ಪುಣ್ಯ. ಬಾಲ್ಯದಲ್ಲಿ ನನ್ನ ಓರಗೆಯ ಗೆಳೆಯರೊಂದಿಗೆ ಆಡುತ್ತಿದ್ದ ಆಟಗಳು ವೈವಿಧ್ಯಮಯವೂ ಋತುವಿಗನುಗುಣವೂ ಆಗಿದ್ದವು. ಗೋಲಿಯೊಂದರಲ್ಲೆ ಹತ್ತಕ್ಕೂ ಮೇಲ್ಪಟ್ಟ ಬಗೆ ಬಗೆಯ ಆಟಗಳಾಡುತ್ತಿದ್ದೆವು. ಇದರೊಂದಿಗೆ, ಬುಗುರಿ, ಚಿಣ್ಣಿದಾಂಡು, ಗಾಳಿಪಟ, ಲಗೋರಿ, ಕಣ್ಣಾಮುಚ್ಚಾಲೆ ಮುಂತಾದ ಆಟಗಳಿದ್ದವು. ಸಂಜೆಯ ಹೊತ್ತು ತಾಯಿ ತಂದೆಗಳು ನಾವಾಡುವ ಆಟಗಳನ್ನು ಮನೆ ಮುಂದೆ ಕುಳಿತು ನೋಡುತ್ತಾ ಆನಂದಿಸುತ್ತಿದ್ದರು. ಎರಡು ತಂಡಗಳ ಹಣಾಹಣಿಯಲ್ಲಿ ಆಡುತ್ತಿದ್ದ ಲಗೋರಿ ಆಟವಂತೂ ಸಹಜವಾಗಿಯೇ ನಗೆಯುಕ್ಕಿಸುತ್ತಿತ್ತು. ಒಂದರ ಮೇಲೊಂದರಂತೆ ಜೋಡಿಸುತ್ತಿದ್ದ ಕಲ್ಲುಗಳು ನಮ್ಮ ಆತುರ ಬುದ್ಧಿ ಮತ್ತು ಚೆಂಡೇಟು ತಪ್ಪಿಸಿಕೊಳ್ಳುವ ಎಚ್ಚರಗಳಲ್ಲಿ ಗೋಪುರವಾಗದಂತೆ ಬಿದ್ದುಹೋಗುತ್ತಿದ್ದವು. 'ಲಗೋರಿ'ಯಲ್ಲಿ ಕಲ್ಲಮೇಲೆ ಕಲ್ಲಿಡುತ್ತಿದ್ದವರತ್ತ ಗುರಿಯಿಟ್ಟು ಚೆಂಡೆಸೆದು ಮೈಗೆ ಚುರುಕು ಮುಟ್ಟಿಸುವ ಉತ್ಸಾಹ ನಮ್ಮೆಲ್ಲರಲ್ಲಿತ್ತು. ಚೆಂಡೇಟು ತಿಂದವನು ಕಲ್ಲು ಜೋಡಿಸಲಾಗದೆ, ಎದ್ದು ನಿಂತು ಮೈಯುಜ್ಜಿಕೊಳ್ಳುತ್ತಾ ಮತ್ತೊಂದು ಚೆಂಡೇಟಿಗೆ ಸಿಕ್ಕದಂತೆ ಓಡಿ ತಪ್ಪಿಸಿಕೊಳ್ಳುವುದೊಂದು ಮೋಜು. ನನ್ನ ವಯಸ್ಸಿನವರಿಗೆ ಈ ಲಗೋರಿ ಆಟದ ಬಗ್ಗೆ ಹೇಳಿದರೆ ಸಾಕು, ವಿವರಿಸುವ ಅಗತ್ಯವಿಲ್ಲ. ಆದರೆ, ಸ್ಕೂಲು, ಟ್ಯೂಷನ್ನು, ಟಿ.ವಿ. ಕಂಪ್ಯೂಟರ್‌ಗಳಲ್ಲಿ ಕಳೆದುಹೋಗುತ್ತಿರುವ ಇಂದಿನ ಪೀಳಿಗೆಯವರಿಗೆ 'ಲಗೋರಿ' ಆಟದ ಬಗ್ಗೆ ಕೊಂಚ ವಿವರಣೆ ನೀಡಬೇಕಷ್ಟೆ. ಇದು ಮಕ್ಕಳಾಡುವ ಲಗೋರಿಯಾದರೆ, ನಿಸರ್ಗವೇ ಆಡಿಕೊಳ್ಳುವ ಲಗೋರಿಯೂ ಉಂಟು. 'ಪರಿಸರ ಮತ್ತು ಜೀವಸಂಕುಲ' – ಎಂಬ ವಿಷಯಕ್ಕನುಗುಣವಾಗಿ ನಿಸರ್ಗವೇ ಒಂದರ ಮೇಲೊಂದರಂತೆ ಇಟ್ಟು ಆಡಿಕೊಳ್ಳುತ್ತಿರುವ ಜೈವಿಕ ಬಿಲ್ಲೆಗಳ ಲಗೋರಿಯನ್ನು ಇಲ್ಲಿ ಗ್ರಹಿಸಬೇಕು.

ಭೂಮಿಯನ್ನು ವಿವರಿಸುವಾಗ ವಿಜ್ಞಾನಿಗಳು Earth is a planet ಎಂದು ಆರಂಭಿಸುತ್ತಾರೆ. ವಿಸ್ತರಿಸಿಕೊಳ್ಳುತ್ತಿರುವ ವಿಶ್ವ , ಅಗಣಿತ ನಕ್ಷತ್ರಗಳು, ಸೌರವ್ಯೂಹ ಮುಂತಾದವನ್ನು ಪರಿಚಯಿಸಿ ಭೂಮಿ ಒಂದು ಗ್ರಹವೆಂಬುದನ್ನು ಮನದಟ್ಟು ಮಾಡಿಕೊಡುತ್ತಾರೆ. ಉದ್ಯಮಿಗಳ ಪಾಲಿಗೆ ಭೂಮಿಯೆಂದರೆ ಸಕಲ ಸಂಪನ್ಮೂಲಗಳ ಆಗರ. ಭೂಮಿಯ ಮೇಲ್ಮೈ ಮತ್ತು ಒಳಮೈಗಳನ್ನು ದುರಾಸೆಯಿಂದ ದೋಚಿಕೊಳ್ಳುತ್ತಿರುವ ಉದ್ಯಮಪತಿಗಳಿಗೆ ಕೊನೆಯೇ ಇಲ್ಲವಾಗಿದೆ. ಭೂಮಿಯನ್ನು 'ಗ್ರಹ'ವೆಂದು ಪರಿಗಣಿಸುವ ವಿಜ್ಞಾನಿಗಿಂತಲೂ, 'ಸಕಲ ಸಂಪನ್ಮೂಲಗಳ ಆಗರ'ವೆಂದು ತಿಳಿಯುವ ಉದ್ಯಮಪತಿಗಿಂತಲೂ, ಭೂಮಿಯನ್ನು 'ಭೂಮಿತಾಯಿ' ಎಂದು ಆರಾಧಿಸುವ ಜನಪದರು ನನಗೆ ಬಹುಮುಖ್ಯವೆನಿಸುತ್ತಾರೆ :

*ಬೆಳಗಾಗ ನಾನೆದ್ದು ಯಾರ್‍ಯಾರ ನೆನೆಯಾಲಿ*
*ಎಳ್ಳುಜೀರಿಗೆ ಬೆಳೆಯೋಳ ಬೂಮ್ತಾಯ*
*ಎದ್ದೊಂದು ಗಳಿಗೆ ನೆನೆದೇನ.*

'ಭೂಮಿತಾಯಿ' ಎಂದು ಗ್ರಹಿಸುವ ಜನಪದರ ಧೀಮಂತಿಕೆ ಗಮನಾರ್ಹ! ಪಂಪನಿಂದ ಆರಂಭಿಸಿ ಇಲ್ಲಿಯವರೆಗೆ ಕಾವ್ಯಾರಂಭದಲ್ಲಿ ಯಾವೊಬ್ಬ ಕವಿಯೂ 'ಭೂಮಿತಾಯಿ'ಯ ಪ್ರಾರ್ಥನೆ ಮಾಡಿಲ್ಲ. ಶ್ರಮಸಂಸ್ಕೃತಿಯ ನಾಂದಿ ಪದ್ಯದಂತೆ ತೋರುವ ಮೇಲಿನ ತ್ರಿಪದಿಯನ್ನು ಅಲಿಖಿತ ಶಾಸನವೆಂದು ತಿಳಿದು ನಿಃಶಬ್ದ ಧ್ಯಾನದಲ್ಲಿ ಮನನ ಮಾಡಬೇಕಾಗುತ್ತದೆ. 'ಭೂಮಿ' ಮನುಕುಲದ ತಾಯಿ ಮಾತ್ರವಲ್ಲ, ಸಕಲ ಜೀವಸಂಕುಲಗಳ ತಾಯಿ ಎಂಬುದನ್ನು ಮರೆಯಬಾರದು. ಇಂಥ ಭೂಮಿ ಒಂದು ಕಾಲದಲ್ಲಿ ಧಗಧಗಿಸುತ್ತಾ ಉರಿಯುತ್ತಿರುವ ಬೆಂಕಿಯುಂಡೆಯಾಗಿತ್ತು. ಈ ಬೆಂಕಿಯುಂಡೆ ಆರುತ್ತಾ, ತಣ್ಣಗಾಗುತ್ತಾ ವಾತಾವರಣ ರೂಪುಗೊಂಡಿತು. ಕಾಲಕ್ರಮೇಣ ವಾತಾವರಣದಲ್ಲಿ ಅನಿಲ ವಿಪ್ಲವಗಳು, ಜಲಪ್ರಳಯಗಳು ಸಂಭವಿಸಿ ಪಂಚಭೂತಗಳೂ ಮತ್ತು ಜೈವಿಕ ಜಗತ್ತೂ ಕಾಣಿಸಿಕೊಂಡವು. ಲಗೋರಿ ಆಟದಲ್ಲಿಡುವ ಮೊದಲನೇ ಕಲ್ಲಿನಂತೆ, ಈ ನಮ್ಮ ಭೂಮಿಯ ಮೇಲೆ ನಿಸರ್ಗವಿಟ್ಟ ಮೊದಲನೇ ಜೈವಿಕ ಬಿಲ್ಲೆಯೆಂದರೆ, ಸಸ್ಯಪರಿಸರ. ಇದರ ಮೇಲೆ ಒಂದೊಂದಾಗಿ ಕಾಣಿಸಿಕೊಂಡ ಜೀವರಾಶಿಗಳೇ ನಿಸರ್ಗನಿರ್ಮಿತ ಲಗೋರಿಯ ಎರಡು, ಮೂರು, ನಾಲ್ಕು, ಐದು ಮುಂತಾದ ಜೈವಿಕ ಬಿಲ್ಲೆಗಳಾಗಿವೆ. ಇವುಗಳಲ್ಲಿ ಎಷ್ಟೋ ಕಲ್ಲುಗಳು ತಾವಾಗೆ ಬಿದ್ದುಹೋಗಿವೆ. ಉದಾಹರಣೆಗೆ, ಬೃಹತ್ ಸರೀಸೃಪಗಳು ಲಗೋರಿಯ ಗೋಪುರದಲ್ಲಿ ಸುಸ್ಥಿರವಾಗಿ ನಿಲ್ಲಲೇ ಇಲ್ಲ. ಸಸ್ಯ ಪರಿಸರದ ನಂತರ ಕಾಣಿಸಿಕೊಂಡ ಸಕಲ ಜೀವರಾಶಿಗಳನ್ನು (=ಕ್ರಿಮಿಕೀಟಗಳು, ಪಕ್ಷಿ-ಪ್ರಾಣಿಗಳು ಮುಂತಾದವುಗಳನ್ನು) ತಿರ್ಯಕ್ ಪರಿಸರವೆಂದು ಕರೆಯಬಹುದು. ತಿರ್ಯಕ್ ಜೀವಿಗಳು ಎಂದರೆ ತಿರೋಗಾಮಿಗಳು ಎಂದರ್ಥ. ಎದೆಯನ್ನು ಅಥವಾ ಬೆನ್ನುಮೂಳೆಯನ್ನು 'ತಿರೆ'ಗೆ ತಾಕಿಸಿಕೊಂಡು ಅಥವಾ ತೋರಿಸಿಕೊಂಡು ಚಲಿಸುವ ಸಕಲಜೀವಿಗಳೂ ತಿರೋಗಾಮಿಗಳು/ತಿರ್ಯಕ್ ಜೀವಿಗಳು ಎಂದು ತಿಳಿಯಬೇಕು. 'ಮನುಷ್ಯ ಪ್ರಾಣಿ' ಕೂಡ ಮೊದಲು 'ತಿರ್ಯಕ್' ಆಗಿದ್ದನೋ ಏನೋ ತಿಳಿಯದು ! ಇದನ್ನೇ ಜೀವ ವಿಜ್ಞಾನದಲ್ಲಿ 'ಹೋಮೊ ಎರೆಕ್ಟಸ್' ಎಂದು ಕರೆದು ಸ್ಥಿತ್ಯಂತರವನ್ನು ಸೂಚಿಸಲಾಗಿದೆ. ಮನುಷ್ಯನ ವೈಜ್ಞಾನಿಕ ಹೆಸರು 'ಹೋಮೊ ಸೆಪಿಯನ್' ಎಂದು ಗುರುತಿಸಲಾಗಿದೆ. ನಿಸರ್ಗನಿರ್ಮಿತ ಲಗೋರಿಯ ತುತ್ತತುದಿಯ ಅಥವಾ ಕೊನೆಯ

ಜೈವಿಕ ಬಿಲ್ಲೆಯೇ ಮನುಷ್ಯ ಪರಿಸರ. ಈ ಕೊನೆಯದಾದ ಮನುಷ್ಯ ಪರಿಸರವೆಂಬ ಜೈವಿಕ ಬಿಲ್ಲೆಯನ್ನು ಇಟ್ಟೊಡನೆ ಸುಸ್ಥಿರ ಲಗೋರಿ ಅಲುಗಾಡಿತು; ಜೀವಸಂಕುಲಗಳ ಗೋಪುರಕ್ಕೆ ಕಂಪನವಾಯಿತು. ಈ ಅಲುಗಾಟ ಅಥವಾ ಕಂಪನ ಹದಗೆಟ್ಟರೆ ಜೀವಸಂಕುಲಗಳ ಇಡೀ ಲಗೋರಿಯೆ ಕುಸಿದು ಬೀಳುತ್ತದೆ. ಜೀವಿ-ಜೀವಿಗಳೊಳಗಣ ಸಹ ಸಂಬಂಧವನ್ನು ಕಾಳಿದಾಸ ಮಹಾಕವಿಯು 'ಸೋದರ ಸ್ನೇಹ'ವೆಂದು ಕರೆದಿದ್ದಾನೆ. ಕುವೆಂಪು ಅವರು 'ಅಂದದ ಒಪ್ಪಂದ'ವೆಂದಿದ್ದಾರೆ. ಬೇಂದ್ರೆಯವರು 'ಅಭೇದದ ಕಟ್ಟಡ' ಎಂದು ಹೇಳಿದ್ದಾರೆ. ಶಿವರಾಮ ಕಾರಂತರು 'ನೆಯ್ದ ಅರಿವೆ'ಗೆ ಹೋಲಿಸಿದ್ದಾರೆ. ''ಪೃಥ್ವೀ ಬೀಜಂ ತಥಾ ಮಾಂಸಂ''... ಎಂಬಂತೆ ಈ ಭೂಮಿಯ ಮೇಲಿರುವ ಸಕಲ ಜೀವಸಂಕುಲಗಳ ಐಕ್ಯ ಸ್ಥಲವನ್ನು ಲಕ್ಷಿಸಿ, ಬಸವಣ್ಣನವರು 'ಕೂಡಲಸಂಗಮ' ಎಂದು ಹೇಳಿರಬಹುದು. ಪರಿಸರ ವಿಜ್ಞಾನದಲ್ಲಿ ಇದನ್ನೆ 'ಗ್ರೀನ್ ಪಿರಮಿಡ್' ಅಥವಾ 'ಇಕಾಲಜಿಕಲ್ ಪಿರಮಿಡ್' ಎಂದು ಕರೆದಿದ್ದಾರೆ.

ನಿಸರ್ಗನಿರ್ಮಿತ ಲಗೋರಿಯ ಮೊದಲನೇ ಜೈವಿಕಬಿಲ್ಲೆಯಾಗಿರುವ 'ಸಸ್ಯಪರಿಸರ' ಮತ್ತು ನಂತರದ ಜೈವಿಕ ಬಿಲ್ಲೆಗಳಾದ 'ತಿರ್ಯಕ್ ಪರಿಸರ'ಗಳ ಸಂಬಂಧವನ್ನು 'ಅಶೋಕ'ವೆಂದು ಕರೆಯಬಹುದು. ಈ ಅಶೋಕ ಸಂಬಂಧವು ಆದಿಕವಿ ವಾಲ್ಮೀಕಿಯಿಂದ ರಾಮಾಯಣದ ಆರಂಭದಲ್ಲೆ ವರ್ಣಿಸಲ್ಪಟ್ಟಿದೆ. ಸಸ್ಯಪರಿಸರದ ಪ್ರತೀಕವಾಗಿರುವ ಮರದ ಕೊಂಬೆಯ ಮೇಲೆ ಹೂಗಳಂತೆ ಕುಳಿತಿದ್ದ ತಿರ್ಯಕ್ ಪರಿಸರದ ಪ್ರತೀಕವಾಗಿದ್ದ ಕ್ರೌಂಚ ಮಿಥುನಕ್ಕೆ ಬಾಣ ಪ್ರಯೋಗವಾಗುತ್ತದೆ. ಸಸ್ಯಪರಿಸರ ಮತ್ತು ತಿರ್ಯಕ್ ಪರಿಸರಗಳ 'ಅಶೋಕ'ವನ್ನು 'ಶೋಕ' ಮಾಡಿದ್ದರಿಂದಲೇ ವಾಲ್ಮೀಕಿಯ ಎದೆಯಾಳದಿಂದ 'ಶ್ಲೋಕ'ವು ಮೂಡಿಬಂದಿತು. ಮನುಷ್ಯನೆಂಬ ಬೇಡನ ಬಾಣ ಪ್ರಯೋಗವನ್ನೇ ಜೀವ ವಿಜ್ಞಾನದಲ್ಲಿ 'ಮಧ್ಯಪ್ರವೇಶ' intervention ಎಂದು ಕರೆದಿದ್ದಾರೆ. ಮನುಷ್ಯನ ಆಗಮನವೆಂದರೆ ಸೃಷ್ಟಿ ರಚನೆಯ ಲಗೋರಿಯ ಮೇಲಿಟ್ಟ ತುತ್ತತುದಿಯ ಕಲ್ಲು, ಅಲುಗಾಟ, ಕಂಪನ! ಇದನ್ನು ಮಾರ್ಮಿಕವಾಗಿ ಹೇಳುತ್ತಿರುವ ವಾಲ್ಮೀಕಿಯ 'ಮಾ ನಿಷಾದ' ಪ್ರಸಂಗವು ಮನುಕುಲಕ್ಕೆ ಮುನ್ನೆಚ್ಚರಿಕೆಯ ಮೊಳಗಾಗಿದೆ. ವಾಲ್ಮೀಕಿಯು ರಾಮನನ್ನು 'ಗಿರಿವನ ಪ್ರಿಯರಾಮ'ನೆಂದು ಕರೆದಿದ್ದಾನೆ. ಇಲ್ಲಿ ನೆನಪಿಡಬೇಕಾದ ವಿಚಾರವೆಂದರೆ, ರಾಮಾಯಣದ ಗಿರಿವನ ಪ್ರಿಯ ರಾಮ ಬೇರೆ! ರಾಮಜನ್ಮಭೂಮಿಯ ಅಯೋಧ್ಯಾ ರಾಮ ಬೇರೆ! ಗಿರಿವನ ಪ್ರಿಯ ರಾಮನ ಬಳಗವೆಂದರೆ ಗಿರಿಜನರು, ಆದಿವಾಸಿಗಳು (=ಗುಹ, ಶಬರಿ ಮುಂತಾದವರು), ಪಕ್ಷಿಸಂಕುಲ (=ಜಟಾಯು), ಕಪಿಸಂಕುಲ (=ಹನುಮಾದಿಗಳು), ಕರಡಿ ಸಂಕುಲ (=ಜಾಂಬವಂತ) ಮಾತ್ರವಲ್ಲ! ಮರಳಸೇವೆ ಸಲ್ಲಿಸುವ ಅಳಿಲು ಕೂಡ ರಾಮನ ಬಳಗಕ್ಕೆ ಸೇರಿದೆ. ಇವೆಲ್ಲ ರಾಮನ ಪಾಲಿಗೆ ಅರಣ್ಯ ಕಾಂಡಾದಿಗಳ ಸ್ನೇಹ ಸಂಪತ್ತು. ರಾಮಾಯಣದ ಆರು ಕಾಂಡಗಳಲ್ಲಿ 'ಅರಣ್ಯಕಾಂಡ' ಒಂದು. ಮಹಾಭಾರತದ ಹದಿನೆಂಟು ಪರ್ವಗಳಲ್ಲಿ 'ಅರಣ್ಯ ಪರ್ವ'ವೂ ಒಂದು. ಇಂದಿನ ಆಧುನಿಕ ಮಾನವರಿಗೆ ಅರಣ್ಯಕಾಂಡ-ಅರಣ್ಯಪರ್ವಗಳು ಇಲ್ಲವೇ ಇಲ್ಲ. ರಾಮಾದಿಗಳು ಅಯೋಧ್ಯೆಯೆಂಬ ನಗರದಲ್ಲಿ, ಪಾಂಡವರು ಹಸ್ತಿನಾವತಿ/ಇಂದ್ರಪ್ರಸ್ಥವೆಂಬ ನಗರದಲ್ಲೆ ಉಳಿದಿದ್ದರೆ ಖಂಡಿತಾ ಶಕ್ತಿಸಂಪನ್ನರಾಗುತ್ತಿರಲಿಲ್ಲ. ಅವರ ಪಾಲಿಗೆ ಅರಣ್ಯ ಕಾಂಡ, ಅರಣ್ಯಪರ್ವಗಳೆಂದರೆ, ಸಕಲ ಜೀವಸಂಕುಲಗಳೊಡನೆ ಸೋದರಸ್ನೇಹ ಮತ್ತು ಶಕ್ತಿ ಸಂಪನ್ನತೆಯ ಕಾರ್ಯಕ್ಷೇತ್ರವೆಂದೇ ಅರ್ಥ. ಈ ದೃಷ್ಟಿಯಿಂದ ನೋಡಿದರೆ, ರಾಮಾಯಣ ಮತ್ತು ಮಹಾಭಾರತಗಳು (ಆಧುನಿಕ ನಾಗರಿಕತೆಯ ಮೋಹಕ ಮಾಯಾ ವಿಲಾಸದಿಂದಾಗಿ) ಅರಣ್ಯಕಾಂಡ ಮತ್ತು ಅರಣ್ಯಪರ್ವಗಳಿಲ್ಲದೆ, ಆಂತರಿಕವಾಗಿ ಕೃಶವಾಗುತ್ತಿರುವ, ಬಾಹ್ಯದಲ್ಲಿ ಸ್ಥೂಲವಾಗುತ್ತಿರುವ ನಾಗರಿಕರಿಗೊಂದು ಗುಣಪಾಠವಾಗಿದೆ. ಅಯೋಧ್ಯೆ, ಹಸ್ತಿನಾವತಿಗಳೆಂದರೂ ಒಂದೇ! ದೆಹಲಿ, ಬೆಂಗಳೂರುಗಳೆಂದರೂ ಒಂದೇ! ನಾಮ-ಕ್ರಿಯೆ-ಕಾಲ-ದೇಶಗಳ ವ್ಯತ್ಯಾಸ ಮಾತ್ರದಿಂದ ಇವುಗಳನ್ನು ಪ್ರತ್ಯೇಕವೆಂದು ಗ್ರಹಿಸಬಾರದು.

ಆದಿವಾಸಿಗಳ ಜೀವನಕ್ರಮಕ್ಕೂ, ಆಧುನಿಕರ ಜೀವನಕ್ರಮಕ್ಕೂ ತುಂಬಾ ವ್ಯತ್ಯಾಸಗಳಿವೆ. ನಿಸರ್ಗದಿಂದ ದೂರವಾದಂತೆಲ್ಲ ಮನುಷ್ಯರಿಗೆ ಎದುರಾಗುವ ಇಕ್ಕಟ್ಟುಗಳು ಮತ್ತು ಬಿಕ್ಕಟ್ಟುಗಳ ಸ್ವರೂಪ ದರ್ಶನಕ್ಕೆ 'ನಗರೀಕರಣ'ವು ಪ್ರತ್ಯಕ್ಷ ಪ್ರಮಾಣವಾಗಿದೆ. ಇದನ್ನು ಮನಗಾಣಿಸಲು ನನ್ನ ಜೀವನಾನುಭವಗಳಿಂದ ಪಡೆದ 'ಕುಕ್ಕುಟ ಪುರಾಣ'ವನ್ನಿಲ್ಲಿ ಪ್ರಸ್ತಾಪಿಸುತ್ತೇನೆ.* (೧) ಕಾಡುಕೋಳಿ, (೨) ನಾಟಿಕೋಳಿ, (೩) ಬ್ರಾಯ್ಲರ್‌ಕೋಳಿ – ಈ ಮೂರು ಬಗೆಯ ಕೋಳಿಗಳ ಜೀವನ ಶೈಲಿಯನ್ನು ನೀವೆಲ್ಲರೂ ನಿಮ್ಮ ಮನಸ್ಸಿನಲ್ಲಿ ಧ್ಯಾನಿಸುತ್ತಾ ವಿಚಾರ ಮಾಡಿದರೆ, ಈ ಕುಕ್ಕುಟ ಪುರಾಣವು ವಾಸ್ತವವಾಗಿ ಮಾನವ ಪುರಾಣವೆಂಬುದು ಮನವರಿಕೆಯಾಗುತ್ತದೆ. ಮೂರು ಬಗೆಯ ಕೋಳಿಗಳ ಜೀವನ ಶೈಲಿಯನ್ನೇ ಹೋಲುವಂಥ 'ಮಾನವ ಜೀವನಶೈಲಿಗಳು' ಮೂರು ಬಗೆಯಾಗಿರುವುದನ್ನು ಬಲ್ಲವರಿಗೆ ಬಿಡಿಸಿಹೇಳುವ ಅಗತ್ಯವಿಲ್ಲ. ಅರಣ್ಯಾಧಾರಿತ ಜೀವನಕ್ರಮದಲ್ಲಿ ಬದುಕುತ್ತಿರುವ ಸೋಲಿಗರು, ಜೇನುಕುರುಬರು, ಮಲೆಕುಡಿಯರು, ಅಡವಿಪೂಜಾರ್ಲು, ಚೆಂಚಲು ಮುಂತಾದವರು ಕಾಡುಕೋಳಿಗಳೇ ಸರಿ! ಇವರ ಮೈಗಳಲ್ಲಿ 'ಕೊಬ್ಬು' ಕಿಂಚಿತ್ತೂ ಇರುವುದಿಲ್ಲ. ವಿದ್ಯುತ್ತಿನ ವ್ಯಾಪ್ತಿಗೊಳಪಡದ ಬೆಟ್ಟಗುಡ್ಡಗಳು, ಕಣಿವೆಕಂದರಗಳು, ಅರಣ್ಯಗಳಲ್ಲಿ ಕಾಲ್ನಡಿಗೆಯ ತಿರುಗಾಟಗಳಿಂದಲೇ ಜೀವನ ಮಾಡುತ್ತಿರುವ ಆದಿವಾಸಿಗಳು-ಗಿರಿಜನರು ''ಓ ನನ್ನ ಚೇತನ! ಆಗು ನೀ ಅನಿಕೇತನ'' ಎಂಬಂತೆ ನಿಸರ್ಗವೇ ಆಗಿರುವವರು. ಹಳ್ಳಿಗರು, ಗ್ರಾಮೀಣರು ನಾಟಿಕೋಳಿಯನ್ನು ಹೋಲುವಂಥವರು. ಮನುಷ್ಯರ ಆರೈಕೆಯಲ್ಲಿದ್ದರೂ ನಾಟಿಕೋಳಿಗಳಿಗೆ ಪಂಜರಗಳಿರುವುದಿಲ್ಲ. ಮನೆಯ ಬಳಿಯಿರುವ ಮರಗಳನ್ನೇರಿ ಇಡೀ ರಾತ್ರಿಯನ್ನು ಕಳೆಯುವ ನಾಟಿಕೋಳಿಗಳು ಹಳ್ಳಿಗರಿಗೆ ಗೊತ್ತಿರುವಂಥವು. ಕಾಡುಕೋಳಿಗಳಂತೆ ಗಗನಗಾಮಿಗಳಲ್ಲದಿದ್ದರೂ ತನ್ನ ಮರಿಗಳನ್ನು ರಕ್ಷಿಸಿಕೊಳ್ಳುವ ಸಂದರ್ಭಗಳಲ್ಲಿ ಹದ್ದುಗಳನ್ನು ಅಟ್ಟಿಸಿಕೊಂಡು ಮನೆಯ ಮಾಳಿಗೆಯವರೆಗೂ ಹಾರಿಬಿಡುವ ತಾಯಿಕೋಳಿಗಳನ್ನು ನಾನು ಪ್ರತ್ಯಕ್ಷ ಕಂಡಿದ್ದೇನೆ. ಪ್ರತಿನಿತ್ಯ ತನ್ನ ಕೊರಳನ್ನೆ ಕಹಳೆ ಮಾಡಿಕೊಂಡು ಸುಪ್ರಭಾತವನ್ನು ಸ್ವಾಗತಿಸುವ ಹುಂಜದ ಗಟ್ಟಿದನಿ ಮರೆಯಲಾದೀತೆ? ಇಂಥ ನಾಟಿಕೋಳಿಗಳು ಅಥವಾ ಹಳ್ಳಿಗರು ನಿಸರ್ಗ ಸನ್ನಿಧಿಯಲ್ಲಿ ಇರುವಂಥವರು. ಆದರೆ ಪಟ್ಟಣಿಗರು, ನಾಗರಿಕರು, ಸೈಬರಿಕರು ನಿಸರ್ಗವಿದೂರರಾಗಿದ್ದಾರೆ. ಪಂಜರಗಳಲ್ಲಿ ಹುಟ್ಟಿ, ಪಂಜರಗಳಲ್ಲಿ ಬೆಳೆದು, ಪಂಜರಗಳಲ್ಲೆ ಸಾಯುವ ಬ್ರಾಯ್ಲರ್ ಕೋಳಿಗಳು ನಡೆದಾಡುವ ಶಕ್ತಿಯನ್ನೇ ಕಳೆದುಕೊಂಡಿರುತ್ತವೆ. ಪಂಜರಗಳಲ್ಲಿ ಇದ್ದು ಸಿದ್ಧ ಆಹಾರವನ್ನು ತಿನ್ನುತ್ತಾ ಬೆಳೆಯುವ ಬ್ರಾಯ್ಲರ್ ಕೋಳಿಗಳನ್ನು ಮೇಯಲು ಹೊರಗೆ ಬಿಟ್ಟರೆ, ಅವು ಕುಂಟುತ್ತಾ ನಡೆಯುವುದನ್ನು ನೋಡಬಹುದು. ಬಹುತೇಕ ನಗರವಾಸಿಗಳ ಸ್ಥಿತಿ ಇದನ್ನೇ ಹೋಲುತ್ತದೆ. ನಗರವಾಸಿಗಳು ನಗರಪ್ರದೇಶಗಳಲ್ಲಿ ಮಾಡುವ ವಾಕಿಂಗ್ ನನ್ನ ದೃಷ್ಟಿಯಲ್ಲಿ ಕುಂಟುನಡಿಗೆಯೇ ಸರಿ! ನಿಸರ್ಗಸಹಜ ಆಹಾರ ಮತ್ತು ಸಹಜ ಪರಿಸರಗಳಲ್ಲಿ ಬೆಳೆಯದ ಬ್ರಾಯ್ಲರ್ ಕೋಳಿಗಳು ವಾಯ್ಸ್‌ಲೆಸ್ ಮತ್ತು ಸೀಡ್‌ಲೆಸ್ ಎಂಬುದು ಅವುಗಳ ದುಃಸ್ಥಿತಿಯ ಸೂಚನೆಯಾಗಿದೆ. ಸ್ವಂತ ಧ್ವನಿಯಿಲ್ಲದ ಮತ್ತು ಧಾತುಪುಷ್ಟಿಯಿಲ್ಲದ ಬ್ರಾಯ್ಲರ್ ಕೋಳಿಗಳಿಗೂ ನಿಸರ್ಗವಿದೂರರಾಗಿ ನಿರ್ವೀರ್ಯಗೊಂಡಿರುವ ನಾಗರಿಕರಿಗೂ ಅದ್ವಯ ಸಂಬಂಧವಿದೆ.

ಕಾಡುಕೋಳಿ ಹೈಪೊಟೆನ್ಷಿಯಲ್, ನಾಟಿಕೊಳಿ ಲೆಸ್‌ಪೊಟೆನ್ಷಿಯಲ್, ಬ್ರಾಯ್ಲರ್ ಕೋಳಿ ಇಂಪೊಟೆಂಟ್. ಎಂಬುದನ್ನು ಮರೆಯಬಾರದು. ಬ್ರಾಯ್ಲರ್ ಕೋಳಿಗಳಲ್ಲಿ ಹೇಂಟೆಯನ್ನು ತುಳಿಯುವ ಶಕ್ತಿ ಹುಂಜಕ್ಕಿರುವುದಿಲ್ಲ; ಹೇಂಟೆಯ ಮೊಟ್ಟೆಗಳಿಗೂ ಹೂಮರಿಗಳಾಗುವ ಸತ್ವ ಇರುವುದಿಲ್ಲ. ಕೇವಲ ತಿನ್ನುವುದಕ್ಕಾಗಿಯೇ ಶೀಘ್ರಫಲದಾಯಕ ದೃಷ್ಟಿಯಿಂದ ಬೆಳೆಸಲ್ಪಡುವ ಬ್ರಾಯ್ಲರ್ ಕೋಳಿಗಳು ಏಕರೂಪಾತ್ಮಕ ಕೃಷಿಯ ಪರಿಣಾಮ ಫಲಗಳಾಗಿವೆ. ಇದನ್ನು 'ಎಂ.ಸಿ.ಡಿ. ಪರಿಣಾಮ' (=ಮಾನೋಕಲ್ಚರ್ ಡಿಕಡೆನ್ಸಿ) ಎಂದು ಕರೆಯಬಹುದು. ಆಧುನಿಕ ಜೀವನದ ಸಕಲ ಕ್ಷೇತ್ರಗಳಲ್ಲಿ ಏಕರೂಪಾತ್ಮಕ ದೃಷ್ಟಿ-ಧೋರಣೆಗಳು ದಿನೇ ದಿನೇ ವೃದ್ಧಿಯಾಗುತ್ತಲೇ ಇವೆ. ಕೃಷಿ ಕ್ಷೇತ್ರದಲ್ಲಿ ಬೀಜಗಳು-ಗೊಬ್ಬರಗಳು-ಕ್ರಿಮಿನಾಶಕಗಳು ಕಂಪನಿಗಳ ಬಿಗಿ ಹಿಡಿತದಲ್ಲಿದ್ದು ಇವೆಲ್ಲವೂ ಮಾನೋಕಲ್ಚರ್ ಆಗಿಬಿಟ್ಟಿವೆ. ಕೃಷಿ ಮಾತ್ರವಲ್ಲ! ಆಹಾರ ಸೇವನೆ, ಆರೋಗ್ಯ ರಕ್ಷಣೆ, ಧಾರ್ಮಿಕತೆ, ಕಲಾಪ್ರೇಮ, ಕ್ರೀಡಾಸಕ್ತಿ, ಉದ್ಯಮಶೀಲತೆ, ಶೈಕ್ಷಣಿಕ ನೆಲೆ, ಭಾಷಾಕಲಿಕೆ – ಹೀಗೆ ಯಾವೊಂದು ಕ್ಷೇತ್ರವನ್ನು ತೆಗೆದುಕೊಂಡರೂ 'ಮಾನೋಕಲ್ಚರ್' ಎದ್ದುಕಾಣುತ್ತದೆ; ಇದೇ ಹೆಚ್ಚು ಆಕ್ರಮಣಕಾರಿಯಾಗಿದ್ದು ಜೀವಿವೈವಿಧ್ಯತೆಯ ನೆಲೆಗಳೆಲ್ಲ ಬಲಿಪಶುಗಳಾಗುತ್ತಿವೆ.

ಕುವೆಂಪು ಸಾಹಿತ್ಯ ನನಗೆ ಇಷ್ಟವಾಗುವುದು ಈ ವೈವಿಧ್ಯತೆಯ ಕಾರಣದಿಂದಾಗಿಯೇ! ಭಾಷಾ ವೈವಿಧ್ಯತೆ-ಸಂಸ್ಕೃತಿವೈವಿಧ್ಯತೆ-ಜೀವಿವೈವಿಧ್ಯತೆ ಈ ಮೂರರಿಂದ ಸಮೃದ್ಧವಾಗಿ ಹಸುರು ಸೀರೆಯುಟ್ಟಿರುವ ಭೂಮಿತಾಯಿಯ ತೊಡೆಯಮೇಲೆ ಕುಳಿತಿರುವ ಮಗುವಿನಂತೆ ಕಾಣುತ್ತದೆ. ಈ ಬಗೆಯ ವೈವಿಧ್ಯತೆಗಳಿಲ್ಲದೆ ರಚಿಸಿರುವ ಸಾಹಿತ್ಯವು ನನ್ನ ದೃಷ್ಟಿಯಲ್ಲಿ ತಾಯೇ ಇಲ್ಲದ ತಬ್ಬಲಿ ಮಗುವಿನಂತಿದೆ. ಮಲೆನಾಡಿನ ಜೀವಿ ವೈವಿಧ್ಯತೆಯಲ್ಲಿ ತಾಯಿ-ಮಗು ಸಂಬಂಧವು ಗೋಚರವಾದರೆ, ನಗರಗಳೆಂಬ ಬೃಹತ್ ಮಾನವ ತೋಪಿನ ಏಕರೂಪಾತ್ಮಕತೆಯಲ್ಲಿ ತಬ್ಬಲಿ ಮಗುವಿನ ದುಃಸ್ಥಿತಿಯಿದೆ. ಆದಿಮಧ್ಯಾಂತಗಳಲ್ಲಿ ಮನುಷ್ಯರನ್ನೆ ವರ್ಣಿಸುವ ಕಥನಗಳೆಂದರೆ ನನಗೆ ಇಷ್ಟವಾಗುವುದಿಲ್ಲ. ಈ ಸೃಷ್ಟಿಯಲ್ಲಿ ಇರುವುದು ಮನುಷ್ಯರು ಮಾತ್ರವೆ? ನಿಸರ್ಗನಿರ್ಮಿತ ಲಗೋರಿಯ ಮೇಲಿರುವ ಮನುಷ್ಯರನ್ನು ಕುರಿತ ಸಾಹಿತ್ಯ ಇಪ್ಪತ್ತೊಂದನೇ ಶತಮಾನದ ಅಗತ್ಯವಾಗಿದೆ. ನಿಸರ್ಗ ನಿರ್ಮಿತ ಲಗೋರಿಯನ್ನು ಅಲಕ್ಷಿಸಿ, ಮಾನೋಕಲ್ಚರ್ ಹೇಗೋ

ಹಾಗೆ ಮನುಷ್ಯರನ್ನಷ್ಟೆ ಗಮನಿಸುವ ಸಾಹಿತ್ಯದಲ್ಲಿ ಒಂದು ಬಗೆಯ ಸ್ವರತಿಸಂಪ್ರೀತಿ ಅಥವಾ ನಾರ್ಸಿಸ್ಸಿಕ್ ಕಾಂಪ್ಲೆಕ್ಸ್ ಇರುತ್ತದೆ.

ಜೀವವೈವಿಧ್ಯತೆಯಿಂದ ತುಂಬಿಕೊಂಡಿರುವ ಕುವೆಂಪು ಸಾಹಿತ್ಯವು ನಿಸರ್ಗ ಸಹಜವಾದ ಜನಪದ ಜೀವನ ದರ್ಶನವನ್ನು ಎತ್ತಿಹಿಡಿಯುತ್ತದೆ. ಮನುಷ್ಯರಿಗೆ ಕುವೆಂಪು ಬಯಸುವ ಹಾರೈಕೆಯಿದು : ''ಜೀವಗಿರಿ ಶೃಂಗದಲ್ಲಿ ತುಂಗ ಗೋಪುರವಾಗಿ ಮೆರೆಯಯ್ಯ.'' ನಿಸರ್ಗ ಸನ್ನಿಧಿಯಿಂದ ಲಭಿಸುವ ತನುಮನಪಟುತೆ ಕುವೆಂಪು ಸಾಹಿತ್ಯದ ತಿರುಳಾಗಿದೆ. ಟಿ.ವಿ ಮತ್ತು ಕಂಪ್ಯೂಟರ್‌ಗಳೆಂಬ ಸ್ವವಿರಚಿತ ಜಗತ್ತಿನಲ್ಲಿ ಖೈದಿಗಳಂತೆ ಬದುಕುತ್ತಿರುವ ನಾಗರಿಕರ ದುರ್ಬಲ ದೇಹ ಮತ್ತು ದುರ್ಬಲ ಮನಸ್ಸುಗಳೇ ಭಾರತದಾದ್ಯಂತ ವಿಸ್ತರಿಸಿಕೊಳ್ಳುತ್ತಿದ್ದರೆ, ಸ್ವತಂತ್ರ ಭಾರತವು ಮತ್ತೊಮ್ಮೆ 'ಅತಂತ್ರ'ವಾಗುವುದರಲ್ಲಿ ಸಂದೇಹವಿಲ್ಲ.

ಬಹುರೂಪಾತ್ಮಕ ಹಳ್ಳಿಗಾಡುಗಳಿಗೂ ಏಕರೂಪಾತ್ಮಕ ನಗರಗಳಿಗೂ ಇರುವ ವ್ಯತ್ಯಾಸಗಳು ಪ್ರತ್ಯಕ್ಷಾನುಭವ ಉಳ್ಳವರಿಗೆ ಚೆನ್ನಾಗಿ ಗೊತ್ತಿರುತ್ತದೆ. ಇದಕ್ಕೆ ನಿದರ್ಶನವಾಗಿ 'ಕುದುರೆಮುಖದ ಎರಡು ಮುಖ'* – ಎಂಬ ನನ್ನ ಲೇಖನವನ್ನು ಉದಾಹರಿಸಲು ಇಚ್ಛಿಸುತ್ತೇನೆ. ನಾನು ಅಗನಾಗ್ ಗೆಳೆಯರೊಂದಿಗೆ 'ಕುದುರೆಮುಖ ಪೀಕ್'ಗೆ ಹೋಗಿದ್ದಾಗ 'ನಸೆಹಳ್ಳ' ಎಂಬ ವಿದ್ಯುತ್ ಇಲ್ಲದ ಗಿರಿಗ್ರಾಮದಲ್ಲಿ ಹಲವು ದಿನಗಳಿದ್ದು ಅಲ್ಲಿನ ಗಿರಿಜನರ ಬಾಳಿನ ಒಂದೆರಡು ಪುಟಗಳಲ್ಲಿ ಭಾಗಿಯಾಗಿದ್ದೇನೆ. ಮಾನವ ಮಧ್ಯ ಪ್ರವೇಶದ 'intervention' ನಡುವೆಯೂ ನಸೆಹಳ್ಳದ ನೈಸರ್ಗಿಕ ಸಿರಿಗೆ ಕೊರತೆಯಿಲ್ಲ. ಮೊಲ, ಬರ್ಕ, ಕಾಡುಹಂದಿ, ಹಾವು, ನವಿಲು ಮುಂತಾದ ವನ್ಯಜೀವಿಗಳು ನಸೆಹಳ್ಳದ ಸುತ್ತಮುತ್ತ ಸಹಜವಾಗಿರುವುದನ್ನು ಇರುಳು-ಹಗಲುಗಳಲ್ಲಿ ಪ್ರತ್ಯಕ್ಷವಾಗಿ ಕಂಡಿದ್ದೇನೆ. ಮಳೆಬಿದ್ದಾಗ ತಲೆಯೆತ್ತುವ ಜಿಗಣೆಗಳು, ತೊರೆಯಲ್ಲಿ ಹತ್ತುವ ಮೀನುಗಳು ಇವೆಲ್ಲವುಗಳನ್ನು ತನ್ನಲ್ಲಿ ಗರ್ಭೀಕರಿಸಿಕೊಂಡಿರುವ ನಸೆಹಳ್ಳವು ನನ್ನ ಕಣ್ಣಿಗೆ ನಂದನದ ತುಣುಕೊಂದು ಬಿದ್ದಿರುವಂತೆ ಕಂಡುಬಂದಿತು. ಆದರೆ, ಕುದುರೆಮುಖ ಶಿಖರವನ್ನು ಇಳಿದು ಬೆಂಗಳೂರಿಗೆ ವಾಪಸಾಗಲು ಕೆ.ಐ.ಓ.ಸಿ.ಎಲ್. ಇರುವ ಮಲ್ಲೇಶ್ವರಕ್ಕೆ ಬಂದಾಗ ಅಲ್ಲಿನ ಕಾಂಕ್ರೀಟು ಕಟ್ಟಡಗಳು, ಟಾರ್ ರಸ್ತೆಗಳು, ಸಾಲಂಕೃತ ಪಾರ್ಕುಗಳು, ಕಡಿದು ನೆಲ ಸಮಗೊಳಿಸಿರುವ ಬೋಳುಗುಡ್ಡಗಳ ಕೆಂಪು ಅವಶೇಷಗಳು, ಸಾಲಾಗಿ ಬೆಳೆಸಿರುವ ನೆಡು ತೋಪುಗಳು ಇವನ್ನೆಲ್ಲ ನೋಡುತ್ತಿದ್ದಾಗ ನನ್ನ ಮನಸ್ಸಿಗೆ ಆಪರೇಷನ್ ಥಿಯೇಟರಿನಲ್ಲಿ ಓಡಾಡಿದಂತಾಗಿ, ಉದ್ಯಮಪತಿಗಳು - ಕಂತ್ರಾಟುದಾರರು - ಕಾರ್ಮಿಕರು ಇವರೆಲ್ಲ ವೈದ್ಯಕೀಯ ಸಿಬ್ಬಂದಿಯಂತೆಯೂ ಭೂಮಿತಾಯಿಯೆ ಶಸ್ತ್ರಚಿಕಿತ್ಸೆಗೊಳಗಾಗುತ್ತಿರುವ ರೋಗಿಯಂತೆಯೂ ಭಾಸವಾಯಿತು. ಈ ಔದ್ಯೋಗಿಕ ಪುಟ್ಟ ನಗರಿಯಲ್ಲಿ (=ಕುದುರೆಮುಖ ನ್ಯಾಷನಲ್ ಪಾರ್ಕಿನ ಹಿನ್ನೆಲೆಯಿದ್ದರೂ) ನನ್ನ ಕಣ್ಣಳತೆಯಲ್ಲಿ ಯಾವೊಂದು ವನ್ಯಜೀವಿಯೂ ಕಂಡು ಬರಲಿಲ್ಲ. ಕುದುರೆಮುಖ ಪೀಕ್‌ನಲ್ಲಿದ್ದ ಜಿಗಣೆಗಳು, 'ನಸೆಹಳ್ಳ' ಎಂಬ ಹೆಸರಿಗೆ ಕಾರಣವಾದ ನಸೆಯನ್ನುಂಟು ಮಾಡುವ ಜಿಗಣೆಗಳು ಕೆ.ಐ.ಓ.ಸಿ.ಎಲ್. ಬೀಡು



ಬಿಟ್ಟಿರುವ ಮಲ್ಲೇಶ್ವರದಲ್ಲಿ ಏಕಿಲ್ಲ? ಎಂಬುದನ್ನು ಪರಿಭಾವಿಸಿದರೆ ಹಳ್ಳಿಗಾಡುಗಳು ಮತ್ತು ನಗರಗಳಿಗಿರುವ ವ್ಯತ್ಯಾಸವು ಮನದಟ್ಟಾಗುತ್ತದೆ. ನಾನೊಮ್ಮೆ ಬೆಂಗಳೂರು ಮಹಾ ನಗರದಲ್ಲಿದ್ದಾಗ ಆಕಸ್ಮಿಕವಾಗಿ ಬ್ಯಾಗಿನೊಳಗಿದ್ದ ಬ್ಲೇಡು ಬೆರಳಿಗೆ ತಾಕಿ ಕೊಯ್ದುಬಿಟ್ಟಿತು. ರಕ್ತಸ್ರಾವವನ್ನು ನಿಲ್ಲಿಸಲು ನಾನು ತಕ್ಷಣ ಸುತ್ತಮುತ್ತ ಸ್ಲೇಟುಸೊಪ್ಪಿಗಾಗಿ (=ಅಡ್ಡಿಕೆಸೊಪ್ಪು) ಹುಡುಕಾಡಿದೆ. ನಿರ್‌ಬೀಜೀಕರಣಗೊಂಡ ಬೆಂಗಳೂರು ಮಹಾನಗರದ ನೆಲದಲ್ಲಿ ನನಗೆ ಬೇಕಾದ ಸೊಪ್ಪು ನಿಸರ್ಗ ಸಹಜವಾಗಿ ದೊರೆಯಲು ಸಾಧ್ಯವೇನು ? ಇದನ್ನರಿತು ಯಾವುದೋ ಒಂದು ಆಲಂಕಾರಿಕ ಗಿಡದ ಎಲೆಯನ್ನು ಹಿಚುಕಿ ಅದರ ರಸವನ್ನು ಕೊಯ್ದ ಜಾಗಕ್ಕೆ ಲೇಪಿಸಿಕೊಂಡು ಸುಮ್ಮನಾದೆ. ನನ್ನ ಮಿತ್ರರೊಬ್ಬರ ಮನೆಗೆ (=ಬೆಂಗಳೂರು ಮಾನಗರದಲ್ಲಿದ್ದವರು) ಹೋಗಿದ್ದಾಗ ಅವರ ಮಗನಿಗೆ ಕಾಮಾಲೆಯಾಗಿ ನರ್ಸಿಂಗ್ ಹೋಮಿಗೆ ಸೇರಿಸಿರುವುದೂ, ಸಾವಿರಾರು ರೂಪಾಯಿಗಳನ್ನು ಖರ್ಚುಮಾಡಿ ಡಿಸ್‌ಚಾರ್ಜು ಮಾಡಿಸಿರುವುದೂ ತಿಳಿದುಬಂದಿತು. ಇದೀಗ ಕಾಮಾಲೆ ಹತೋಟಿಗೆ ಬಂದಿತ್ತು. ಈ ವೇಳೆಗಾಗಲೆ ಅವರಿಗೆ ಕಾಮಾಲೆಗೆ ರಾಮ ಬಾಣವೆಂದು ಪ್ರಸಿದ್ಧವಾದ ಕಿರುನೆಲ್ಲಿ ಸೊಪ್ಪಿನ ಬಗ್ಗೆ ಹಲವರು ತಿಳಿಸಿದ್ದರು. ನನ್ನನ್ನು ಕಂಡೊಡನೆ ಅವರು 'ಕಿರುನೆಲ್ಲಿ ಸೊಪ್ಪು' ಎಲ್ಲಿ ಸಿಗುತ್ತದೆಯೆಂದು ಪ್ರಶ್ನಿಸಿದರು. ಮಹಾನಗರದ ರಸ್ತೆಗಳಲ್ಲಿ ಬಡಾವಣೆಗಳಲ್ಲಿ ಆ ಸೊಪ್ಪನ್ನು ಎಲ್ಲಿಂದ ಹುಡುಕಿ ತರೋಣ ? ಕೋಲಾರದಿಂದ ತಂದು ಕೊಟ್ಟರೆ ಫ್ರಿಜ್ಜಿನಲ್ಲಿಟ್ಟುಕೊಂಡು ಮಗನಿಗೆ ಕೊಡುವುದಾಗಿ ತಿಳಿಸಿದರು. ದೇವಾಲಯಗಳಲ್ಲಿ ದೇವರಿಗಿಂತಲೂ ಪೂಜಾರಿಯೇ ದಿಟದ ನಿವಾಸಿಯಾಗಿರುವಂತೆ, ಮಹಾ ನಗರಗಳಲ್ಲಿ ಜೀವಸಂಕುಲಗಳಿಗಿಂತಲೂ ಮನುಷ್ಯನೊಬ್ಬನೇ ದಿಟದ ನಿವಾಸಿಯಾಗಿರುತ್ತಾನೆಂದು ಹೇಳಬಹುದು. ಇದಕ್ಕೆ ಯಾರು ಹೊಣೆ ? ವಿಚಾರವಂತರೆನಿಸಿಕೊಂಡವರು ಇಂಥ ಸಣ್ಣ ಸಂಗತಿಗಳ ಬಗ್ಗೆ ಆಲೋಚಿಸಬೇಕು. ಇದಕ್ಕೆ ಬಹು ಮುಖ್ಯ ಕಾರಣವೆಂದರೆ, ಹಳ್ಳಿಗಾಡುಗಳಲ್ಲಿ ಉಳಿಸಿ-ಬೆಳೆಸುವ ಸಂಸ್ಕೃತಿಯಿದ್ದರೆ, ಪಟ್ಟಣ-ನಗರಗಳಲ್ಲಿ ಬಳಸಿ-ಬಿಸಾಡುವ ಸಂಸ್ಕೃತಿಯದೇ ಆಧಿಪತ್ಯವಾಗಿದೆ.

ಹತ್ತೊಂಬತ್ತನೇ ಶತಮಾನದವರೆಗೆ ಭೂಮಿಯ ಪುನರುತ್ಪಾದನಾ ಶಕ್ತಿಯನ್ನು ಬಹು ವ್ಯಾಪಕವಾಗಿ ಗುರುತಿಸಬಹುದಾಗಿತ್ತು. ವಸಾಹತುಗಳು, ಕೈಗಾರಿಕೀಕರಣಗಳಿಂದಾಗಿ ಇಪ್ಪತ್ತು-ಇಪ್ಪತ್ತೊಂದನೇ ಶತಮಾನಗಳಲ್ಲಿ ಭೂಮಿಯ ಪುನರುತ್ಪಾದನಾ ಶಕ್ತಿಗೆ ತೀವ್ರವಾದ ಪೆಟ್ಟು ಬಿದ್ದಿದ್ದು, ಎತ್ತನೋಡಿದರೂ 'ಜೈವಿಕ ಎತ್ತಂಗಡಿ'ಗಳು (= extinctions) ಸರ್ವ ಸಾಮಾನ್ಯ ಸಂಗತಿಯಾಗಿದೆ. ಯುರೋಪಿಯನ್ನರು ಭಾರತಕ್ಕೆ ಸಮುದ್ರಮಾರ್ಗ ಕಂಡುಹಿಡಿಯುವಾಗ, ಮಾರಿಷಸ್ ದ್ವೀಪದಲ್ಲಿ ಕಂಡ 'ಡೋ ಡೋ' ಎಂಬ ಹಾರಲಾರದ ಪಕ್ಷಿಗಳು ನಿರ್ವಂಶಗೊಂಡುದನ್ನು ನೆನಪಿಸಿಕೊಳ್ಳಿ. ನಿಸರ್ಗನಿರ್ಮಿತ ಲಗೋರಿಯಲ್ಲಿ ಮಾನವನ ಅತಿಕ್ರಮಣದಿಂದ ನಿರ್ವಂಶಗೊಂಡು ಜೈವಿಕ ಎತ್ತಂಗಡಿಗೊಳಗಾದ ಮೊದಲ ಜೀವಿಯೇ ಡೋ ಡೋ!

೫೭ನೇ ಪುಟಕ್ಕೆ

# ಹುಣ್ಣಿಮೆಯ ಅಪೂರ್ವ ಸೊಬಗು

**'ಹೊ**ಸತು'ವಿನೊಂದಿಗೇ ಬೆಳೆಯುತ್ತಾ ಬರುತ್ತಿರುವ 'ನಭಾವಲೋಕನ'ದ ಜೀವದಾತ ಚಂದ್ರ. ಪ್ರತಿ ಹುಣ್ಣಿಮೆಗೂ ಹೊಸಹೊಸ ದೃಶ್ಯಗಳನ್ನೇ ತೆರೆದಿಡುತ್ತಾ ಬರುತ್ತಿರುವುದೇ ಈ ಅಂಕಣದ ಅವಿರತ ಬೆಳವಣಿಗೆಯ ಗುಟ್ಟು. ಈ ಬಾರಿಯ ಹುಣ್ಣಿಮೆಯೂ ಅಷ್ಟೇ. ಇಪ್ಪತ್ತಾರರಂದು ಚಂದ್ರೋದಯವನ್ನು ತಪ್ಪದೇ ನೋಡಿ. (ಹೋಳಿಹುಣ್ಣಿಮೆಯನ್ನು ಇಪ್ಪತ್ತೈದರಂದೇ ಆಚರಿಸಿರುತ್ತಾರಷ್ಟೇ. ವಾಸ್ತವವಾಗಿ ಹುಣ್ಣಿಮೆ ಎಂಬ ಘಟನೆ ನಡೆಯುವುದು ಇಪ್ಪತ್ತಾರರ ಬೆಳಗಿನ ಜಾವದಲ್ಲಿ). ಚಂದ್ರನಿಗೊಂದು ಸಂಗಾತಿ – ವಜ್ರದಂತೆ ಫಳಗುಟ್ಟುತ್ತಿರುತ್ತದೆ. ಚಂದ್ರ ಮೇಲೇರಿದಂತೆ ಈ ಸಂಗಾತಿಯೂ ಮೇಲೇರುತ್ತದೆ. ಅದ್ಭುತವಾಗಿ ಕಾಣುವ ಈ ದೃಶ್ಯ ಛಾಯಾಗ್ರಹಣಕ್ಕೆ ಒಳ್ಳೆಯ ಅವಕಾಶ. ರಾತ್ರಿ ಎಂಟು ಗಂಟೆಯವರೆಗೂ ನಡೆಯುವ ಈ ಸರಸ ಆ ಬಳಿಕ ವಿರಸವಾಗಿ ಬಿಡುತ್ತದೆ. ಕ್ರಮೇಣ ಎರಡೂ ದೂರ ಸರಿಯುತ್ತವೆ. ಬೆಳಗಿನ ಜಾವದ ಹೊತ್ತಿಗೆ ನಿಚ್ಚಳವಾಗಿ ದೂರ ಸರಿದಿರುತ್ತವೆ.




ಈ ಸುಂದರ ದೃಶ್ಯ ನಮಗೆ ಬಿಡಿಸಿ ಕೊಡುವ ರಹಸ್ಯಗಳು ಅನೇಕ. ಆ ಸಂಗಾತಿ ಗುರುಗ್ರಹ. ಪ್ರಪಂಚದ ಇನ್ಯಾವುದೋ ಭಾಗದಿಂದ ಚಂದ್ರ ಅದನ್ನು ಮುಚ್ಚಿಹಾಕುವ ಆಚ್ಛಾದನೆಯನ್ನೇ ಕಾಣಬಹುದು. ಹೀಗೆ ಆಲಿಂಗನದ ನೋಟವಷ್ಟೇ ನಮಗೆ ದೊರಕಲಿದೆ. ಗುರುಗ್ರಹಕ್ಕಿಂತ ವೇಗವಾಗಿ ಚಂದ್ರ ಓಡುತ್ತಿದ್ದಾನೆ ಎಂಬುದರ ಪ್ರಾತ್ಯಕ್ಷಿಕೆ ಇದು. ಯಾವ ದಿಕ್ಕಿಗೆ ಎಂಬುದರ ಸ್ಪಷ್ಟ ಚಿತ್ರವೂ ಅಲ್ಲಿದೆ – ಪೂರ್ವಕ್ಕೆ ಓಡುತ್ತಿದೆ. ಹಿಂದಿನ ದಿನ ಚಂದ್ರನ ಜೊತೆಯಾಗಿದ್ದುದು ಮಘ ನಕ್ಷತ್ರ; ಇಂದು ಗುರು; ನಾಳೆ ಚಿತ್ರಾ. ಈ ಓಟದ ಕಾರಣ ಸುಸ್ಪಷ್ಟ. ಇನ್ನೊಂದು ಅಂಶ ಗುರುಗ್ರಹಕ್ಕೆ ಸಂಬಂಧಿಸಿದ್ದು. ಹುಣ್ಣಿಮೆಯ ಚಂದ್ರನಂತೆ ಇದೂ ಸೂರ್ಯನಿಗೆ ನೇರವಾಗಿ ಎದುರಾಗುವ ದಿನ ಸಮೀಪಿಸುತ್ತಿದೆ ಎಂಬುದರ ಸುಳಿವು ಇದು (ಈ ಘಟನೆಗೆ ವಿಯುತಿ ಎಂದು ಹೆಸರು). ತಿಂಗಳ ಆರಂಭದಲ್ಲಿ ಸುಮಾರು ಒಂಬತ್ತು ಗಂಟೆಗೆ ಉದಯಿಸುವ ಇದು ತಿಂಗಳ ಕೊನೆಗೆ ಏಳು ಗಂಟೆಗೇ ಉದಯಿಸುವುದು.

ಈ ನಮ್ಮ ಮಾರ್ಗದರ್ಶಿ ಚಂದ್ರ ತಿಂಗಳುದ್ದಕ್ಕೂ ನಕ್ಷತ್ರ-ಗ್ರಹಗಳ ಪರಿಚಯ ಮಾಡಿಕೊಡುತ್ತಾ ಬಂದಿದ್ದಾನೆ. ನಾಲ್ಕರ ಬೆಳಗಿನ ಜಾವ ಚಂದ್ರನನ್ನು ಹುಡುಕಿ. ಅಂಟಿಕೊಂಡಂತೆ ಕಾಣುವ ನಕ್ಷತ್ರ ಜ್ಯೇಷ್ಠಾ-ಕೆಂಪುನಕ್ಷತ್ರ. ಇದನ್ನು ಮರೆಮಾಡುವ ಆಚ್ಛಾದನೆ ಬೆಳಗಿನ ಹತ್ತುಗಂಟೆಗೆ. ಆದ್ದರಿಂದ ಆ ನೋಟ ನಮಗಿಲ್ಲ.

ಆರರಂದು ಮಂಗಳಗ್ರಹದ ಸಮೀಪ ಕಾಣುವ ಚಂದ್ರ ಅಮಾವಾಸ್ಯೆಯ ನಂತರ ಸಂಜೆ ಹಾಜರಾಗುತ್ತಾನೆ. ಹದಿನೈದರಂದು ಕೃತ್ತಿಕಾ ನಕ್ಷತ್ರ ಗುಚ್ಛದ ಪಕ್ಕದಲ್ಲಿ ಓಡಿ, ಹತ್ತೊಂಬತ್ತರಂದು ಶನಿಯ ಪಕ್ಕ ಕಾಣುತ್ತಾನೆ. ೨೬ರಂದು ಗುರುವಿನ ಪಕ್ಕ.

ಸಂಜೆಯ ಆಕಾಶದ ಪ್ರಕಾಶಮಾನ ಪುಂಜಗಳಲ್ಲಿ ಎದ್ದುಕಾಣುವುದು ಮಹಾವ್ಯಾಧ (ಒರೈಯನ್). ಪಕ್ಕದ ವೃಷಭ, ಮಿಥುನ, ವಿಜಯ ಸಾರಥಿ, ಪಾರ್ಥ ಇವೆಲ್ಲಾ ಸುಲಭವಾಗಿ ಗುರುತಿಸಬಹುದಾದಂತಹವು. ತಿಂಗಳ ಮೊದಲಲ್ಲಿ ಚಂದ್ರ ಬೆಳಗಿನ ಪಾಳಿಯಲ್ಲಿರುವಾಗ ಸಂಜೆ ಆಕಾಶಗಂಗೆಯ ಹರವನ್ನೂ ಗುರುತಿಸಬಹುದು. ಲುಬ್ಧಕ (ಸಿರಿಯಸ್) ಅಗಸ್ತ್ಯ (ಕನೋಪಸ್) ಅಲ್ಲದೆ ಉತ್ತರದ ಕುಂತಿ (ಕಾಸಿಯೋಪಿಯಾ) ವರೆಗೂ ವ್ಯಾಪಿಸುವ ಆಕಾಶಗಂಗೆಯ ಸೊಬಗು ಸವಿಯಲು ಇದು ಅಪೂರ್ವ ಅವಕಾಶ.

ಮಾರ್ಚ್ ಎಂದರೆ ವಸಂತಾಗಮನ-ಯುಗಾದಿಯ ಸಂಭ್ರಮ. ಡಿಸೆಂಬರ್ ೨೨ರಂದು ಉತ್ತರಕ್ಕೆ ಹೊರಟ ಸೂರ್ಯ ಮಾರ್ಚ್ ೨೧ ಆಕಾಶದ ಒಂದು ಕಾಲ್ಪನಿಕ ಗಡಿಯನ್ನು ದಾಟುವುದೇ ಈ ವಸಂತಾಗಮನದ ಸಂಕೇತ. ವಿಷುವದ್ ಬಿಂದು ಎಂಬುದು ಈ ಗಡಿಯ ಹೆಸರು. ಈ ಘಟನೆಯ ದ್ಯೋತಕವಾಗಿ ಅಂದು ಹಗಲು ರಾತ್ರಿಗಳ ಅವಧಿ ಸಮ.

ಆಕಾಶದಲ್ಲಿ ವಿಷುವದ್ ಬಿಂದು ಅಥವಾ ವಿಷುವದ್ ರೇಖೆಯನ್ನು ಗುರುತಿಸಲು ಸಾಧ್ಯವೇ ? ಪ್ರಯತ್ನಿಸೋಣ. ಪೂರ್ವ ಎಂಬ ಬಿಂದುವಿನಿಂದ ಪಶ್ಚಿಮ ಎಂಬ ಬಿಂದುವಿನವರೆಗೆ ವ್ಯಾಪಿಸಿರುವ ಈ ವೃತ್ತದ ಮೇಲಿನ ಎಲ್ಲ ಗ್ರಹ, ನಕ್ಷತ್ರಗಳೂ ಸರಿಯಾಗಿ ಹನ್ನೆರಡು ಗಂಟೆಗಳ ಕಾಲ ದಿಗಂತದ ಮೇಲಿರುತ್ತವೆ. ಸೂರ್ಯ, ಚಂದ್ರರೂ ಅಷ್ಟೇ. ಮಾರ್ಚ್ ೨೧ರಂದು ಸೂರ್ಯೋದಯ, ಸೂರ್ಯಾಸ್ತದ ಬಿಂದುಗಳನ್ನು ಗುರುತಿಸಿ. ಇವೇ ನಿಖರವಾದ ಪೂರ್ವ ಮತ್ತು ಪಶ್ಚಿಮ ಎಂಬ ಬಿಂದುಗಳು. (ಉಳಿದ ದಿನಗಳಲ್ಲಿ ಸೂರ್ಯ ಈ ಬಿಂದುಗಳ ಆಚೀಚೆ ದಿಗಂತವನ್ನು ಮುಟ್ಟುತ್ತದೆ ಎಂಬುದನ್ನು ಗಮನಿಸಿ.)

ರಾತ್ರಿ ಇಡೀ (ಸಾಧ್ಯವಾದರೆ) ನಕ್ಷತ್ರಗಳ ಮೆರವಣಿಗೆಯನ್ನು ಗಮನಿಸಿ. ಯಾವುದಾದರೂ ನಕ್ಷತ್ರ, ಗ್ರಹ ಈ ಪೂರ್ವ ಅಥವಾ ಪಶ್ಚಿಮ ಬಿಂದುಗಳಲ್ಲಿ ಉದಯಿಸುತ್ತದೆಯೇ/ಕಂತುತ್ತದೆಯೇ ? ಈ ಬಿಂದುಗಳ ಆಚೀಚೆ ಉದಯಿಸುತ್ತವೆಯೇ ಹೊರತು ಬಿಂದುಗಳಲ್ಲೇ ನಿಖರವಾಗಿ ಕಾಣುವುದೇ ಇಲ್ಲ. ಹಾಗಾದರೆ ವಿಷುವದ್ ರೇಖೆಯನ್ನು ಗುರುತಿಸುವುದು ಹೇಗೆ ?

ಸಂಜೆಯ ಆಕಾಶದ ಮಹಾವ್ಯಾಧ ಪುಂಜವನ್ನು ಗಮನಿಸಿ. ಅದರ ನಡುಪಟ್ಟಿಯ ಮೂರು ನಕ್ಷತ್ರಗಳನ್ನು ಹಿಂಬಾಲಿಸಿ. ಅವುಗಳಲ್ಲೊಂದು ಸರಿಯಾಗಿ ಪಶ್ಚಿಮ ಎಂಬ ಬಿಂದುವಿನಲ್ಲೇ ಕಂತುತ್ತದೆ. (ಮಧ್ಯರಾತ್ರಿಯಲ್ಲಿ) ಇದು ವಿಷುವದ್ ರೇಖೆಯ



*೨೬ರಂದು ಪೂರ್ವದಲ್ಲಿ ಕಾಣುವ ಅಪೂರ್ವ ಚಂದ್ರೋದಯ, ಅಂಟಿಕೊಂಡಂತೆ ಕಾಣುವ ಚುಕ್ಕೆಯೇ ಗುರು*

ಮೇಲಿದೆ ಎನ್ನಬಹುದು. ಪುಂಜದ ಚೌಕವನ್ನು ಈ ಮೂರು ನಕ್ಷತ್ರಗಳು ಅಂದಾಜಾಗಿ ಅರ್ಧಭಾಗ ಮಾಡುತ್ತವೆ ಎನ್ನಬಹುದಾದರೆ ಈ ಪುಂಜದ ಅರ್ಧ ಉತ್ತರಗೋಳಕ್ಕೆ; ಇನ್ನರ್ಧ ದಕ್ಷಿಣಗೋಳಕ್ಕೆ. ಈ ಅಂಶವನ್ನು ಗಮನಿಸಿದವರು ಕಿರ್ಕಿನ್ನಾಷ್ ಎಂಬ ಪುಟ್ಟ ದ್ವೀಪದ ಜನ. ಇಂದಿಗೂ ನಕ್ಷತ್ರ, ಗ್ರಹ, ಚಂದ್ರಗಳನ್ನೇ ಆಧರಿಸಿ ಕಾಲಗಣನೆ ಮಾಡುವ ಇವರು ಒರೈಯನ್ ಪುಂಜಕ್ಕೆ ತಕ್ಕಡಿ ಎಂದು ಹೆಸರಿಸಿದ್ದಾರೆ. ಈ ನಕ್ಷತ್ರಗಳ ಅಸ್ತಮಾನವನ್ನು ಗುರುತಿಸಿ, ಇಂತಿಷ್ಟು ನಿಮಿಷಗಳು ಕಳೆದಿವೆ ಎಂದೂ ಇವರು ನಿಖರವಾಗಿ ಹೇಳಬಲ್ಲರು.

ಶನಿ ಸಂಜೆಯ ಆಕಾಶದಲ್ಲಿದೆ. ಗುರು ತಡವಾಗಿ ಉದಯಿಸಿದರೂ ಬೆಳಗಿನ ಜಾವದವರೆಗೂ ನೋಡಲು ಸಿಗುತ್ತದೆ. ಮಂಗಳ ಬೆಳಗಿನ ಜಾವ ಪೂರ್ವದಲ್ಲಿ ಕಾಣುತ್ತದೆ. ತಿಂಗಳ ಮೊದಲಲ್ಲಿ ಸಂಜೆಯ ಆಕಾಶದಲ್ಲಿ ಕಾಣುವ ಬುಧ ಬರಬರುತ್ತಾ ಕೆಳಗಿಳಿಯುತ್ತದೆ. ೨೯ರಂದು ಸೂರ್ಯನನ್ನು ಹಾದು ಬೆಳಗಿನ ಆಕಾಶಕ್ಕೆ ಧಾವಿಸುತ್ತದೆ. ಶುಕ್ರ ಇನ್ನೊಂದು ಬದಿಯಿಂದ ಸೂರ್ಯನನ್ನು ಹಾಯುವುದು ೩೧ರಂದು. ಆ ಮುಂದೆ ಅದು ಸಂಜೆಯ ಆಕಾಶದಲ್ಲಿ ಕಾಣಲಿದೆ. ಒಟ್ಟಿನಲ್ಲಿ ಈ ತಿಂಗಳು ಶುಕ್ರ ಕಾಣುವುದಿಲ್ಲ ಎನ್ನಬಹುದು.

ಧ್ರುವನಕ್ಷತ್ರದ ಸಮೀಪ ಹಾದುಹೋಗುತ್ತಿರುವ ಮೆಕ್‌ಹೋಲ್ಸ್ ಧೂಮಕೇತು ದುರ್ಬೀನುಗಳಿಗೆ ದೂರದರ್ಶಕಗಳಿಗೆ ಮಾತ್ರ ನಿಲುಕುವಂತಿದೆ. ಹವ್ಯಾಸೀ ವೀಕ್ಷಕರ ದೂರದರ್ಶಕಗಳಿಗೆ ಇನ್ನೆರಡು ಧೂಮಕೇತುಗಳೂ ಗೋಚರಿಸಲಿವೆ. ಎರಡರ ಹೆಸರು ಲೀನಿಯರ್. ೨೦೦೩ K೪ ಎಂಬುದು ಸಂಜೆಯ ಆಕಾಶದಲ್ಲಿ ವೈತರಣೀ (ಎರಿಡಾನಿಸ್) ಪುಂಜದಲ್ಲಿ ಓಡುತ್ತಿದೆ. ೨೦೦೩ T೪ ಎಂಬುದು ಬೆಳಗಿನ ಆಕಾಶದಲ್ಲಿದೆ. ಕುಂಭರಾಶಿಯತ್ತ ಓಡುತ್ತಿದೆ.

## ಖಗೋಳ ದಿನಚರಿ

೩ ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಗೆ)
೪ ಬೆಳಗಿನ ಹತ್ತು ಗಂಟೆಗೆ ಜ್ಯೇಷ್ಠಾ ನಕ್ಷತ್ರದ ಆಚ್ಛಾದನೆ. ಸೂರ್ಯೋದಯಕ್ಕೆ ಮುನ್ನ ಜ್ಯೇಷ್ಠಾ-ಚಂದ್ರ ಪಕ್ಕಪಕ್ಕದಲ್ಲಿ ಕಾಣುತ್ತವೆ*
೬ ಚಂದ್ರದ ಪಕ್ಕ ಮಂಗಳ*
೮ ಚಂದ್ರ-ಭೂಮಿ ದೂರ ಕನಿಷ್ಠ
೯ ಚಂದ್ರ-ಶುಕ್ರ ನಡುವೆ ಕನಿಷ್ಠಕೋನ (ನೋಡಲು ಸಿಗುವುದಿಲ್ಲ)
೧೦ ಅಮಾವಾಸ್ಯೆ ೧೪:೪೦ಕ್ಕೆ
೧೧ ಚಂದ್ರ-ಬುಧ ನಡುವೆ ಕನಿಷ್ಠ ಕೋನ*
೧೨ ಬುಧ ಗರಿಷ್ಠ ಎತ್ತರ ೧೮ ಡಿಗ್ರಿ. ನೋಡಲು ಒಳ್ಳೆಯ ಅವಕಾಶ*
೧೫ ಚಂದ್ರನ ಪಕ್ಕ ಕೃತ್ತಿಕಾ ಗುಚ್ಛ*
೧೭ ಚಾಂದ್ರಮಾಸದ ಮೊದಲಪಾದ (ಚಂದ್ರಾಸ್ತ ನಡುರಾತ್ರಿಗೆ)
೧೯ ಬುಧಗ್ರಹದ ಹಿನ್ನಡೆ ಆರಂಭ
ಚಂದ್ರ-ಭೂಮಿ ಅಂತರ ಗರಿಷ್ಠ
ಶನಿ-ಚಂದ್ರ ನಡುವೆ ಕನಿಷ್ಠ ಕೋನ*
೨೦ ವಸಂತವಿಷುವ ೧೮:೦೩ಕ್ಕೆ
೨೬ ಬೆಳಗಿನ ೪:೨೮ಕ್ಕೆ ಹುಣ್ಣಿಮೆ
ರಾತ್ರಿ ೮:೧೨ಕ್ಕೆ ಗುರುಗ್ರಹದ ಆಚ್ಛಾದನೆ*
ಚಂದ್ರ-ಗುರು ಅಂಟಿಕೊಂಡಂತೆ ಕಾಣುವುದು
೨೮ ಬುಧ-ಶುಕ್ರಗಳ ನಡುವೆ ಐದು ಡಿಗ್ರಿ ಅಂತರ ನೋಡುವುದು ಸಾಧ್ಯವಿಲ್ಲ
೨೯ ಬುಧ ಗ್ರಹದ ನೀಚಯುತಿ (ಸೂರ್ಯನ ಮುಂದೆ ಹಾದುಹೋಗುವುದು)
೩೧ ಶುಕ್ರಗ್ರಹದ ಉಚ್ಚಯುತಿ (ಸೂರ್ಯನ ಹಿಂದೆ ಹಾದುಹೋಗುವುದು)

*ಛಾಯಾಗ್ರಹಣಕ್ಕೆ ಒಳ್ಳೆಯ ಅವಕಾಶ.

ಡಾ|| ಬಿ. ಎಸ್. ಶೈಲಜಾ
ಜವಹರಲಾಲ್ ನೆಹರೂ ತಾರಾಲಯ, ಬೆಂಗಳೂರು - ೫೬೦ ೦೦೧

೫೪ನೇ ಪುಟದಿಂದ

ನಿಸರ್ಗವು ತನ್ನ ವಿಧ್ವಂಸಕ ಕೃತ್ಯಗಳಿಂದ ಬೃಹತ್ ಸರೀಸೃಪಗಳನ್ನು ನಿರ್ವಂಶಗೊಳಿಸಿದ್ದರೂ ಅವುಗಳ ಮೂಳೆ ಇತ್ಯಾದಿಗಳನ್ನು ಇಂದಿಗೂ ಉಳಿಸಿಕೊಟ್ಟಿದೆ. ಆದರೆ, ಮನುಷ್ಯ ಎಷ್ಟು ಕ್ರೂರಿಯೆಂದರೆ, ಇಂದು ಭೂಮಿಯ ಮೇಲೆ ಡೋ ಡೋ ಹಕ್ಕಿಯ ಒಂದೇ ಒಂದು ಮೂಳೆ ಕೂಡ ಉಳಿದಿಲ್ಲ. ಅಂದು ಡೋ ಡೋ ಹಕ್ಕಿಯು ಭೂಮಿಯಿಂದ ನಿರ್ಗಮಿಸುವಾಗ ಮನುಷ್ಯನಿಗೆ ನೀಡಿದ ಎಚ್ಚರಿಕೆಯೆಂದರೆ, ''ಇಂದು ನಾನು; ನಾಳೆ ನೀವು...'' ಸಸ್ಯಪರಿಸರ ಮತ್ತು ತಿರ್ಯಕ್ ಪರಿಸರಗಳೆಲ್ಲ ಒಂದೊಂದೆ ಮಾಯವಾಗಿ, ಕಟ್ಟಕಡೆಗೆ ಮನುಷ್ಯ ಪರಿಸರವೊಂದು ಮಾತ್ರ ಉಳಿದು ಕ್ರಮೇಣ ತನ್ನ ಒತ್ತಡಕ್ಕೆ ತಾನೆ ಮಣಿದು ನಾಶವಾಗುವ ಆ ನಾಳೆಗೆ ನಾವೆಲ್ಲ ಹತ್ತಿರವಾಗುತ್ತಿದ್ದೇವೆಯೋ ಇಲ್ಲವೋ ಎಂಬುದನ್ನು ಬೆಂಗಳೂರಿನಂಥ ಮಹಾನಗರದಲ್ಲಿ ವಾಸಿಸುವ ನಾಗರಿಕರೇ ಹೇಳಬೇಕು. ''ಕೊಂದವರುಳಿದರೆ ಕೂಡಲ ಸಂಗಮದೇವಾ ?'' – ಎಂಬ ಪ್ರಶ್ನೆ ನನ್ನ ಬಗೆಕಣ್ಣಿಗೆ ಡೋ ಡೋ ಹಕ್ಕಿಯ ಕೊನೆಯ ಉದ್ಗಾರದಂತೆ ತೋರಿದೆ.

ಮನುಷ್ಯರು ವಾಸಮಾಡುವುದಕ್ಕೆ ಸುರಕ್ಷಿತವಾದ ಪ್ರದೇಶಗಳಾವುವು ? – ಎಂಬ ಪ್ರಶ್ನೆಯನ್ನಿಲ್ಲಿ ಹಾಕಿಕೊಳ್ಳುವುದು ಪ್ರಸ್ತುತವಾಗಿದೆ. ಬೆಂಗಳೂರಿನಲ್ಲಿ ಗುಬ್ಬಚ್ಚಿಗಳು ಏಕಿಲ್ಲ? – ಎಂಬ ಪ್ರಶ್ನೆಯನ್ನು ಹಲವರು ಎತ್ತಿರುವುದನ್ನಿಲ್ಲಿ ಸ್ಮರಿಸಿಕೊಳ್ಳಬೇಕಾಗಿದೆ. ಬೆಂಗಳೂರಿನ ಕೆಟ್ಟಗಾಳಿಯನ್ನು ಕುಡಿಯಲು ಗುಬ್ಬಚ್ಚಿಗಳ ತಲೆ ಕೆಟ್ಟಿದೆಯೇನು ? – ಎಂಬ ಪ್ರತಿ ಪ್ರಶ್ನೆಯನ್ನು ಹಾಕಬೇಕಾಗಿದೆ. ಜೊತೆಗೆ, ಗುಬ್ಬಚ್ಚಿ ಮುಂತಾದ ಪುಟ್ಟ ಹಕ್ಕಿಗಳು ವಾಸ ಮಾಡಲು ಅವಕಾಶವೇ ಇಲ್ಲದಂಥ ಕಾಂಕ್ರೀಟು ಕಟ್ಟಡಗಳ 'ಅವಾಸ್ತು'ವೂ ಜೈವಿಕ ಎತ್ತಂಗಡಿಗೆ ಕಾರಣವಿರಬಹುದೆನಿಸುತ್ತದೆ. ಹಿಂದಿನ ಕಾಲದಲ್ಲಿ ಕಟ್ಟುತ್ತಿದ್ದ ಹೆಂಚಿನ ಮನೆಗಳು, ಹಜಾರದಲ್ಲಿಟ್ಟ ದೇವರ ಫೋಟೊಗಳು, ಮಾಳಿಗೆಯ ಸಂದುಗೊಂದುಗಳು - ಸುತ್ತಮುತ್ತಣ ಗದ್ದೆಗಳು, ಹೊಲಗಳು, ಕುರುಚಲು ಸಸ್ಯಗಳು ಮುಂತಾದವುಗಳೆಲ್ಲ ಗುಬ್ಬಚ್ಚಿಗಳ ವಾಸ್ತವ್ಯಕ್ಕೆಡೆಕೊಟ್ಟಿದ್ದುವು. ಇಂಥ ಪರಿವೇಶ ಮತ್ತು ಪರಿಸರಗಳು ಮಾಯವಾದಂತೆಲ್ಲ ಗುಬ್ಬಚ್ಚಿಗಳು ಕೂಡ ಬೃಹತ್ ಸಂಖ್ಯೆಯಲ್ಲಿ ಬೆಂಗಳೂರಿನಿಂದ ನಿರ್ಗಮಿಸಿ, ಅಪರೂಪಕ್ಕೊಂಬಂತೆ ಅವಕಾಶವಿರುವಲ್ಲಿ ವಾಸಮಾಡಿಕೊಂಡಿರಬಹುದು. ಅಪಾಯಕಾರಿಯಾಗಿ ಪರಿಣಮಿಸಬಲ್ಲ ನಗರಗಳ ಬಗ್ಗೆ ಮುಂಗಾಣ್ಕೆಯಿದ್ದ ಥೋರೋ ಮಾತುಗಳಿವು : ''ಬೀದಿಗಳು ಹಾಗೂ ಜನಸಮ್ಮರ್ದಗಳಿಂದ ಕೂಡಿದ ಜಗತ್ತು ಅಸಾಧುವಾಗಿರುವಾಗ್ಗೆ ಕಾಡು ಹಾಗೂ ನಿರ್ಜರಿಗಳಿಂದ ಕೂಡಿದ ಜಗತ್ತು ಸಾಧುವಾಗಿತ್ತು...'' ಮಕ್ಕಳು ಮತ್ತು ಮುದುಕರು ಓಡಾಡಲು ಕೂಡ ಸಾಧ್ಯವಿಲ್ಲದ ಮಹಾನಗರದ ಪರಿಸರವನ್ನು ಲಕ್ಷಿಸಿದರೆ, ಕಾಡುಮೃಗಗಳಿಂದ ಕೂಡಿರುವ ಅರಣ್ಯಪ್ರದೇಶಗಳೇ ಹೆಚ್ಚು ಸುರಕ್ಷಿತವೆನಿಸುತ್ತದೆ.

ವಿಚಾರಮಾಡಿ ನೋಡಿದರೆ, ಜಗತ್ತಿನ ಶ್ರೇಷ್ಠ ಸಾಹಿತಿಗಳು, ವಿಜ್ಞಾನಿಗಳು, ತತ್ವಜ್ಞಾನಿಗಳು ಮುಂತಾದ ಮೇಧಾವಿಗಳೆಲ್ಲರೂ ಹಳ್ಳಿಗಾಡುಗಳಿಂದ ಬಂದವರು. ಸೃಷ್ಟಿಶಕ್ತಿಯನ್ನು ಕಳೆದುಕೊಂಡಿರುವ ನಗರಗಳು ಏನನ್ನೂ ಸೃಷ್ಟಿಸಲಾರವು. ಬಹುಶಃ ಸಮೃದ್ಧವಾದ ಕೊಳಚೆ, ಅಪರಾಧಿಗಳು ಮತ್ತು ಭೂಗತ ಜಗತ್ತು ನಗರಗಳ ಕೊಡುಗೆಯೆಂದು ಹೇಳಬಹುದು. 'ಅಲೆಮಾರಿಯ ಅಂಡಮಾನ್' ಕೃತಿಯಲ್ಲಿ ಡೆತ್‌ಬೆಡ್‌ನಲ್ಲಿದ್ದ ಬಾಂಬೆಯ ಯುವಕನೊಬ್ಬ ಪುಪ್ಪುಸರೋಗದಿಂದ ಬಳಲುತ್ತಿದ್ದನು. ಅಂಡಮಾನಿನ ಹಸಿರುಗಾಳಿಯಲ್ಲಿ ಪುನರ್ಜನ್ಮ ಪಡೆದದ್ದನ್ನು ತೇಜಸ್ವಿಯವರು ಮನಮುಟ್ಟುವಂತೆ ನಿರೂಪಿಸಿದ್ದಾರೆ. ಆಧುನಿಕ ಮಾನವನ ಬಿಕ್ಕಟ್ಟಿನ ಮೂಲವೇನೆಂದು ಗಾಂಧೀಜಿಯವರಿಗೆ ಚೆನ್ನಾಗಿ ತಿಳಿದಿತ್ತು. ಭಾರತವು ಯಾರನ್ನೂ. ಯಾವ ದೇಶವನ್ನೂ ನಕಲು ಮಾಡಬೇಕಾಗಿಲ್ಲ ಎಂದು ಬಲವಾಗಿ ನಂಬಿದ್ದ ಗಾಂಧೀಜಿಯವರು ಗ್ರಾಮಸ್ವರಾಜ್ ನೀತಿಯೊಂದಿಗೆ, 'ನಿಸರ್ಗ ಚಿಕಿತ್ಸೆ'ಯನ್ನು ಎತ್ತಿ ಹಿಡಿದಿದ್ದಾರೆ. ಗಾಂಧಿಯವರ 'ನಿಸರ್ಗ ಚಿಕಿತ್ಸೆ'ಯು ಅಂತಿಮವಾಗಿ 'ಶೂನ್ಯಚಿಕಿತ್ಸೆ' ಎಂಬುದನ್ನು ಮನಗಾಣಬೇಕು. ಕಾಡುಕೋಳಿಯ ಜೀವನ ಶೈಲಿಗೆ ಚಿಕಿತ್ಸೆ ಕೊಡುವ ವೈದ್ಯರುಂಟೆ ?*

---

*'ಮಹಾತ್ಮ ಗಾಂಧಿ ಮತ್ತು ನಿಸರ್ಗ ಚಿಕಿತ್ಸೆ' ಎಂಬ ಲೇಖನದಲ್ಲಿ 'ಕುಕ್ಕುಟ ಪುರಾಣ'ವನ್ನು ವಿಸ್ತಾರವಾಗಿ ವಿವೇಚಿಸಿದ್ದೇನೆ.

*'ಕುದುರೆಮುಖ ಎರಡು ಮುಖ' – ಹೊಸತು.

*ಶ್ರೀ ಶಿವಕುಮಾರ ಕಲಾಸಂಘದ ನಾಟಕೋತ್ಸವ ಪ್ರಯುಕ್ತ ದಿನಾಂಕ ೬.೧೧.೦೪ರಂದು ಸಾಣೆಹಳ್ಳಿಯ ಶ್ರೀಮಠದ ಆಶ್ರಯದಲ್ಲಿ ಏರ್ಪಡಿಸಿದ್ದ 'ಪರಿಸರ ಮತ್ತು ಜೀವಸಂಕುಲ' ಎಂಬ ವಿಚಾರಸಂಕಿರಣದಲ್ಲಿ ಮಂಡಿಸಿದ ಪ್ರಬಂಧವಿದು.

ವಿ. ಚಂದ್ರಶೇಖರ ನಂಗಲಿ
೧೬. ಶ್ರೀಗೌರಿ, ಕನಕನಗರ, ಬಸವೇಶ್ವರ ದೇವಸ್ಥಾನದ ಹತ್ತಿರ,
ಸರ್ ಎಂ. ವಿ. ಬಡಾವಣೆ, ಹೊಸಕೋಟೆ - ೫೬೨ ೧೧೪




# ಅಮೆರಿಕದ ಡಾಲರು ಕ್ರಾಂತಿಗೆ ಕಡಿವಾಣ ಇಲ್ಲದಿದ್ದರೆ ಅನಾಹುತ

**ಪ್ರ**ಪಂಚದ ಎಲ್ಲ ಜನತೆಯ ಮೇಲೆ ತಮ್ಮ ಅಧಿನಾಯಕತ್ವ ಸ್ಥಾಪಿಸುವ ಸಾಮ್ರಾಜ್ಯಶಾಹಿಗಳ ಹೆಬ್ಬಯಕೆ ಹಿಂದಿನಿಂದ ಬಂದದ್ದು. ಇತರರ ಮೇಲೆ ಅಧಿಕಾರ ನಡೆಸಲೆಂದೇ ಇರುವವರು ನಾವು, ಎಂಬ ಅಹಮಿಕೆಯಿಂದ ಐರೋಪ್ಯ ಸಾಮ್ರಾಜ್ಯಶಾಹಿಗಳು ತಮ್ಮ ಸೈನ್ಯಬಲದಿಂದ ನೇರವಾಗಿ ಅನ್ಯಜನರ ಪ್ರದೇಶಗಳನ್ನು ಆಕ್ರಮಿಸಿಕೊಂಡು, ವಸಾಹತುಗಳನ್ನು ಸ್ಥಾಪಿಸಿ ಜನರನ್ನು ಶೋಷಣೆ ಮಾಡುತ್ತಿದ್ದ, ಅವರ ಸಂಪನ್ಮೂಲಗಳನ್ನು ದೋಚುತ್ತಿದ್ದ ಕಾಲ ಇಪ್ಪತ್ತನೆಯ ಶತಮಾನದ ಕೊನೆಯ ವೇಳೆಗೆ ಮುಗಿಯಿತು. ಆದರೆ, ಇತರ ದೇಶಗಳು ಜನತೆಯ ಮೇಲೆ ಅಧಿಕಾರ ನಡೆಸುವ, ಅವರನ್ನು ಶೋಷಣೆ ಮಾಡಿ ತಮ್ಮ ಸಂಪತ್ತನ್ನು ವರ್ಧಿಸಿಕೊಳ್ಳುವ ಸಾಮ್ರಾಜ್ಯಶಾಹಿಗಳ ದುರಾಶೆ ಮಾತ್ರ ಜೀವಂತ. ಅವು ಅದಕ್ಕಾಗಿ ಅನುಸರಿಸುತ್ತಿರುವ ವಿಧಾನಗಳು ಬೇರೆಯಾಗಿವೆ. ಈ ವಿಚಾರದಲ್ಲಿ ಹಿಂದಿನ ಐರೋಪ್ಯ ದೇಶಗಳನ್ನು ಮೀರಿಸಿ, ಅವನ್ನು ಮೂಲೆಗೊತ್ತಿ ಹೊಸದಾಗಿ ಅವತರಿಸಿರುವ ಅಮೆರಿಕನ್ ಸಾಮ್ರಾಜ್ಯಶಾಹಿ ಅಗ್ರಸ್ಥಾನದಲ್ಲಿದೆ. ಕಳೆದ ಶತಮಾನದಲ್ಲಿ ಜರುಗಿದ ಎರಡು ಮಹಾಯುದ್ಧಗಳಿಂದ ಎಲ್ಲ ರೀತಿಯಲ್ಲೂ ಶ್ರೀಮಂತಗೊಂಡು ಬಲಾಢ್ಯ ರಾಷ್ಟ್ರವಾಗಿ ಬೆಳೆದ ಅಮೆರಿಕಾಗೆ ಸವಾಲಾಗಿದ್ದುದು ಅಂದಿನ ಸೋವಿಯತ್ ಒಕ್ಕೂಟ ಮಾತ್ರ. ಅದೂ ಕುಸಿದ ಮೇಲೆ ಏಕೈಕ ಸರ್ವಶಕ್ತ ರಾಷ್ಟ್ರವೆನಿಸಿಕೊಂಡಿರುವ ಅಮೆರಿಕ ಈ ಶತಮಾನದಲ್ಲಿ ತನ್ನ ಕಬಂಧ ಬಾಹುವನ್ನು ಎಲ್ಲೆಡೆಗೂ ಚಾಚುತ್ತಿದೆ.

ಅಧಿನಾಯಕತ್ವ ಸ್ಥಾಪಿಸಲು ಹೊರಟಿರುವ ಅಮೆರಿಕ ಅನುಸರಿಸುತ್ತಿರುವ ವಿಧಾನವೆಲ್ಲ ನಾಗರಿಕ ಮೌಲ್ಯಗಳನ್ನು ಗಾಳಿಗೆ ತೂರುವುದಾಗಿದೆ. ಪ್ರಜಾಪ್ರಭುತ್ವದ ಹೆಸರಿನಲ್ಲಿ ನಡೆಸುವ ಎಲ್ಲ ದೌರ್ಜನ್ಯಗಳಿಗೂ ಮೂಲಾಧಾರ ಹಣದ ಹೊಳೆ, ಹೆಣದ ಹೊಳೆ. ಆಫ್ಘಾನಿಸ್ತಾನ, ಇರಾಕ್ ಅದಕ್ಕೆ ಇತ್ತೀಚಿನ ಉದಾಹರಣೆ. ಹಣದ ಪ್ರಾಬಲ್ಯವನ್ನು ಅದು ನಾನಾ ರೀತಿಯಲ್ಲಿ ಬಳಸಿಕೊಳ್ಳುತ್ತದೆ. ಭ್ರಷ್ಟ ಆಡಳಿತಗಳ ಪೋಷಣೆ, ಆರ್ಥಿಕ ತೊಂದರೆಯಲ್ಲಿರುವ ದೇಶಗಳನ್ನು ಸಾಲದ ಜಾಲದಲ್ಲಿ (ಐಎಂಎಫ್, ವರ್ಲ್ಡ್‌ಬ್ಯಾಂಕ್ ಮೂಲಕ) ಕೆಡವುವುದು, ವಿಶ್ವವಾಣಿಜ್ಯ ಸಂಸ್ಥೆಯ ಮೂಲಕ ಜಾಗತೀಕರಣ, ಮುಕ್ತಮಾರುಕಟ್ಟೆಯ ಹೆಸರಿನಲ್ಲಿ ಬಡರಾಷ್ಟ್ರಗಳನ್ನು ಅಧೀನಕ್ಕೊಳಪಡಿಸುವುದು ಮೊದಲಾದ ಕ್ರಮಗಳು ಒಂದು ಕಡೆಯಾದರೆ, ಆಂತರಿಕ ವ್ಯವಹಾರಗಳಲ್ಲಿ ನೇರವಾಗಿ ಹಸ್ತಕ್ಷೇಪ ಮಾಡುವುದು ಇನ್ನೊಂದು ಬಗೆ. ಹಿಂದಿನಂತೆ ವಸಾಹತೀಕರಣದಲ್ಲಿ ತೊಡಗದೆ, ಕೈಗೊಂಬೆ ಸರಕಾರಗಳನ್ನು ಸ್ಥಾಪಿಸುವುದು ಅದರ ಮುಖ್ಯ ಗುರಿ ಈಗ.

ಸೋವಿಯತ್ ಒಕ್ಕೂಟದ ವಿಘಟನೆಯಲ್ಲಿ ಅಮೆರಿಕ ವಹಿಸಿದ ಪಾತ್ರ ಗಣನೀಯವಾದ್ದಾಗಿತ್ತು ಎನ್ನುವುದರಲ್ಲಿ ಸಂದೇಹವಿಲ್ಲ. ಶೀತಯುದ್ಧದ ಕಾಲದಲ್ಲಿ ಹರಿಬಿಟ್ಟ ಶಸ್ತ್ರಾಸ್ತ್ರ ಪೈಪೋಟಿ ಒಂದು ಬಗೆಯಾದರೆ, ಕೋಟ್ಯಂತರ ಡಾಲರುಗಳನ್ನು ವಿನಿಯೋಗಿಸಿ ಸಿಐಎ ನಡೆಸಿದ ವಿಧ್ವಂಸ ಚರ್ಯೆಗಳು ಇನ್ನೊಂದು ಬಗೆ. ಇಂದು ಅವೆಲ್ಲ ಇತಿಹಾಸ. ಒಕ್ಕೂಟದ ವಿಘಟನೆಯ ನಂತರ ಅದರ ಅಂಗವಾಗಿದ್ದ ಎಲ್ಲ ೧೫ ರಾಷ್ಟ್ರಗಳೂ ಸ್ವತಂತ್ರ ರಾಜ್ಯಗಳಾದುವು. ಈ ಪೈಕಿ ಅತಿದೊಡ್ಡ ರಾಷ್ಟ್ರವೆನಿಸಿದ ರಷ್ಯಾದ ನೇತೃತ್ವದಲ್ಲಿ ಅಂದು ಪರಸ್ಪರ ಸಹಕಾರಕ್ಕಾಗಿ ಈ ಎಲ್ಲ ಸ್ವತಂತ್ರ ರಾಜ್ಯಗಳ ಕಾಮನ್‌ವೆಲ್ತ್ ಸ್ಥಾಪನೆಯಾಯಿತು. ೧೦ಕ್ಕೂ ಹೆಚ್ಚು ವರ್ಷಗಳಿಂದ ಒಟ್ಟುಗೂಡಿದ್ದ ಈ ರಾಜ್ಯಗಳು ಪರಸ್ಪರ ಅವಲಂಬಿತ. ಸುಮಾರು ಹದಿನೈದು ವರ್ಷಗಳಿಂದ ಈ ವ್ಯವಸ್ಥೆ ಆ ಭೂಭಾಗದಲ್ಲಿ ಸಾಕಷ್ಟು ತೃಪ್ತಿಕರವಾಗಿ ಕಾರ್ಯ ನಿರ್ವಹಿಸುತ್ತಿದೆ. ರಷ್ಯಾದಲ್ಲಿ ವ್ಲಾಡಿಮಿರ್ ಪುಟಿನ್ ಅಧಿಕಾರಕ್ಕೆ ಬಂದಮೇಲೆ ಅದು ತಕ್ಕಮಟ್ಟಿಗೆ ದೃಢಗೊಳ್ಳುತ್ತಿರುವುದು ಎದ್ದುಕಾಣುತ್ತಿತ್ತು. ಅಂತರರಾಷ್ಟ್ರೀಯ ವ್ಯವಹಾರಗಳಲ್ಲಿ ಸ್ವತಂತ್ರ ಧೋರಣೆ ತಳೆಯುವ ಸೂಚನೆಗಳೂ ಅಲ್ಪಸ್ವಲ್ಪ ಕಾಣಿಸಿಕೊಳ್ಳುತ್ತಿದ್ದವು. ಕಾಮನ್‌ವೆಲ್ತ್ ಅನ್ನು ಹೀಗೇ ಬೆಳೆಯಲು ಬಿಟ್ಟರೆ ಅಪಾಯ ಖಂಡಿತ ಎನ್ನುವುದನ್ನು ಅರಿಯಲು ಅಮೆರಿಕಾದ ಆಡಳಿತಗಾರರಿಗೆ ಹೆಚ್ಚುಕಾಲ ಬೇಕಾಗಲಿಲ್ಲ. ಒಡನೆಯೇ ಅದನ್ನು ಬುಡಮೇಲು ಮಾಡಲು ಷಡ್ಯಂತ್ರ ರೂಪಿಸತೊಡಗಿದರು.

ಭ್ರಷ್ಟರನ್ನು ಅರಸಿ, ಡಾಲರಿನ ರುಚಿ ತೋರಿಸಿ, ಅಗತ್ಯವಿದ್ದಷ್ಟು ಹಣದ ಹೊಳೆ ಹರಿಸಿ ತನಗೆ ಅನುಕೂಲರಾಗಿರುವವರನ್ನು ಪಟ್ಟಕ್ಕೇರಿಸುವ ತಂತ್ರ ಅಮೆರಿಕಾಗೆ ಹೊಸದೇನಲ್ಲ. ಅದರಲ್ಲೂ ಎಲ್ಲಾ 'ಪ್ರಜಾಪ್ರಭುತ್ವ' ರೀತಿಯಲ್ಲಿ 'ಚುನಾವಣೆ'ಗಳ ರೂಪದಲ್ಲಿ ನಡೆಯುವುದಾದರೆ ಇನ್ನಷ್ಟು ಕ್ಷೇಮ. ಈ ತಂತ್ರಕ್ಕೆ ಮೊದಲು ಬಲಿಯಾದದ್ದು ಜಾರ್ಜಿಯ. ಎಡುವರ್ಡ್ ಷವರ್‌ನಾಡ್ಜೆ ನೇತೃತ್ವದಲ್ಲಿದ್ದ ಸರಕಾರದ ವಿರುದ್ಧ ಬಂಡಾಯ ಎಬ್ಬಿಸಿ, ಪಾಶ್ಚಾತ್ಯರ ಪರವಾಗಿರುವ ಸಾಕಾಶ್ವಿಲಿ ಸರಕಾರವನ್ನು ಅಧಿಕಾರಕ್ಕೆ ತರಲಾಯಿತು. ಇಡೀ ಕಾರ್ಯಾಚರಣೆಯಲ್ಲಿ ಅಮೆರಿಕ ನೇರವಾಗಿ ಭಾಗಿಯಾಗಿತ್ತು. ಹೊಸ ಸರಕಾರ ಅಧಿಕಾರ ವಹಿಸಿಕೊಂಡ ಸಂದರ್ಭದಲ್ಲಿ ಆಗ ಅಮೆರಿಕದ ವಿದೇಶಾಂಗ ಕಾರ್ಯದರ್ಶಿಯಾಗಿದ್ದ ಕಾಲಿನ್ ಪಾವೆಲ್ ಉಪಸ್ಥಿತನಿದ್ದ. ಜಾರ್ಜಿಯದ ಆಂತರಿಕ ವ್ಯವಹಾರಗಳಲ್ಲಿ ತಲೆಹಾಕದಂತೆ ರಷ್ಯಾಗೆ ಎಚ್ಚರಿಕೆ ನೀಡುವ ಉದ್ಧಟತನವನ್ನು ತೋರಿದ್ದ. ಎರಡು ವರ್ಷಗಳ ಹಿಂದೆ ಸಂಭವಿಸಿದ ಈ ಬದಲಾವಣೆಯನ್ನು 'ರೋಸ್ ರೆವೊಲ್ಯೂಷನ್' ಎಂದು ಹೆಸರಿಸಿದ್ದಾರೆ. ಬೆಟ್ಟಗುಡ್ಡಗಳ ನಾಡಾದ ಪುಟ್ಟರಾಜ್ಯ ಜಾರ್ಜಿಯಾದಲ್ಲಿ ಅಮೆರಿಕ ನಡೆಸಿದ ಹೇಯಕೃತ್ಯ ಅಷ್ಟಾಗಿ ಪ್ರಪಂಚದ ಗಮನವನ್ನು ಸೆಳೆಯಲಿಲ್ಲ.

ಇದೀಗ ರಷ್ಯಾದ ನೆರೆಯಲ್ಲಿರುವ ದೊಡ್ಡ ರಾಜ್ಯ ಉಕ್ರೇನಿನಲ್ಲಿ ಅಮೆರಿಕ ನಡೆಸಿದ 'ಆರೆಂಜ್ ಕ್ರಾಂತಿ' ಸಫಲವಾಗಿದೆ. ಇದರಲ್ಲಿ ಅಮೆರಿಕ ಹಣದ ಹೊಳೆಯನ್ನೇ ಹರಿಸಿದ್ದು ಜಗಜ್ಜಾಹೀರಾಗಿದೆ. ಅಮೆರಿಕ ಬೆಂಬಲಿಸಿದ್ದ ವಿಕ್ಟರ್ ಯುಶ್ಚೆಂಕೋ ವಿವಾದಾಸ್ಪದವಾಗಿದ್ದ ಚುನಾವಣೆಗಳಲ್ಲಿ ಅಧಿಕಾರದ ಗದ್ದುಗೆಗೆ ಏರಿದ್ದಾನೆ. ಅಮೆರಿಕದ ಉಪವಿದೇಶಾಂಗ ಕಾರ್ಯದರ್ಶಿ ಲಿನಪಾಸ್ಕೋ ಚುನಾವಣೆಯ ಸಮಯದಲ್ಲಿ ಉಕ್ರೇನಿನಲ್ಲೇ ಇದ್ದು ಉಸ್ತುವಾರಿ ನಡೆಸಿದ. ಒಂದು ಬಗೆಯಲ್ಲಿ ಇದು ಅಮೆರಿಕ ಉಕ್ರೇನಿನ ಆಂತರಿಕ ವ್ಯವಹಾರಗಳಲ್ಲಿ ದೊಡ್ಡ ಪ್ರಮಾಣದಲ್ಲಿ ಹಸ್ತಕ್ಷೇಪ ನಡೆಸಿ ಉಂಟುಮಾಡಿದ ಅರಮನೆ ಕ್ರಾಂತಿ ಎನ್ನಬಹುದು. ಹಣದ ಪ್ರಭಾವ ಎಷ್ಟುಮಟ್ಟಿಗಿರುತ್ತದೆ ಎನ್ನುವುದಕ್ಕೆ ಉಕ್ರೇನಿನ ವಿದ್ಯಮಾನ ಒಂದು ಒಳ್ಳೆಯ ಉದಾಹರಣೆ. ರಷ್ಯದೊಂದಿಗೆ ಸಂಬಂಧಗಳನ್ನು ಕಡಿದುಕೊಳ್ಳುವುದು ಉಕ್ರೇನಿಗೆ ಅಷ್ಟು ಸುಲಭವಲ್ಲ. ಅನಾದಿಕಾಲದಿಂದಲೂ ಈ ಎರಡೂ ರಾಜ್ಯಗಳು ಅತ್ಯಂತ ನಿಕಟ ಸಂಬಂಧ ಹೊಂದಿದ್ದುವಲ್ಲದೆ, ಪರಸ್ಪರಾವಲಂಬಿ. ಎರಡೂ ದೇಶಗಳ ಮಧ್ಯೆ ದೀರ್ಘಾವಧಿ ರಕ್ಷಣಾ ಒಪ್ಪಂದವಿದೆ.

ಜಾರ್ಜಿಯ ಮತ್ತು ಉಕ್ರೇನುಗಳಲ್ಲಿ ಸಾಫಲ್ಯ ಕಂಡ ಮೇಲೆ ಈಗ ಈ 'ಕ್ರಾಂತಿ'ಯನ್ನು ಇತರ ರಾಜ್ಯಗಳಿಗೆ, ಮಧ್ಯ ಏಷಿಯಾದ ಭಾಗಗಳಲ್ಲಿರುವ ರಾಜ್ಯಗಳಿಗೆ ಹರಡಲು ಸಿದ್ಧತೆಯಾಗುತ್ತಿದೆ. ಕಿರ್ಗಿಸ್ತಾನದಲ್ಲಿ ಸದ್ಯದಲ್ಲೇ ಚುನಾವಣೆಗಳು ನಡೆಯಬೇಕಿರುವುದರಿಂದ ಈಗಾಗಲೇ ಅದಕ್ಕಾಗಿ ಅಮೆರಿಕದ ಅಧಿಕಾರಿಗಳು ಸಿದ್ಧರಾಗುತ್ತಿದ್ದಾರೆ. ಹೊಸದಾಗಿ ನೇಮಕಗೊಂಡಿರುವ ಉಗ್ರನೀತಿ ಪ್ರತಿಪಾದಕಿ ಕಾಂಡಲೀಸ ರೈಸ್ ಈ ಭೂಭಾಗದಲ್ಲಿ ಪ್ರವಾಸ ಕೈಗೊಳ್ಳಲು ಯೋಜಿಸಿದ್ದಾರೆ.

ಈ ಅಪಾಯಕಾರಿ ಬೆಳವಣಿಗೆಗಳ ಹಿನ್ನೆಲೆಯಲ್ಲಿ ಸ್ವತಂತ್ರ ರಾಜ್ಯಗಳ ಕಾಮನ್‌ವೆಲ್ತ್‌ಅನ್ನು ಉಳಿಸಿಕೊಂಡು, ಬಲಗೊಳಿಸಲು ರಷ್ಯಾ ಜರೂರು ಕ್ರಮಗಳನ್ನು ಕೈಗೊಳ್ಳಬೇಕಾಗಿದೆ. ಅಮೆರಿಕದ ನೇತೃತ್ವದಲ್ಲಿರುವ 'ನ್ಯಾಟೋ'ದ ಬಾಹು ಈ ಭಾಗದ ರಾಜ್ಯಗಳನ್ನು ಎಳೆದುಕೊಳ್ಳದಂತೆ ನೋಡಿಕೊಳ್ಳಬೇಕಾಗಿದೆ. ರಷ್ಯಾದ ಅಧ್ಯಕ್ಷ ಕಾಮನ್‌ವೆಲ್ತ್‌ನ ವ್ಯವಹಾರಗಳಲ್ಲಿ ತಲೆಹಾಕದಂತೆ ಅಮೆರಿಕಾಗೆ ಎಚ್ಚರಿಕೆ ನೀಡಿದ್ದಾರೆ. ಕಾಮನ್‌ವೆಲ್ತ್‌ನ ಸದಸ್ಯ ರಾಷ್ಟ್ರಗಳು ರಷ್ಯಾದೊಂದಿಗೆ ಸಾಮೂಹಿಕ ಭದ್ರತಾ ಒಪ್ಪಂದವನ್ನು ಹೊಂದಿವೆ. ಅದೇನೇ ಇರಲಿ, ಅಮೆರಿಕದ ಕುತಂತ್ರಗಳಿಗೆ ಬಲಿಯಾಗದಂತೆ ಎಚ್ಚರವಹಿಸುವುದು ಅಗತ್ಯ. ಕೈಗೊಂಬೆ ಸರಕಾರಗಳನ್ನು ಅಧಿಕಾರಕ್ಕೆ ತರುವ ಅಮೆರಿಕದ ಸಂಚುಗಳ ಬಗ್ಗೆ ಪ್ರಪಂಚದ ಎಲ್ಲ ದೇಶಗಳೂ, ಪ್ರಜಾಪ್ರಭುತ್ವ ಶಕ್ತಿಗಳೂ ಎಚ್ಚೆತ್ತು ಕಾರ್ಯಪ್ರವೃತ್ತವಾಗಬೇಕಾಗಿದೆ. ಅಮೆರಿಕದ ಸಾಮ್ರಾಜ್ಯ ದಾಹವನ್ನು ಹಿಮ್ಮೆಟ್ಟಿಸಲು ಸಕಲ ಪ್ರಯತ್ನಗಳನ್ನು ಮಾಡುವುದು ಇಂದಿನ ಜರೂರು ಕರ್ತವ್ಯವಾಗಿದೆ.

ಸೀಯಾರ್ಕೆ
'ಜೌಬೀಸ', ೮೪೯, ೩ನೇ ಅಡ್ಡರಸ್ತೆ
ಬನಶಂಕರಿ ಮೂರನೇ ಹಂತ, ೧ನೇ 'ಎ' ಮುಖ್ಯರಸ್ತೆ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು-೮೫



**ಸಾಹಿತ್ಯ ಸಂಪದ** (ಪ್ರಬಂಧ ಸಂಕಲನ)
ಜಯದೇವಪ್ಪ ಜೈನಕೇರಿ
**ಪುಟ :** ೨೪೮ **ಬೆಲೆ : ರೂ.** ೧೨೦
**ಶಾಂತಲಾ ಪ್ರಕಾಶನ,** ನಂ. ೬೮೯, ವಾರ್ಡ್ ನಂ. ೫, 'ಶಾಂತಲಾ', ಕುವೆಂಪು ರಸ್ತೆ, ಶಿವಮೊಗ್ಗ - ೫೭೭ ೨೦೧

ಬದುಕಿಗೆ ನೇರವಾಗಿ ಸಂಬಂಧಿಸಿದ ತಾತ್ವಿಕ ಚಿಂತನೆಗಳಿಂದ ಕೂಡಿದ ಇಲ್ಲಿನ ಬರಹಗಳು ಹೆಚ್ಚು ಆತ್ಮೀಯವಾಗಿ ಓದುಗರನ್ನು ತಲುಪುತ್ತವೆ. ವ್ಯಕ್ತಿತ್ವ ವಿಕಸನಕ್ಕೆ ಸಂಬಂಧಿಸಿದ ಕಿವಿಮಾತುಗಳು ಸತ್ವದ ನುಡಿಗಳಂತೆಯೂ, ಓರ್ವ ಹಿರಿಯ ಹಿತೈಷಿಯ ಬುದ್ಧಿವಾದದ ಮಾತುಗಳಂತೆಯೂ ನಮ್ಮನ್ನು ಸೆಳೆಯುತ್ತವೆ. ತಮ್ಮ ವ್ಯಕ್ತಿತ್ವವನ್ನು ತಾವೇ ಶ್ರೇಷ್ಠವಾಗಿ ರೂಪಿಸಿಕೊಳ್ಳುತ್ತ ಸಾಗುವ ಮನುಷ್ಯನು ಇತರರಿಗೆ ಮಾರ್ಗದರ್ಶಕನಾಗಿರಬೇಕು. ಯಾವುದೇ ಬಾಹ್ಯ ಆಕರ್ಷಣೆಯ ವಸ್ತುಗಳ ಬಗ್ಗೆ ಅತಿಯಾದ ವ್ಯಾಮೋಹ ಸಲ್ಲದು; ಅಂತರಂಗದ ಅರಳುವಿಕೆಯೇ ಜೀವನದಲ್ಲಿ ಪ್ರಧಾನವಾಗಿರಬೇಕೆಂದು ತಮ್ಮ ತುಂಬು ಜೀವನದಲ್ಲಿ ಗಳಿಸಿದ ಅಪಾರ ಅನುಭವದ ನೆಲೆಯಲ್ಲಿ ನಿರೂಪಿಸಿದ್ದಾರೆ. ಉನ್ನತ ವಿಚಾರಗಳಿಂದಲೂ ಉತ್ತಮ ಸಂಸ್ಕಾರದಿಂದಲೂ ಪ್ರೇರಿತವಾದ ಒಳ್ಳೆಯ ಕೆಲವು ಮಾತುಗಳನ್ನು ಕೇಳ ಬಯಸುವವರಿಗೆ ಈ ಕೃತಿ ನಿರಾಶೆಯನ್ನುಂಟುಮಾಡುವುದಿಲ್ಲ.



**ಅನ್ವಯ** (ವೈಚಾರಿಕ ಲೇಖನಗಳು)
ಅರವಿಂದ ಚೊಕ್ಕಾಡಿ
**ಪುಟ :** ೧೬೮ **ಬೆಲೆ : ರೂ.** ೯೨
**ಮೌಲ್ಯ ಪ್ರಕಾಶನ,** ನಲ್ಲೂರು, ಕಾರ್ಕಳ ತಾಲೂಕು, ಉಡುಪಿ ಜಿಲ್ಲೆ - ೫೭೪ ೫೦೨

ಪ್ರಸ್ತುತ ಮಾನವನ ಏಳ್ಗೆಯ ವಿಚಾರಗಳನ್ನೇ ಪ್ರಧಾನವಾಗಿ ಪರಿಗಣಿಸಿ ಸರಿಯಾದ ವಾದಸರಣಿಯಿಂದಲೂ ಅಸಂಖ್ಯಾತ ಉದಾಹರಣೆಗಳೊಂದಿಗೂ ಚರ್ಚೆಗೆ ಇಳಿಯುವ ಅರವಿಂದ ಚೊಕ್ಕಾಡಿ ಇಂದಿನ ಪ್ರತಿಭಾವಂತ ಪ್ರಜ್ಞಾವಂತ ಲೇಖಕರು. ವಿವರವಾಗಿ ತಿಳಿಹೇಳುವ, ಅರೆದು ಕುಡಿಸುವಂತಹ ತಮ್ಮ ಅಧ್ಯಾಪಕರ ಭಾಷಾಶೈಲಿಯಿಂದ ನಾಡಿನ ಎಲ್ಲ ಪತ್ರಿಕೆಗಳಲ್ಲೂ ಹೆಸರು ಮೂಡಿಸಿದ ಅವರು ಇಂದಿನ ಹಲವು ಸಮಸ್ಯೆಗಳ ಬಗ್ಗೆ ಸಮರ್ಥವಾಗಿ ವಿಶ್ಲೇಷಿಸಿದ ಕೆಲವು ಲೇಖನಗಳು ಇಲ್ಲಿವೆ. ಆರ್ಥಿಕ ರಂಗದ ವಿಫಲತೆ ಮತ್ತು ಪ್ರಭುತ್ವದ ಅಸಹಾಯಕತೆ ಇವೆರಡು ಸಮ್ಮಲ್ಲಿ, ಎದ್ದುಕಾಣುವ ಅಂಶ. ಜನಸಾಮಾನ್ಯರ ಯಾವುದೇ ತೊಂದರೆಗಳಿಗೂ ಸ್ಪಂದಿಸಲಾಗದಂಥ ಅವ್ಯವಸ್ಥೆಯಿಂದಾಗಿ ಎಲ್ಲ ರಂಗಗಳಲ್ಲಿ ತಲೆದೋರಿದ ವೈಫಲ್ಯವನ್ನು ಗುರುತಿಸುತ್ತ ಜಾಗತೀಕರಣದ ಸಮ್ಮೋಹಿನಿಗೆ ಬಲಿಯಾಗುವ ಅಪಾಯಗಳತ್ತ ನಮ್ಮ ಗಮನ ಸೆಳೆದಿದ್ದಾರೆ. ಈ ಲೇಖನಗಳು ಇಂದಿನ ಬಿಕ್ಕಟ್ಟಿಗೆ ಎಚ್ಚರಿಕೆಯ ದನಿಯಾಗಬಲ್ಲವು.



**ಮೈಸೂರು ನಗರದ ಅಶೋಕಪುರಂ**
(ಒಂದು ಜಾನಪದೀಯ ಅಧ್ಯಯನ)
ಡಾ॥ ವಾಸುದೇವಮೂರ್ತಿ
**ಪುಟ :** ೪೬೮ **ಬೆಲೆ : ರೂ.** ೨೫೦
**ಅಭಿರುಚಿ ಪ್ರಕಾಶನ,** ನಂ. ೪, ೨ನೆ ಮಹಡಿ, ನಗರ ಸಾರಿಗೆ ಸಂಸ್ಥೆ ಕಟ್ಟಡ, ಕೆ. ಆರ್. ವೃತ್ತ, ಮೈಸೂರು - ೧

ಅಶೋಕಪುರಂ ಮೈಸೂರು ನಗರದ ಮಧ್ಯೆ ಇರುವ ಹಿಂದೆ ತೀರ ಹಿಂದುಳಿದ ವರ್ಗ ವಾಸಿಸುತ್ತಿದ್ದ ಪ್ರದೇಶ. ಇತ್ತೀಚಿನ ನವನಾಗರಿಕತೆಗೆ ಸ್ವಲ್ಪ ಸ್ವಲ್ಪವೇ ತೆರೆದುಕೊಂಡರೂ ಇನ್ನೂ ಅನೇಕರು ತಮ್ಮ ಕುಲಾಚರಣೆ ಆಚಾರ-ವಿಚಾರಗಳನ್ನು ಸುಲಭದಲ್ಲಿ ಬಿಟ್ಟುಕೊಡಲು ಸಿದ್ಧರಿಲ್ಲ. ಹಳೆಯ ಹಾಗೂ ಹೊಸ ತಲೆಮಾರುಗಳ ಕೊಂಡಿಯಂತೆ ಕಾಣುತ್ತಿರುವ ಈ ಚಿಕ್ಕ ಪ್ರದೇಶವೊಂದನ್ನು ತಮ್ಮ ಸಂಶೋಧನಾ ಪ್ರಬಂಧಕ್ಕೆ ವಸ್ತುವನ್ನಾಗಿ ಆಯ್ಕೆ ಮಾಡಿ ಸವಿಸ್ತಾರ ಕ್ಷೇತ್ರ ಕಾರ್ಯ ನಡೆಸಿದ್ದು ಜಾನಪದ ನಂಬಿಕೆಗಳ ಇತಿಹಾಸವೊಂದನ್ನು ಪರಿಚಯಿಸಿದ್ದಾರೆ. ಪ್ರಾಚೀನ ಕಾಲದ ಹೊಲಗೇರಿಯೆಂದು ಗುರುತಿಸಲಾಗಿದ್ದ ಈ ಪ್ರದೇಶಕ್ಕೆ ಕಳೆದ ಶತಮಾನದಲ್ಲಷ್ಟೇ ಅಶೋಕಪುರಂ ಎಂಬ ನಾಮಕರಣವಾಗಿದ್ದು ಅಲ್ಲಿನ ಜನರ ಆಮೂಲಾಗ್ರ ಪರಿಚಯವನ್ನೇ ಪ್ರಬಂಧದಲ್ಲಿ ಮಂಡಿಸಲಾಗಿದೆ. ಒಂದು ಜನಾಂಗದ ಹಾಗೂ ಗ್ರಾಮೀಣ ಬದುಕಿನ ಪರಿಚಯ.



**ಗ್ರಂಥ ಸಂಗಾತಿ** (ಅವಲೋಕನ)
ಸಂ. ಡಾ॥ ಜಿ. ಎಂ. ಹೆಗಡೆ
**ಪುಟ :** ೪೬೦ **ಬೆಲೆ : ರೂ.** ೩೦೦
**ಶ್ರೀ ರಾಘವೇಂದ್ರ ಪ್ರಕಾಶನ,** ಅಂಬಾರಕೊಡ್ಲ, ಅಂಕೋಲಾ - ೫೮೧ ೩೧೪ (ಉ.ಕ.)

ಶ್ರೀ ರಾಘವೇಂದ್ರ ಪ್ರಕಾಶನವು ಶ್ರೀ ವಿಷ್ಣು ನಾಯ್ಕರ ಉತ್ಸಾಹ - ಸಾಹಸ ಮತ್ತು ಅವಿರತ ಶ್ರಮದ ಫಲವಾಗಿ ಎತ್ತರಕ್ಕೆ ಬೆಳೆದುನಿಂತ ಸಂಸ್ಥೆ. ಮೂವತ್ತು ವರ್ಷಗಳ ಸುದೀರ್ಘ ಅವಧಿಯಲ್ಲಿ ಅದು ಪ್ರಕಟಿಸಿದ ಪುಸ್ತಕಗಳ ಸಂಖ್ಯೆ ನೂರೈವತ್ತರ ಗಡಿ ದಾಟಿದೆ. ಸಾಹಿತ್ತಿಕ ವಾತಾವರಣದಲ್ಲಿ ಜನಪರ ಸಾಂಸ್ಕೃತಿಕ ಕಾರ್ಯಕ್ರಮಗಳನ್ನೂ ಹಮ್ಮಿಕೊಂಡು ಪ್ರಕಾಶಕ - ಲೇಖಕ - ಓದುಗರನ್ನು ಒಂದು ಸೂತ್ರದಲ್ಲಿ ಬಂಧಿಸುವ ಶ್ಲಾಘನೀಯ ಕೆಲಸ ಮಾಡಿದೆ. ಇದೀಗ ಹೊಸ ಅಪೂರ್ವ ಪ್ರಯೋಗವೆಂಬಂತೆ ರಾಘವೇಂದ್ರ ಪ್ರಕಾಶನದ ಎಲ್ಲ ಪುಸ್ತಕಗಳನ್ನೂ ನಾಡಿನ ವಿಮರ್ಶಕರಿಂದ ತುಲನೆ ಮಾಡಿಸಿ ಲೇಖನಗಳನ್ನು ಸಂಗ್ರಹಿಸಿ ಪ್ರಕಟಿಸಿದ ಸಾಹಿತ್ಯಾವಲೋಕನವೇ ಈ ಗ್ರಂಥವಾಗಿದೆ. ವೈವಿಧ್ಯಮಯ ಸಾಹಿತ್ಯವನ್ನು ಪ್ರಕಟಿಸಿ ಹೆಸರು ಮಾಡಿದ ಶ್ರೀ ವಿಷ್ಣು ನಾಯ್ಕರು ಈ ಸಂಸ್ಥೆಯ ಮೂವತ್ತನೇ ವಾರ್ಷಿಕೋತ್ಸವದ ಸವಿ ನೆನಪಿಗೆ ಈ ಸಮೀಕ್ಷಾ ಗ್ರಂಥವನ್ನು ನೀಡಿದ್ದಾರೆ.



**ಪಂಜರ** (ಕಾದಂಬರಿ)
ಸಾರಾ ಅಬೂಬಕ್ಕರ್
**ಪುಟ :** ೧೯೨ **ಬೆಲೆ : ರೂ.** ೯೦
**ಚಂದ್ರಗಿರಿ ಪ್ರಕಾಶನ,** ೨-೨೧-೧೬೩೧/೨, ಸೂಕ್ತ್ರತರಂಗ ನಿಲಯ ರಸ್ತೆ, ಮಂಗಳೂರು - ೫೭೫ ೦೦೬

ಮಾತೃದೇವೋಭವ ಎಂಬ ಪೂಜನೀಯ ಸ್ಥಾನ ನೀಡಿದ್ದರೂ ನಮ್ಮ ಸಮಾಜದಲ್ಲಿ ಓರ್ವ ಅವಿವಾಹಿತೆ ತಾಯಿಯಾದಾಗ ಆಕೆಯ ಬಗ್ಗೆ ಎಲ್ಲಿಲ್ಲದ ತಿರಸ್ಕಾರ ಮೂಡುತ್ತದೆ. ಜನಾಪವಾದಕ್ಕೆ ಅಂಜಿ ಕುಂತಿಯಂಥ ರಾಜಕನ್ಯೆಯೇ ಕರ್ಣನಂಥ ವೀರಾಗ್ರಣಿಯನ್ನು ತ್ಯಜಿಸಬೇಕಾದಂಥ ಕಥೆ ಮಹಾಭಾರತದಲ್ಲಿದೆ. ಇಂದಿನ ಭಾರತದಲ್ಲೂ ಇಂಥ ಸಮಸ್ಯೆಗಳು ಸಾಕಷ್ಟು ಎದುರಾಗಿ ಹೆಣ್ಣಿನ ಬಾಳಿನಲ್ಲಿ ಮಾತ್ರವೇ ಮುಳ್ಳಿನಂತೆ ಚುಚ್ಚಿ ಬದುಕಿಡೀ ನೋಯಿಸಬಲ್ಲವು. ತಾನು ಹೆತ್ತ ಮಗುವನ್ನು ಸ್ವಸಂತೋಷದಿಂದ ಆಕೆ ತ್ಯಜಿಸಬಲ್ಲಳೇ? ಅವಳ ಮಾನಸಿಕ ಹಿಂಸೆ-ಒತ್ತಡಗಳೇನು? ಕೇವಲ ಹೆಣ್ಣಿಗೆ ಮಾತ್ರ ಸಾಮಾಜಿಕ ಕಟ್ಟುಪಾಡುಗಳಿದ್ದು ಗಂಡಿಗೆ ಅವು ಅನ್ವಯಿಸುವುದಿಲ್ಲವೆ? ಪ್ರಗತಿಪರ ಚಿಂತನೆಯ ಲೇಖಕಿ ಸಾರಾ ಅವರು ಈ ಕಾದಂಬರಿಯಲ್ಲಿ ಇಂಥ ಕ್ಲಿಷ್ಟ ಸಾಮಾಜಿಕ ಸಮಸ್ಯೆಯನ್ನು ವಸ್ತುವನ್ನಾಗಿಸಿದ್ದಾರೆ. ಅವಿವಾಹಿತ ತಾಯಿಯೋರ್ವಳ ಸುತ್ತ ತಾನಾಗಿ ಹೆಣೆದುಕೊಳ್ಳುವ ಪಂಜರದಂಥ ವ್ಯವಸ್ಥೆಯ ಸ್ವರೂಪವನ್ನು ಪರಿಚಯಿಸಿದ್ದಾರೆ.

**ಮಾಗಿಯ ಕೋಗಿಲೆ** (ಕವನ ಸಂಕಲನ)
ಸುಬ್ರಾಯ ಚೊಕ್ಕಾಡಿ
**ಪುಟ :** ೭೦ **ಬೆಲೆ : ರೂ.** ೪೬
**ಮೌಲ್ಯ ಪ್ರಕಾಶನ,** ನಲ್ಲೂರು, ಕಾರ್ಕಳ ತಾಲೂಕು, ಉಡುಪಿ ಜಿಲ್ಲೆ - ೫೭೪ ೫೦೨



ಸಿಂಹದ ಮರಿ ಸೈನ್ಯದಂತೆ ಕೆಲವು ಎಳೆಯ ಗೆಳೆಯರು ಸೇರಿಕೊಂಡು ಹೊಸ ಪ್ರಕಾಶನವನ್ನು ಪ್ರಾರಂಭಿಸಿ ಎರಡು ಪುಸ್ತಕಗಳನ್ನಾಗಲೇ ಪ್ರಕಟಿಸಿ ಓದುಗರ ಮುಂದಿಟ್ಟಿದ್ದಾರೆ. ಬೆಳೆಯ ಸಿರಿ ಮೊಳಕೆಯಲ್ಲೆಂಬಂತೆ ಛಲ ಹಾಗೂ ಧೈರ್ಯವನ್ನಾಗಲೇ ರೂಢಿಸಿಕೊಂಡ ಈ ಬಳಗದ ಗೆಳೆಯರು ಸ್ವತಃ ಸಾಹಿತ್ಯ ಪ್ರೇಮಿಗಳು ಮಾತ್ರವಲ್ಲದೆ ಪತ್ರಿಕೆಗಳಲ್ಲೂ ಬರಹಗಾರರು. ಇಂಥ ಪ್ರಕಾಶನದ ಮೊದಲ ಕುಸುಮವಾಗಿ ನಾಡಿನ ಹಿರಿಯ ಕವಿ-ವಿಮರ್ಶಕ ಶ್ರೀ ಸುಬ್ರಾಯ ಚೊಕ್ಕಾಡಿ ಅವರ ಈ ಕವನ ಸಂಕಲನ ಪ್ರಕಟವಾಗಿದೆ. ಕನ್ನಡ ಸಾಹಿತ್ಯವು ನವ್ಯದಿಂದ ನವ್ಯೋತ್ತರ ಕಾಲವೆಂದು ಗುರುತಿಸಲ್ಪಟ್ಟ ಸಂದರ್ಭದಲ್ಲಿ ಪ್ರಸಿದ್ಧಿಗೆ ಬಂದ ಶ್ರೀ ಚೊಕ್ಕಾಡಿಯವರ ಒಂಬತ್ತನೇ ಕವಿತಾ ಸಂಗ್ರಹದಲ್ಲಿ ಒಟ್ಟು ಐವತ್ತೆರಡು ಕವಿತೆಗಳಿವೆ. ಪರಂಪರೆಯ ಸಾಹಿತ್ಯದ ಮೌಲ್ಯವನ್ನೂ ಉಳಿಸಿಕೊಂಡು ಹೊಸತನವನ್ನೂ ರೂಢಿಸಿಕೊಂಡು ಸಾಗುವ ಹೊಸ ಕಾವ್ಯದೃಷ್ಟಿಯನ್ನಿಲ್ಲಿ ಕಾಣಬಹುದು.

**ಇಂದಿರಾಕುಮಾರಿ**

# ಇಸ್ಲಾಮಿಕ್ ಮೂಲಭೂತವಾದದ ಅಪಾಯಗಳು

✧ ಐ. ಆರ್. ಪ್ರಮೋದ್

> ಮನುಷ್ಯ ನಾಗರಿಕತೆ ಮುನ್ನಡೆದದ್ದು, ವೈಜ್ಞಾನಿಕ ರಂಗದಲ್ಲಿ ಬೃಹತ್ ಸಾಧನೆಗಳು ನಡೆದದ್ದು ಮತ್ತು ಈಗಲೂ ನಡೆಯುತ್ತಿರುವುದು ವಿಜ್ಞಾನಿಗಳು, ಸಂಶೋಧಕರು, ಜಡವಾದ ಧಾರ್ಮಿಕ ಕಟ್ಟಳೆಗಳನ್ನು ಲೆಕ್ಕಿಸದೆ ಮುನ್ನುಗ್ಗಿದ ಕಾರಣ ಎನ್ನುವುದು ಗಮನಾರ್ಹ ವಿಚಾರವಾಗಿದೆ.
> ಆಯಾ ಧರ್ಮಗಳ ಜನಸಾಮಾನ್ಯರನ್ನು ಪ್ರಜಾಸತ್ತಾತ್ಮಕವಾದ ಸಮಾನತೆಯ ಪರವಾದ ವರ್ಗ ಹೋರಾಟಗಳಿಂದ ಮತ್ತು ಚಳುವಳಿಗಳಿಂದ ಪ್ರತ್ಯೇಕವಾಗಿಡಲು ಪ್ರಯತ್ನಿಸುವ ಈ ಧಾರ್ಮಿಕ ಮೂಲಭೂತವಾದಿಗಳನ್ನು ಧಿಕ್ಕರಿಸಿಯೇ ಈ ಆಂದೋಲನಗಳು ಮುನ್ನಡೆಯಬೇಕಾಗಿದೆ.

ಇತ್ತೀಚೆಗೆ ನನ್ನ ಮುಸ್ಲಿಮ್ ಸ್ನೇಹಿತರೊಬ್ಬರು ತನ್ನ ಮಗನ ಮದುವೆಯ ಆಹ್ವಾನ ಪತ್ರಿಕೆ ನೀಡಿದರು, ಓದಿ ದಂಗಾದೆ. ಪತ್ರದಲ್ಲಿ ಮದುಮಗಳ ಹೆಸರೇ ಇರಲಿಲ್ಲ. ಇಷ್ಟು ದೊಡ್ಡ ಮುದ್ರಣ ದೋಷ ಹೇಗೆ ಕಣ್ತಪ್ಪಿನಿಂದ ಉಳಿದುಕೊಂಡಿತು ಎನ್ನುವ ಅನುಮಾನ ಕಾಡುತ್ತಿತ್ತು. ಮದುವೆಯಲ್ಲಿ ಇನ್ನೊಂದು ಆಶ್ಚರ್ಯ ಕಾದಿತ್ತು. ಇಡೀ ಮದುವೆಯ ಸಮಾರಂಭಕ್ಕೆ ಕಳೆ ನೀಡುವ ಹೆಣ್ಣುಮಕ್ಕಳ ಓಡಾಟ, ಸಂಭ್ರಮ, ಸಡಗರ ಅಲ್ಲಿ ಕಾಣಲಿಲ್ಲ. ವೇದಿಕೆಯ ಮೇಲೆ ಕೂಡ ಮದುಮಗ ಮಾತ್ರ ಇದ್ದ. ಹೆಂಗಸರನ್ನೆಲ್ಲ ಪರದೆಯ ಹಿಂದೆ ಪ್ರತ್ಯೇಕವಾಗಿ ಇಡಲಾಗಿತ್ತು. ಮದುವೆಯ ಮುಖ್ಯ ವಾಹಿನಿಯಿಂದ ಅವರು ಪ್ರತ್ಯೇಕವಾಗಿದ್ದಾರೆ ಎನ್ನುವ ಭಾವನೆ ನನ್ನಲ್ಲಿ ಮೂಡಿತು. ಕುತೂಹಲ ತಡೆಯಲಾರದೆ ನಾನು ಮದುಮಗನ ತಂದೆಯ ಹತ್ತಿರ, ಆಹ್ವಾನ ಪತ್ರಿಕೆಯಲ್ಲಿ ಮದುಮಗಳ ಹೆಸರನ್ನೇಕೆ ಮುದ್ರಿಸಲಿಲ್ಲ ಎಂದು ಕೇಳಿಯೇಬಿಟ್ಟೆ. ಅದೇನು ಅಷ್ಟು ಅಗತ್ಯವಿಲ್ಲವಲ್ಲ ಎಂಬ ಹಾರಿಕೆಯ ಉತ್ತರ ಸಿಕ್ಕಿತು.

ಮುಂದಿನ ದಿನಗಳಲ್ಲಿ ಗೊತ್ತಾಯಿತು, ಮದುಮಗನ ತಂದೆ ತಬ್ಲಿಗ್ ಎನ್ನುವ ಮುಸ್ಲಿಮ್ ಸಂಘಟನೆಯ ಸಕ್ರಿಯ ಕಾರ್ಯಕರ್ತನೆಂದು.

ಈ ಸಂಘಟನೆ ಪ್ರತಿಯೊಬ್ಬ ಮುಸ್ಲಿಮನೂ ಕುರಾನನ್ನು ನಿತ್ಯ ಪಠಣ ಮಾಡಬೇಕು, ಕುರಾನಿನ ಆದೇಶದಂತೆ ಜೀವನ ನಡೆಸಬೇಕೆಂದು ಪ್ರತಿಪಾದಿಸುತ್ತದೆ. ಮಹಿಳೆಯರು ಬುರುಕಾ ಧರಿಸದೆ ಸಾರ್ವಜನಿಕವಾಗಿ ಕಾಣಿಸಿಗಬಾರದೆಂದು ವಾದಿಸುತ್ತದೆ.

ಇದೇ ರೀತಿಯಲ್ಲಿ ಮುಸ್ಲಿಮರಲ್ಲಿ ಕ್ರಿಯಾಶೀಲವಾಗಿರುವ ಮತ್ತೊಂದು ಸಂಘಟನೆ ಜಮಾತೆ ಇಸ್ಲಾಮಿ. ಈ ಸಂಘಟನೆಯ ವತಿಯಿಂದ ಕನ್ನಡ ವಾರಪತ್ರಿಕೆಯೊಂದು ಮಂಗಳೂರಿನಿಂದ ಪ್ರಕಟವಾಗುತ್ತಿದೆ. ಈ ಸಂಘಟನೆಯು ಇಸ್ಲಾಮಿನ ಕುರಿತು ಪುಸ್ತಕಗಳನ್ನು ಪ್ರಕಟಿಸುತ್ತದೆ.

ಈ ಎಲ್ಲ ಸಂಘಟನೆಗಳೂ ಕೂಡ ಮುಸ್ಲಿಮ್ ಮಹಿಳೆಯರು ಬುರುಕಾ ಹಾಕಿಕೊಳ್ಳಬೇಕೆಂದು ಪ್ರತಿಪಾದಿಸುತ್ತವೆ, ಮುಸ್ಲಿಮರಲ್ಲಿರುವ ಬಹುಪತ್ನಿತ್ವವನ್ನು ಸಮರ್ಥಿಸುತ್ತವೆ.

ಪ್ರಾಯಶಃ ಈ ರೀತಿಯ ವ್ಯಾಪಕ ಪ್ರಭಾವದಿಂದಾಗಿ ಮಲೆನಾಡಿನ ಪುಟ್ಟ ಪೇಟೆಯಾದ ನನ್ನ ಊರಿನಲ್ಲಿ ಈಗ ಕಪ್ಪು ಬುರುಕದೊಳಗೆ ಓಡಾಡುವ ಮಹಿಳೆಯರ ಸಂಖ್ಯೆ ಜಾಸ್ತಿಯಾಗಿದೆ. ಈ ಮೊದಲು ನಮ್ಮಲ್ಲಿ ಮುಸ್ಲಿಮ್ ಮಹಿಳೆಯರು ನರ್ಸ್‌ಗಳಾಗಿ, ಅಧ್ಯಾಪಕಿಯರಾಗಿ, ನೌಕರರಾಗಿ, ಕಾರ್ಮಿಕರಾಗಿ ಮಾಮೂಲಿನಂತೆ ಓಡಾಡುತ್ತಿದ್ದರು. ಅವರ ಮಾನಕ್ಕೇನೂ ಚ್ಯುತಿ ಬಂದಿರಲಿಲ್ಲ. ಆದರೆ ಬುರುಕಾ ಧರಿಸಿ ಅತಿ ಮಡಿವಂತಿಕೆಗೆ ಇಳಿದಿರುವುದು ಇತ್ತೀಚಿನ ವಿದ್ಯಮಾನ. ಜಾಗತೀಕರಣದ ಪ್ರಭಾವದಿಂದಾಗಿ ಸಮಾಜ ಜೀವನದ ಎಲ್ಲ ವಲಯಗಳಲ್ಲಿ ಅತಿ ವೇಗದ ಬದಲಾವಣೆಗಳು ನಡೆಯುತ್ತಿರುವ ಇಂದಿನ ಸಂದರ್ಭದಲ್ಲಿ ಮುಸ್ಲಿಮರಲ್ಲಿ ನಡೆಯುತ್ತಿರುವ ಈ ಹಿಮ್ಮುಖ ಚಲನೆ ಗಮನಾರ್ಹವಾಗಿದೆ. ಈ ಹಿನ್ನೆಲೆಯಲ್ಲಿ ಪ್ರಾಯಶಃ ಇಂಗ್ಲೆಂಡಿನಲ್ಲಿ ಜೂನ್ ೨೦೦೪ರಲ್ಲಿ ನಡೆದ ಘಟನೆಯೊಂದು ಮುಖ್ಯವಾಗಬಹುದು.

ಏಷಿಯನ್ ಸಂಜಾತ ಮುಸ್ಲಿಮ್ ವಿದ್ಯಾರ್ಥಿಗಳು ಶೇಕಡ ಎಂಭತ್ತರಷ್ಟಿರುವ ಇಂಗ್ಲೆಂಡಿನ ಒಂದು ಶಾಲೆಯಲ್ಲಿ ಎಲ್ಲಾ ವಿದ್ಯಾರ್ಥಿಗಳು ಒಂದೇ ರೀತಿಯ ಸಮವಸ್ತ್ರ ಧರಿಸಬೇಕೆಂದು ನಿಯಮವಿತ್ತು. ವಿದ್ಯಾರ್ಥಿಗಳ ಧರ್ಮ ಮತ್ತು ಸಾಂಸ್ಕೃತಿಕ ಭಾವನೆಗಳನ್ನು ಗೌರವಿಸಿ ಸಮುದಾಯದ ಮುಖ್ಯಸ್ಥರೊಡನೆ ಸಮಾಲೋಚಿಸಿಯೇ ಈ ಸಮವಸ್ತ್ರದ ಕುರಿತು ಶಾಲಾ ಆಡಳಿತ ಮಂಡಳಿ ನಿರ್ಧರಿಸಿತ್ತು.

ಆದರೆ ಶಮೀನ ಬೇಗಂ ಎನ್ನುವ ವಿದ್ಯಾರ್ಥಿನಿಯ ಕುಟುಂಬದವರು ಆಕೆ ಬುರುಕಾದಂತೆ ಇಡೀ ದೇಹವನ್ನು ಮುಚ್ಚುವ 'ಜೀಜಾಬ್' ಉಡುಪು ಧರಿಸಲು ಅನುಮತಿ ನೀಡಬೇಕೆಂದು ಒತ್ತಾಯಿಸಿದರು. ಆದರೆ ಶಾಲೆಯ ಮುಖ್ಯಸ್ಥರು ಈ ಬೇಡಿಕೆಯನ್ನು ನಿರಾಕರಿಸಿದರು. ಇನ್ನಿತರ ವಿದ್ಯಾರ್ಥಿನಿಯರಂತೆ ಆಕೆಯೂ ಕೂಡ ಸಮವಸ್ತ್ರ ಧರಿಸಬೇಕೆಂದು ಆದೇಶಿಸಿದರು.

ಶಮೀನ ಬೇಗಂನ ಪೋಷಕರು ಆಕೆಯನ್ನು ಶಾಲೆಗೆ ಕಳುಹಿಸುವುದನ್ನು ನಿಲ್ಲಿಸಿಬಿಟ್ಟರು. ನ್ಯಾಯಾಲಯದ ಮುಂದೆ ತಮ್ಮ ಅಹವಾಲನ್ನು ಕೊಂಡೊಯ್ದರು.

ಜೂನ್ ೨೦೦೪ರಲ್ಲಿ ಲಂಡನ್ನಿನ ಹೈಕೋರ್ಟ್, ಶಾಲಾ ಸಮವಸ್ತ್ರವನ್ನು ಎಲ್ಲ ವಿದ್ಯಾರ್ಥಿಗಳು ಧರಿಸಬೇಕೆಂಬ ಶಾಲಾ ಆಡಳಿತ ಮಂಡಳಿ ನಿರ್ದೇಶನವು, ಬಹು ಸಂಸ್ಕೃತಿಯ ಮಿಶ್ರ ಶ್ರದ್ಧೆಯುಳ್ಳ ವಿದ್ಯಾರ್ಥಿಗಳಿರುವ ಒಂದು ಶಾಲೆಯಲ್ಲಿ ಪಾಲಿಸಬೇಕಾದ ಧರ್ಮನಿರಪೇಕ್ಷವಾದ ಆದೇಶವಾಗಿದೆ ಮತ್ತು ವಿದ್ಯಾರ್ಥಿಗಳ ಮಾನವ ಹಕ್ಕುಗಳಿಗೆ ಅದು ಚ್ಯುತಿ ತರುವುದಿಲ್ಲ ಎಂದು ತೀರ್ಪು ನೀಡಿತು. ಬಳಿಕ ಶಾಲೆಯ ಆಡಳಿತ ಮಂಡಳಿ ಶಮೀನಾಳನ್ನು ಶಾಲೆಗೆ ಮರಳಲು ವಿನಂತಿಸಿತು. ಆದರೆ 'ಇಸ್ಲಾಮಿ' ಫೋಬಿಯದಿಂದ ಈ ಶಾಲೆ ನರಳುತ್ತಿದೆ ಎಂದು ಆಪಾದಿಸಿದ ಪೋಷಕರು ಆಕೆಯನ್ನು ಶಾಲೆಗೆ ಕಳುಹಿಸಲು ನಿರಾಕರಿಸಿದರು.

ಈ ಪ್ರಕರಣದ ಸವಿವರ ವರದಿಯನ್ನು ನೀಡಿದಾತ (ಹಿಂದೂ ದಿನಪತ್ರಿಕೆ ೨೪-೬-೨೦೦೪) ಪತ್ರಕರ್ತ ಹಸನ್ ಸರೂರ್,

''ಅವಕಾಶ ಸಿಕ್ಕರೆ ಹದಿವಯಸ್ಸಿನ ಸಮವಯಸ್ಕರಾದ ತನ್ನ ಇನ್ನಿತರೆ ಸಹಪಾಠಿಗಳೊಡನೆ ಶಾಲೆಗೆ ಹೋಗಿ ಆಟದ ಮೈದಾನದಲ್ಲಿ ನಕ್ಕು ನಲಿಯಲು ಶಮೀನ ಬಯಸುತ್ತಾಳೆ. ಆದರೆ ಆಕೆ ಶಾಲೆಗಳಲ್ಲಿ ಇಸ್ಲಾಮಿಕ್ ಉಡುಪು ಧರಿಸಲು ಅನುಮತಿ ನೀಡಬೇಕೆಂದು ಆಗ್ರಹಿಸುವ ಉಗ್ರವಾದಿ ಗುಂಪೊಂದರ ಪ್ರಚಾರದ ದಾಳವಾಗಿದ್ದಾಳೆ. ಆಕೆಯ ಅಣ್ಣ ಈ ಗುಂಪಿಗೆ ಸೇರಿದ್ದಾನೆ. ಈ ಗುಂಪಿನ ಚಟುವಟಿಕೆಯನ್ನು ಜರ್ಮನಿಯಲ್ಲಿ ಮತ್ತು ಪಶ್ಚಿಮ ಏಷಿಯಾದ ಕೆಲವು ರಾಷ್ಟ್ರಗಳಲ್ಲಿ ನಿಷೇಧಿಸಲಾಗಿದೆ.

''ಶಮೀನ ಬೇಗಂ ಪ್ರಕರಣ ಬಹು ಸಂಸ್ಕೃತಿಯ ಬಹು ಜನಾಂಗವುಳ್ಳ ರಾಷ್ಟ್ರವೊಂದರ ಸರ್ಕಾರ, ತನ್ನ ಸಮಾಜದ ಸಾಮಾಜಿಕ ತಳಹದಿಯನ್ನು ವಿಚಲಿತಗೊಳಿಸದೆ ತನ್ನ ಪ್ರಜೆಗಳ ಸಾಂಸ್ಕೃತಿಕ, ಧಾರ್ಮಿಕ ಹಕ್ಕುಗಳನ್ನು ರಕ್ಷಿಸುವ ಪರಿ ಹೇಗೆ ಎನ್ನುವ ಮೂಲಭೂತ ಪ್ರಶ್ನೆಯನ್ನು ಎತ್ತುತ್ತದೆ'' ಎನ್ನುತ್ತಾರೆ.

ಬರೇ ಉಡುಪಿನ ನೆಪದಲ್ಲಿ ವಿದ್ಯಾರ್ಥಿನಿಯು ಶಿಕ್ಷಣ ಪಡೆಯುವ ಅವಕಾಶವನ್ನೇ ನಿರಾಕರಿಸುವ ಈ ಮನೋಭಾವ ಇಂಗ್ಲೆಂಡಿನಂತಹ ಅತ್ಯಂತ ಮುಂದುವರಿದ ಕೈಗಾರಿಕಾ ಬಂಡವಾಳಶಾಹಿ ಸಮಾಜದಲ್ಲಿ ಬೇರೂರಿದೆ ಎಂದಾದರೆ ಭಾರತದಂತಹ ದೇಶಗಳಲ್ಲಿ ಧಾರ್ಮಿಕ ಮೂಲಭೂತವಾದ ಹೆಡೆಯೆತ್ತುತ್ತಿರುವುದರಲ್ಲಿ ಆಶ್ಚರ್ಯವಿಲ್ಲ.

ಸೋವಿಯತ್ ಒಕ್ಕೂಟ ಮತ್ತು ಪೂರ್ವ ಯುರೋಪ್‌ನ ಸಮಾಜವಾದಿ ರಾಷ್ಟ್ರಗಳಲ್ಲಿ ಸಮಾಜವಾದಿ ವ್ಯವಸ್ಥೆ ಪತನಗೊಂಡ ಬಳಿಕ ಸಾಮ್ರಾಜ್ಯಶಾಹಿಯು ಜಗತ್ತಿನ ಪೊಲೀಸ್‌ನಂತೆ ವರ್ತಿಸುತ್ತಿದೆ. ಈ ಬಲಾಢ್ಯ ದೇಶಗಳ ಆಕ್ರಮಣಕ್ಕೆ ಉತ್ತರವಾಗಿ ಎಲ್ಲಾ ದೇಶಗಳಲ್ಲಿ ಬಲಪಂಥೀಯ ಧಾರ್ಮಿಕ ಮೂಲಭೂತವಾದ ಸಕ್ರಿಯವಾಗುತ್ತಿದೆ.

ಭಾರತದಲ್ಲಿ ಉಗ್ರ ಹಿಂದುತ್ವವನ್ನು ಪ್ರತಿಪಾದಿಸುವ ಸಂಘ ಪರಿವಾರ ನಡೆಸಿದ ಹಿಂಸಾಚಾರ ಹತ್ಯಾಕಾಂಡ ಇವುಗಳಿಂದ ತತ್ತರಿಸಿದ ಮುಸ್ಲಿಮ್ ಜನಸಾಮಾನ್ಯರು ತಮ್ಮ ಧರ್ಮದ ಮೂಲಭೂತವಾದಿ

ಗಳೆಡೆಗೆ ಆಕರ್ಷಿತರಾಗುವುದು ಸಹಜ.

ಎಲ್ಲ ಧಾರ್ಮಿಕ ಮೂಲಭೂತವಾದದಂತೆ, ಮುಸ್ಲಿಮ್ ಮೂಲಭೂತವಾದವೂ ಕೂಡ ಮಹಿಳಾ ಸ್ವಾತಂತ್ರ್ಯ, ಸಮಾನತೆಯನ್ನು ನಿರಾಕರಿಸುತ್ತಿದೆ. ಪ್ರಜಾ ಪ್ರಭುತ್ವದ ಸಮಾನತೆಯ ಮೌಲ್ಯಗಳನ್ನು ಧಿಕ್ಕರಿಸುತ್ತಿದೆ. ಧರ್ಮ ಗ್ರಂಥಗಳೂ ಅವುಗಳನ್ನು ಬೋಧಿಸುವ ವಿವರಣೆಗಳೂ ಪ್ರಶ್ನಾತೀತವಾದ ಕಾಲಾತೀತವಾದ ಪರಮ ಸತ್ಯಗಳು ಎನ್ನುತ್ತವೆ.

ಬಹುಪತ್ನಿತ್ವ ವ್ಯಾಪಕವಾಗಿದ್ದ ಕಾಲದಲ್ಲಿ ನಾಲ್ಕು ಮದುವೆಗೆ ಮುಸ್ಲಿಮ್ ವಿವಾಹವನ್ನು ನಿರ್ಬಂಧಿಸಿದ ಅತ್ಯಂತ ಪ್ರಗತಿಪರ ಗ್ರಂಥ ಕುರಾನ್ ಎನ್ನುತ್ತಾರೆ ಇಸ್ಲಾಮಿಕ್ ಮೂಲಭೂತವಾದಿಗಳು.

ಹೆಂಗಸರು ನೈಸರ್ಗಿಕವಾಗಿಯೇ ದುರ್ಬಲರು, ಚಂಚಲೆಯರು ; ಹಾಗಾಗಿ ಅವರಿಗೆ ಗೃಹಕೃತ್ಯ, ಕುಟುಂಬ ಪೋಷಣೆ ಮತ್ತು ಮಕ್ಕಳನ್ನು ಹೆರುವ ಕರ್ತವ್ಯಗಳಿಗೆ ಮಾತ್ರ ಸೀಮಿತಗೊಳಿಸಿದೆ. ಆಸ್ತಿಯಲ್ಲಿ ಮಹಿಳೆಯರಿಗೆ ಪಾಲು ನೀಡುವ ಪ್ರಥಮ ಧರ್ಮ ಇಸ್ಲಾಮ್ ಎಂದೂ ವಾದಿಸುತ್ತಾರೆ.

ಕುರಾನ್ ರಚಿಸಲ್ಪಟ್ಟ ಕಾಲದಲ್ಲಿ ಮಹಿಳೆಯರ ಕುರಿತು ಈ ದೃಷ್ಟಿಕೋನ ಹೋಲಿಕೆಯಲ್ಲಿ ಪ್ರಗತಿಪರವಾಗಿದ್ದಿರಬಹುದು.

ಆದರೆ ಆ ಬಳಿಕ ಮಹಿಳೆಯರ ಹಕ್ಕು ಸ್ವಾತಂತ್ರ್ಯಗಳ ಬಗೆಗಿನ ಒಟ್ಟು ಪರಿಕಲ್ಪನೆಯೇ ಬದಲಾಯಿತು. ಔದ್ಯಮಿಕ ಕ್ರಾಂತಿ, ಅಮೆರಿಕಾದಲ್ಲಿ ನಡೆದ ಹೋರಾಟ, ಫ್ರೆಂಚ್ ಕ್ರಾಂತಿ, ಅಕ್ಟೋಬರ್ ಮಹಾಕ್ರಾಂತಿ, ಚೈನಾದ ಕ್ರಾಂತಿ, ವಸಾಹತು ಗಳಲ್ಲಿ ನಡೆದ ವಿಮೋಚನಾ ಚಳುವಳಿಗಳ ಹೋರಾಟಗಳ ಪರಿಣಾಮ ಮಹಿಳೆಯು ಪುರುಷರಿಗೆ ಸರಿಸಮಾನ ಮತ್ತು ಆಕೆಗೆ ಬದುಕಿನ ಎಲ್ಲ ರಂಗದಲ್ಲಿ ಸಮಾನಳಾಗಿ ಭಾಗ ವಹಿಸುವುದು ಅಗತ್ಯ ಎನ್ನುವ ತತ್ವ ಅಂಗೀಕರಿಸಲ್ಪಟ್ಟು ಅವು ಸಮಾಜವಾದಿ ರಾಷ್ಟ್ರಗಳಲ್ಲಿ ಜಾರಿಗೂ ಬಂದವು.

ಆದರೆ ಇಸ್ಲಾಮಿಕ್ ಮೂಲಭೂತವಾದಿಗಳು ಸಮರ್ಥಿಸುವ ಬಹುಪತ್ನಿತ್ವ, ಬುರುಕಾ, ಗೃಹಕೃತ್ಯಕ್ಕೆ ಮಹಿಳೆಯರು ಸೀಮಿತವಾಗಬೇಕೆನ್ನುವ ಆಗ್ರಹಗಳ ಮೂಲ ದಲ್ಲಿ ಆಕೆ ಅಸಮಾನಳು ಎಂಬ ಮನೋಭಾವವಿರುವುದು ನಿಚ್ಚಳ. ಕುರಾನ್ ಕೂಡ ಸಾಕ್ಷಿಯ ವಿಚಾರದಲ್ಲಿ ಓರ್ವ ಮಹಿಳೆಯ ಸಾಕ್ಷ್ಯ ಪುರುಷನ ಸಾಕ್ಷ್ಯದ ಅರ್ಧಕ್ಕೆ ಸಮ ಎನ್ನುತ್ತದೆ. ಓರ್ವ ಗಂಡಸು ಒಂದಕ್ಕಿಂತ ಹೆಚ್ಚು ಮದುವೆ ಯಾಗಬಹುದು, ಆದರೆ ಮಹಿಳೆಯು ಈ ರೀತಿ ಸಂಪರ್ಕ ಹೊಂದಿದರೆ ಅದು ವ್ಯಭಿಚಾರ ಎಂದು ಪರಿಗಣಿಸಿ ಮರಣ ದಂಡನೆಯಂಥ ಕ್ರೂರ ಶಿಕ್ಷೆಯನ್ನು ವಿಧಿಸುತ್ತದೆ. ಆದರೆ ಕುರಾನ್ ಬಹುಪತ್ನಿತ್ವವನ್ನು ಪ್ರೋತ್ಸಾಹಿಸುವುದಿಲ್ಲ ಎಂದು ಸಾಧಾರಪೂರ್ವಕವಾಗಿ ಅಸ್ಗರ್ ಅಲಿ ಇಂಜಿನಿಯರ್ ವಾದಿಸುತ್ತಾರೆ. ಹಲವು ಮುಸ್ಲಿಮ್ ರಾಷ್ಟ್ರಗಳು ಬಹುಪತ್ನಿತ್ವ ವನ್ನು ನಿಷೇಧಿಸುವ ಕಾನೂನನ್ನು ಜಾರಿಗೊಳಿಸಿವೆ.

ಮುಸ್ಲಿಮ್ ಮೂಲಭೂತವಾದಿಗಳು ಮಹಿಳೆಯರು ಕಡ್ಡಾಯವಾಗಿ ಬುರುಕಾ ಧರಿಸಬೇಕೆಂದು ಆಗ್ರಹಿಸು ತ್ತಾರೆ. ಕಾಶ್ಮೀರದಲ್ಲಿ ಕೆಲವು ಉಗ್ರವಾದಿ ಸಂಘಟನೆಗಳು ಮುಸ್ಲಿಮ್ ಮಹಿಳೆಯರು ಬುರುಕಾ ಧರಿಸಬೇಕೆಂದು ದಾಂಧಲೆ ನಡೆಸಿದ್ದುವು.

ಬುರುಕಾ ಧರಿಸುವುದನ್ನು ಸಮರ್ಥಿಸಲು ಮೂಲ ಭೂತವಾದಿಗಳು, ಪಾಶ್ಚಾತ್ಯ ದೇಶಗಳಲ್ಲಿ ವ್ಯಾಪಕವಾಗಿರುವ ಲೈಂಗಿಕ ಸ್ವೇಚ್ಛಾಚಾರ, ಕುಟುಂಬ ಮೌಲ್ಯಗಳ ಪತನ ಇವುಗಳೆಡೆಗೆ ಬೊಟ್ಟುಮಾಡಿ ತೋರಿಸುತ್ತಾರೆ. ಹಾಗಾಗಿ ಆಯ್ಕೆ ಸರಳವಾದದ್ದು. ಒಂದೋ ಲೈಂಗಿಕ ಅಧಃಪತನ ! ಅಥವಾ ಬುರುಕಾ ! ಇದು ಅಮೆರಿಕಾದ ಅಧ್ಯಕ್ಷ ಜಾರ್ಜ್ ಬುಷ್ ಸೆಪ್ಟೆಂಬರ್ ಹನ್ನೊಂದರ ಆಕ್ರಮಣದ ನಂತರ, ''ನೀವು ಒಂದೋ ನಮ್ಮೊಡನೆ ಇರಬೇಕು. ಇಲ್ಲದಿದ್ದರೆ ನೀವು ಭಯೋತ್ಪಾದಕರ ಪರ'' ಎಂದು ಪರಿಗಣಿಸ ಲಾಗುತ್ತದೆ, ಎಂದು ಗುಡುಗಿದ್ದನ್ನು ನೆನಪಿಗೆ ತರುತ್ತದೆ.

ಆದರೆ ಮುಸ್ಲಿಮ್ ಮೂಲಭೂತವಾದಿಗಳು ಮಹಿಳೆ ಯರನ್ನು ಆರ್ಥಿಕ ಚಟುವಟಿಕೆಗಳಿಂದ, ಸಾಮಾಜಿಕ ಬದುಕಿನಿಂದ ಪ್ರತ್ಯೇಕಗೊಳಿಸಿ, ಗೃಹಕೃತ್ಯಗಳಿಗೆ ಸೀಮಿತ ಗೊಳಿಸಿ, ಅವರು ಗಂಡನನ್ನು ಮತ್ತು ಮಕ್ಕಳನ್ನು ಆರೈಕೆ ಮಾಡುತ್ತ ದಿನ ದೂಡುವುದನ್ನು ಆದರ್ಶದಾಯಕ ಎಂದು ಬಣ್ಣಿಸುತ್ತಾರೆ.

ಋತುಸ್ರಾವದಂಥ ನೈಸರ್ಗಿಕ ಸಹಜ ಕ್ರಿಯೆಯನ್ನು 'ಅಶುದ್ಧ' ಎಂದು ಪರಿಗಣಿಸಿ ಹಲವು ಕಟ್ಟುಪಾಡುಗಳನ್ನು ವಿಧಿಸುತ್ತಾರೆ.

ಬುರುಕಾ ಧರಿಸದೆಯೇ ಸಮರ್ಪಕ ಉಡುಪು ತೊಡುವ ಮೂಲಕ ಮಹಿಳೆಯರು ಸದಾಚಾರವನ್ನು ಪಾಲಿಸಬಹು ದೆಂಬುದನ್ನು ಮೂಲಭೂತವಾದಿಗಳು ನಿರ್ಲಕ್ಷಿಸುತ್ತಾರೆ.

ಮಹಿಳೆಯ ವಿಮೋಚನೆ ಸಾಧ್ಯವಾಗಬೇಕಾದರೆ ಆಕೆ ಉತ್ಪಾದನೆಯ ಆರ್ಥಿಕ ಮತ್ತು ಸಾಮಾಜಿಕ ಚಟುವಟಿಕೆ ಗಳಲ್ಲಿ ಪುರುಷನೊಂದಿಗೆ ಸರಿಸಮಾನವಾಗಿ ಭಾಗವಹಿಸ ಬೇಕೆಂದು ಲೆನಿನ್ ಪ್ರತಿಪಾದಿಸಿದ್ದ

ಮುಸ್ಲಿಮ್ ಮೂಲಭೂತವಾದಿಗಳು, ದೇವರು ಜಗತ್ತಿನ ಆದಿಯಲ್ಲಿ ಆದಮನನ್ನು ಮಣ್ಣಿನಿಂದ ಸೃಷ್ಟಿಸಿ ಅದಕ್ಕೆ ಗಾಳಿಯೂದಿ ಚೈತನ್ಯ ನೀಡಿದ ಎಂಬ ಕುರಾನಿನ ವಿವರಣೆಯನ್ನೇ ವೈಜ್ಞಾನಿಕ ಸತ್ಯ ಎಂದು ಪ್ರತಿಪಾದಿಸುತ್ತಾರೆ.

ಸ್ವಾರಸ್ಯವೆಂದರೆ ಕ್ರಿಶ್ಚಿಯನ್ ಧರ್ಮಾಂಧರು ಕೂಡ ಜೀವದ ಉಗಮ ಮತ್ತು ವಿಕಾಸದ ಕುರಿತು ಡಾರ್ವಿನ್ನನ ತತ್ತ್ವವನ್ನು ತಿರಸ್ಕರಿಸಿ ಬೈಬಲಿನಲ್ಲಿ ಉಲ್ಲೇಖಿಸಿದಂತೆ ದೇವರು ಜಗತ್ತನ್ನು ಮತ್ತು ಮನುಷ್ಯನನ್ನು ಸೃಷ್ಟಿಸಿದ ಎಂಬ ವಿವರಣೆಯನ್ನು ಶಾಲೆಯ ಪಠ್ಯದಲ್ಲಿ ಸೇರಿಸಬೇಕೆಂದು ಒಂದು ಪ್ರಬಲ ಚಳುವಳಿಯನ್ನೇ ನಡೆಸಿದ್ದಾರೆ. ಅಮೆರಿಕಾದ ಕೆಲವು ರಾಜ್ಯಗಳಲ್ಲಿ ಅವರು ಈ ನಿಟ್ಟಿನಲ್ಲಿ ಯಶಸ್ವಿಯಾಗಿದ್ದಾರೆ.

ಮುಸ್ಲಿಮ್ ಮೂಲಭೂತವಾದಿಗಳು ಕುರಾನಿನಲ್ಲಿ ಉಲ್ಲೇಖಿಸಿರುವ ಎಲ್ಲವೂ ಕೂಡ ಅಕ್ಷರಶಃ ಸತ್ಯ ಮತ್ತು ಅದು ಸಾರುವ ತತ್ವಗಳು ಕಾಲಾತೀತವಾದ ಸಾರ್ವತ್ರಿಕ ಮೌಲ್ಯಗಳು ಎನ್ನುತ್ತಾರೆ. ಕುರಾನಿಗೆ ಹೊರತಾಗಿ, ವಿರೋಧವಾಗಿ ಅಥವಾ ಅದನ್ನು ಮೀರಿದ ಯಾವ ಸತ್ಯವೂ ಸಾಧ್ಯವಿಲ್ಲ ಮತ್ತು ಸಾಧುವಲ್ಲ ಎಂಬ ಅತಿರೇಕದ ವಿವರಣೆಯನ್ನು ನೀಡುತ್ತಾರೆ.

ಮುಸ್ಲಿಮ್ ಮೂಲಭೂತವಾದಿಗಳು ಅವರ ಚಾರಿತ್ರಿಕ ನಿರ್ದಿಷ್ಟತೆಯನ್ನು ಮರೆಮಾಚಿ ಕುರಾನನ್ನು ಅಲ್ಲಾಹನಿಂದ ಅವತೀರ್ಣಗೊಂಡ ಗ್ರಂಥ ಎಂದು ವರ್ಣಿಸುತ್ತಾರೆ :

''ದೇವರನ್ನು ಗುರುತಿಸಲು ಸಹಾಯಕವಾಗದ ಜ್ಞಾನವು ಜ್ಞಾನವೇ ಅಲ್ಲ; ಮಾನವನು ಆ ಜ್ಞಾನಕ್ಕೆ ಎಂತಹ ಉತ್ತಮ ಹೆಸರಿಟ್ಟರೂ ಸರಿ. ನೈಜ ಜ್ಞಾನವು ದೇವರನ್ನು ಗುರುತಿಸಬಲ್ಲ, ಅವನ ಇಷ್ಟಾನಿಷ್ಟಗಳನ್ನು ಅರಿಯಬಲ್ಲ ಮತ್ತು ಜೀವನದ ಎಲ್ಲ ರಂಗಗಳಲ್ಲೂ ಅವನ ಆಜ್ಞೆ ಆದೇಶ ಗಳಿಗೆ ಬದ್ಧವಾಗಿ ಜೀವಿಸುವಂತೆ ಮಾಡುವ ಜ್ಞಾನವೇ ಆಗಿದೆ. ಅದು ದೇವನಿಂದ ಪ್ರವಾದಿಗಳ ಮೂಲಕ ಬಂದ ಜ್ಞಾನವೇ ಆಗಿದೆ. ಅದರ ಕೊನೆಯ ಆವೃತ್ತಿಯೇ ಪವಿತ್ರ ಕುರಾನ್ ಆಗಿದೆ'' (ಸನ್ಮಾರ್ಗ ವಾರಪತ್ರಿಕೆ, ಸೆಪ್ಟೆಂಬರ್ ೧೨-೧೮, ೨೦೦೪).

ಆದರೆ ಕುರಾನ್ ಕೂಡ ಜಗತ್ತಿನ ಇತಿಹಾಸದಲ್ಲಿ ಒಂದು ನಿರ್ದಿಷ್ಟ ಕಾಲಘಟ್ಟದಲ್ಲಿ ಮೂಡಿಬಂದ ಒಂದು ಕೃತಿ. ಆ ಕಾಲದ ಸಮಾಜದ ಛಾಪು ಅದರ ಮೇಲಿದೆ. ಆದುದರಿಂದ ಈ ಗ್ರಂಥದ ಚಾರಿತ್ರಿಕ ಮಹತ್ವವನ್ನು ಅರಿತುಕೊಳ್ಳಲು ಪ್ರಯತ್ನಿಸಬೇಕೇ ಹೊರತು ಅದರ ಅಕ್ಷರಶಃ ಪಾಲನೆ ಸಾಧ್ಯವಾಗುವುದಿಲ್ಲ ಎಂಬ ವಾಸ್ತವವನ್ನು ಮುಸ್ಲಿಮ್ ಮೂಲಭೂತವಾದಿಗಳು ತಿರಸ್ಕರಿಸುತ್ತಾರೆ. ಬದಲಾದ ಪರಿಸ್ಥಿತಿಯಲ್ಲಿ ಸಾಮಾಜಿಕ ಜೀವನದ ಹಲವು ಸಂಗತಿಗಳ ಬಗ್ಗೆ ಕುರಾನಿನಲ್ಲಿ ನಿರ್ದಿಷ್ಟ ಪ್ರಸ್ತಾಪವಿಲ್ಲ. ಏಕೆಂದರೆ ಅಂದಿನ ಸಮಾಜ ಈ ಪರಿಸ್ಥಿತಿಯನ್ನು ಎದುರಿಸು ತ್ತಿರಲಿಲ್ಲ. ಹಾಗಾಗಿ ಧರ್ಮ ಪಂಡಿತರು ಒಬ್ಬೊಬ್ಬರೂ ತಮ್ಮ ಮೂಗಿನ ನೇರಕ್ಕೆ ಕುರಾನಿನ ವಿವರಣೆಗಳ ಬಗ್ಗೆ ವ್ಯಾಖ್ಯಾನಗಳನ್ನು ನೀಡುತ್ತಾರೆ.

ಮನುಷ್ಯ ನಡೆಸುವ ಎಲ್ಲ ವೈಜ್ಞಾನಿಕ ಆವಿಷ್ಕಾರಗಳು ಸಂಶೋಧನೆಗಳು ಧರ್ಮಕ್ಕೆ, ದೈವಾಜ್ಞೆಗೆ ಅಧೀನವಾಗಿರ ಬೇಕೆಂಬ ಮುಸ್ಲಿಮ್ ಮೂಲಭೂತವಾದಿಗಳ ನಿಲುವು ಮಧ್ಯಯುಗದ ಪ್ರಗತಿವಿರೋಧೀ ಪುರೋಹಿತಶಾಹಿಯ ಅಮಾನವೀಯ ಕಟ್ಟಾಜ್ಞೆಗಳನ್ನು ನೆನಪಿಗೆ ತರುತ್ತದೆ.

ಹಿಂದೂ ಸನಾತನಿಗಳೂ ಕೂಡ ವೇದಗಳನ್ನು ಅಪೌರುಷೇಯ ಎಂದು ಬಣ್ಣಿಸುತ್ತಾರೆ.

ಬಹುಪತ್ನಿತ್ವವನ್ನು ಸಮರ್ಥಿಸಿ ವಿವಾಹ ಸಂಬಂಧ ಗಳಲ್ಲಿ ಮಹಿಳೆಯ ಪರವಾದ ಸುಧಾರಣೆಗಳನ್ನು ತರಲು ಉಗ್ರವಾಗಿ ವಿರೋಧಿಸುತ್ತಿರುವ ಮುಸ್ಲಿಮ್ ಮೂಲಭೂತ ವಾದಿಗಳಂತೆಯೇ ೧೯೫೫ರಲ್ಲಿ ನಮ್ಮ ದೇಶದಲ್ಲಿ ಹಿಂದೂ ವಿವಾಹ ಕಾಯಿದೆಯ ಮೂಲಕ ಏಕಪತ್ನಿ ವಿವಾಹವನ್ನು ಕಡ್ಡಾಯಗೊಳಿಸಿದಾಗ ರಾಷ್ಟ್ರೀಯ ಸ್ವಯಂ ಸೇವಕ ಸಂಘ ಈ ಬದಲಾವಣೆಯನ್ನು ತೀವ್ರವಾಗಿ ವಿರೋಧಿಸಿತು. ದೆಹಲಿಯಲ್ಲಿಯೇ ಹಲವೆಡೆಗಳಲ್ಲಿ ಈ ಸುಧಾರಣೆಯನ್ನು ಅವರು ವಿರೋಧಿಸಿ ಸಭೆ ನಡೆಸಿದರು ಎನ್ನುವುದನ್ನು ರಾಮಚಂದ್ರ ಗುಹಾ ಹಿಂದೂ ಪತ್ರಿಕೆಯಲ್ಲಿ ಪ್ರಕಟವಾದ ಒಂದು ಲೇಖನದಲ್ಲಿ ವಿವರಿಸುತ್ತಾರೆ.

ಮನುಷ್ಯ ನಾಗರಿಕತೆ ಮುನ್ನಡೆದದ್ದು, ವೈಜ್ಞಾನಿಕ ರಂಗದಲ್ಲಿ ಬೃಹತ್ ಸಾಧನೆಗಳು ನಡೆದದ್ದು ಮತ್ತು ಈಗಲೂ ನಡೆಯುತ್ತಿರುವುದು ವಿಜ್ಞಾನಿಗಳು, ಸಂಶೋಧಕರು, ಜಡವಾದ ಧಾರ್ಮಿಕ ಕಟ್ಟಳೆಗಳನ್ನು ಲೆಕ್ಕಿಸದೆ ಮುನ್ನುಗ್ಗಿದ ಕಾರಣ ಎನ್ನುವುದು ಗಮನಾರ್ಹ ವಿಚಾರವಾಗಿದೆ.

ಆಯಾ ಧರ್ಮಗಳ ಜನಸಾಮಾನ್ಯರನ್ನು ಪ್ರಜಾಸತ್ತಾತ್ಮಕ ವಾದ ಸಮಾನತೆಯ ಪರವಾದ ವರ್ಗ ಹೋರಾಟಗಳಿಂದ ಮತ್ತು ಚಳುವಳಿಗಳಿಂದ ಪ್ರತ್ಯೇಕವಾಗಿಡಲು ಪ್ರಯತ್ನಿಸುವ ಈ ಧಾರ್ಮಿಕ ಮೂಲಭೂತವಾದಿಗಳನ್ನು ಧಿಕ್ಕರಿಸಿಯೇ ಈ ಆಂದೋಲನಗಳು ಮುನ್ನಡೆಯಬೇಕಾಗಿದೆ.

ಐ. ಆರ್. ಪ್ರಮೋದ್
ವಕೀಲರು, ವಿರಾಜಪೇಟೆ - ೫೭೧ ೨೧೮

**ಭಾ**ರತದ ಇತಿಹಾಸದಲ್ಲೇ ಇಂದಿಗೂ ರೋಮಾಂಚನಕಾರಿಯಾದ ಘಟನೆ ೧೮೫೭ರಲ್ಲಿ ನಡೆಯಿತು. ಅದು ಮುಂದೆ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ ಎಂದು ಪ್ರಚಾರ ಪಡೆಯಿತು. ಆಗ ಈತನ ವಯಸ್ಸು ಇನ್ನೂ ಹದಿಮೂರು. ಸುತ್ತಲೂ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ ಬಿಸಿ ವ್ಯಾಪಿಸಿತ್ತು ಆದರೆ ಅದು ಬ್ರಿಟಿಷರ ದಮನಕಾರಿ ಆಜ್ಞೆಗಳಿಂದ ತನ್ನ ನೆಲೆಯನ್ನು ಕಳೆದುಕೊಂಡು ಹಾಯಿ ಛಿದ್ರವಾದ ದೋಣಿಯಂತೆ ಎತ್ತೆತ್ತಲೋ ಸಾಗಿತ್ತು. ಅದು ಈತನ ಮೇಲೆ ಬಹಳವಾಗಿ ಪ್ರಭಾವ ಬೀರಿ ತನ್ನದೇ ಆದ ದಾರಿಯಲ್ಲಿ ಹೋರಾಡಲು ಈತನನ್ನು ಮಾನಸಿಕವಾಗಿ ಸಿದ್ಧಗೊಳಿಸಿತು. ಮುಂದೆ ಈತ ಸ್ವಾತಂತ್ರ್ಯ ಹೋರಾಟದಲ್ಲಿ ನೇರವಾಗಿ ಧುಮುಕದೆ, ಪತ್ರಿಕೋದ್ಯಮದ ಮೂಲಕ ತನ್ನ ಹೋರಾಟವನ್ನು ನಡೆಸಿದರು. ಜೊತೆಜೊತೆಗೆ ಕನ್ನಡ ಪತ್ರಿಕೋದ್ಯಮಕ್ಕೊಂದು ರೂಪವನ್ನು, ನೆಲೆಯನ್ನು, ಭದ್ರ ಬುನಾದಿಯನ್ನು ಒದಗಿಸಿಕೊಟ್ಟರು. ಕನ್ನಡ ಪತ್ರಿಕೋದ್ಯಮದ ಪಿತಾಮಹ ಎಂಬ ಗೌರವಕ್ಕೆ ಪಾತ್ರರಾದರು, 'ತಾತಯ್ಯ'ನೆಂದೇ ಜನಜನಿತರಾದ ಎಂ. ವೆಂಕಟಕೃಷ್ಣಯ್ಯನವರು. ಇವರು ಮೈಸೂರಿನ ಜನರಿಗೆ ತಾತಯ್ಯನೆಂದೇ, ಸಾಧ್ವಿ ವೆಂಕಟಕೃಷ್ಣಯ್ಯನೆಂದೇ ಚಿರಪರಿಚಿತರು.

ಇವರ ಲೇಖನಗಳು ತಮ್ಮ ಮೊನಚು, ನೇರ ನಡೆನುಡಿಗಳಿಗೆ ಹೆಸರುವಾಸಿ. ಜನರು ಇವರ ಪತ್ರಿಕೆಗಳನ್ನು ಮುಗಿಬಿದ್ದು ಓದುವಷ್ಟರಮಟ್ಟಿಗೆ ಸ್ವಾರಸ್ಯಯುತವಾಗಿರುತ್ತಿದ್ದವು. ಮನ್ನಣೆ ಸಿಗಲಿಲ್ಲ. ಆಗ ಕನ್ನಡದ ಪತ್ರಿಕೋದ್ಯಮಿಗಳು ಸರ್ಕಾರದ ಲೋಪದೋಷಗಳನ್ನು ಪ್ರಸ್ತುತಪಡಿಸುವ ಸಲುವಾಗಿ ಸಮರೋಪಾದಿಯಲ್ಲಿ ಭಿತ್ತಿಪತ್ರಗಳನ್ನು ಹೊರತರಲು ಪ್ರಾರಂಭಿಸಿದರು. ಹೀಗೆ ಸರ್ಕಾರವೇ ತನ್ನ ನೀತಿಯಿಂದ ಇಂತಹ ಕಾರ್ಯಗಳಿಗೆ ಸ್ಫೂರ್ತಿ ಕೊಟ್ಟಂತಾಯಿತು. ಇದರ ಪರಿಣಾಮವಾಗಿ ಎರಡು ವರ್ಷಗಳ ನಂತರ ಈ ಶಾಸನವು ಕೊನೆಗೊಂಡಿತು. ಈ ವಿನೂತನ ಕ್ರಾಂತಿಯ ಕಾರಣಕರ್ತ ತಾತಯ್ಯನವರು.

ವೆಂಕಟಕೃಷ್ಣಯ್ಯನವರು ತಮ್ಮ ಜೀವಿತದುದ್ದಕ್ಕೂ ಪತ್ರಿಕೋದ್ಯಮದ ಮೂಲಕ ಸೇವೆ ಮಾಡಿದುದ್ದಷ್ಟೇ ಅಲ್ಲದೆ, ಅನೇಕ ಪತ್ರಿಕೋದ್ಯಮಿಗಳನ್ನು ತಯಾರು ಮಾಡಿದರು. ಅವರಲ್ಲಿ ಪ್ರಮುಖರಾದವರೆಂದರೆ ಎಂ. ಗೋಪಾಲ ಐಯ್ಯಂಗಾರ್ ಮತ್ತು ಎಂ. ಶ್ರೀನಿವಾಸ ಐಯ್ಯಂಗಾರ್. ಇವರು ವೆಂಕಟಕೃಷ್ಣಯ್ಯನವರ ಪತ್ರಿಕಾ ಗರಡಿಯಲ್ಲಿ ಬೆಳೆದು, ಮುಂದೆ ಯಶಸ್ವೀ ಪತ್ರಿಕೋದ್ಯಮಿಗಳೆನಿಸಿಕೊಂಡರು.

ಪತ್ರಿಕೋದ್ಯಮವನ್ನು ಒಂದು ಶಿಕ್ಷಣ ವಿಷಯವಾಗಿ ವಿಶ್ವವಿದ್ಯಾನಿಲಯದಲ್ಲಿ ಸ್ಥಾಪಿಸುವ ಕಲ್ಪನೆಯನ್ನು ಹೊಂದಿದ್ದ ಕೆಲವೇ ಕೆಲವು ಮಂದಿಗಳಲ್ಲಿ ವೆಂಕಟಕೃಷ್ಣಯ್ಯನವರೂ ಒಬ್ಬರು. ಆಗ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಪತ್ರಿಕೋದ್ಯಮ ಶಿಕ್ಷಣ ಲಭ್ಯವಿರಲಿಲ್ಲ. ಆದರೆ ಮುಂದೊಂದು ದಿನ ಪತ್ರಿಕೋದ್ಯಮ ಒಂದು ಶೈಕ್ಷಣಿಕ ವಿಷಯವಾಗಿ ಸ್ಥಾಪಿತವಾಗುವ ಆಲೋಚನೆಯನ್ನು ತಾತಯ್ಯನವರು ಹೊಂದಿದ್ದರು. ಅದಕ್ಕಾಗಿ ಎರಡು ಸಾವಿರ ರೂಪಾಯಿ




ತಾತಯ್ಯನವರು ಪತ್ರಿಕೋದ್ಯಮದಲ್ಲಿ ಕೆಲಸ ಮಾಡುತ್ತಿದ್ದ ಸಂದರ್ಭದಲ್ಲಿ ಕೆ. ರಂಗಾಚಾರ್ಲು ಮೈಸೂರಿನ ದಿವಾನರಾಗಿದ್ದರು. ಅವರು ಜನಾನುರಾಗಿಗಳಾಗಿದ್ದು ಮತ್ತು ಪ್ರಜಾಪ್ರಭುತ್ವದ ತತ್ವಗಳು ಜಾರಿಯಾಗುವುದರ ಬಗ್ಗೆ ಆಸಕ್ತಿಯುಳ್ಳವರಾಗಿದ್ದರು. ಅವರಿಗೆ ಮತ್ತು ಅವರ ತತ್ವಗಳಿಗೆ ಕಟ್ಟಾ ಬೆಂಬಲಿಗರಾಗಿ ನಿಂತವರು ವೆಂಕಟಕೃಷ್ಣಯ್ಯನವರು.

ತಾತಯ್ಯನವರು ತಮ್ಮ ಜೀವಿತದುದ್ದಕ್ಕೂ ಅನೇಕ ಪತ್ರಿಕೆಗಳನ್ನು ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಆರಂಭಿಸಿ ಪೋಷಿಸಿದ್ದರು. ಅವುಗಳಲ್ಲಿ ಪ್ರಮುಖವಾದವುಗಳೆಂದರೆ ವೃತ್ತಾಂತ ಚಿಂತಾಮಣಿ, ಹಿತಬೋಧಿನಿ, ವೇದಾಂತ ಚಿಂತಾಮಣಿ, ಸಂಪದಭ್ಯುದಯ, ಸಾಧ್ವಿ, ಪೌರಸಾಮಾಜಿಕ ಪತ್ರಿಕೆ, ಮೈಸೂರು ಪೇಟ್ರಿಯಟ್, ವೆಲ್ತ್ ಆಫ್ ಮೈಸೂರ್, ನೇಚರ್ ಕ್ಯೂರ್ ಮತ್ತು ಮೈಸೂರ್ ಹೆರಾಲ್ಡ್. ಇವುಗಳಲ್ಲಿ ಅತೀ ಯಶಸ್ವಿಯಾಗಿ ನಡೆದ ಪತ್ರಿಕೆಗಳೆಂದರೆ ವೃತ್ತಾಂತ ಚಿಂತಾಮಣಿ ಮತ್ತು ಮೈಸೂರ್ ಹೆರಾಲ್ಡ್. ಈ ಪತ್ರಿಕೆಗಳು ಎಷ್ಟರಮಟ್ಟಿಗೆ ತಮ್ಮ ನೆಲೆಯನ್ನು ಕಂಡುಕೊಂಡಿದ್ದವೆಂದರೆ ಆಗಿನ ದಿನಗಳಲ್ಲಿಯೇ ತಮ್ಮದೇ ಆದ ಓದುಗರ ಒಂದು ಬೃಹತ್ ಸಮೂಹವನ್ನು ಸೃಷ್ಟಿಮಾಡಿದ್ದವು.

ಇವರು ಪತ್ರಿಕೋದ್ಯಮದ ಮೂಲಕ ಹೋರಾಟ ಮಾಡುತ್ತಿದ್ದ ಸಮಯದಲ್ಲಿ ಬ್ರಿಟಿಷರ ಕೈಗೊಂಬೆಯಾಗಿದ್ದ ಮೈಸೂರು ಸರ್ಕಾರವು ಪತ್ರಿಕಾ ಸ್ವಾತಂತ್ರ್ಯದ ಮೇಲೆ ನಿರ್ಬಂಧವನ್ನು ಹೇರಿತು. ಇದರ ಪ್ರಕಾರ ಸರ್ಕಾರದ ವಿರುದ್ಧ ಟೀಕೆ ಮಾಡುವ ಪತ್ರಿಕೆಗಳ ಮೇಲೆ ಉಗ್ರಕ್ರಮ ಕೈಗೊಂಡಿತು. ಇದರಿಂದಾಗಿ ಅನೇಕ ಪತ್ರಿಕೆಗಳು ತಮ್ಮ ನೆಲೆಯನ್ನು ಕಳೆದು ಕೊಂಡವು. ಅಷ್ಟೇ ಅಲ್ಲದೆ ಅನೇಕ ಸಂಪಾದಕರನ್ನು ಗಡಿಪಾರು ಮಾಡಲಾಯಿತು. ಇದನ್ನು ಸಹಿಸಲಾಗದಿದ್ದ ತಾತಯ್ಯನವರು ತಮ್ಮ ನೇತೃತ್ವದಲ್ಲಿ ಒಂದು ಬೃಹತ್ ಸಭೆಯನ್ನು ನಡೆಸಿದರು. ಆ ಸಭೆಯಲ್ಲಿ ಈ ಕರಾಳ ಶಾಸನದ ವಿರುದ್ಧ ಎಲ್ಲಾ ಕನ್ನಡ ಪತ್ರಿಕೆಗಳನ್ನು ನಿಲ್ಲಿಸುವ ಒಮ್ಮತದ ನಿರ್ಧಾರಕ್ಕೆ ಬರಲಾಯಿತು ಮತ್ತು ಪತ್ರಿಕಾ ಸ್ವಾತಂತ್ರ್ಯದ ಬಗ್ಗೆ ಆಡಳಿತಗಾರರ ಜೊತೆ ವಾಗ್ಯುದ್ಧಕ್ಕೆ ಇಳಿದರು. ಆದರೆ ಅವರ ವಾದಸರಣಿಗೆ ಯಾವುದೇ ಗಳನ್ನು ಮೈಸೂರು ವಿಶ್ವವಿದ್ಯಾನಿಲಯಕ್ಕೆ ದತ್ತಿ ಕೊಟ್ಟು, ಪತ್ರಿಕೋದ್ಯಮ ಶಾಸ್ತ್ರದಲ್ಲಿ ಶ್ರೇಷ್ಠ ಯಶಸ್ಸನ್ನು ಪಡೆದ ವಿದ್ಯಾರ್ಥಿಗೆ ಬಹುಮಾನವನ್ನು ಕೊಡಬೇಕೆಂದು ತಿಳಿಸಿದ್ದರು. ಈ ಘಟನೆ ನಡೆದು ಮೂವತ್ತು ವರ್ಷಗಳ ನಂತರ ಮೈಸೂರು ವಿಶ್ವವಿದ್ಯಾನಿಲಯವು ಮಹಾರಾಜ ಕಾಲೇಜಿನಲ್ಲಿ ಪತ್ರಿಕೋದ್ಯಮ ವಿಷಯವನ್ನು ಬಿ.ಎ. ಪದವಿ ರೂಪದಲ್ಲಿ ಪರಿಚಯಿಸಿತು. ಇಂದಿಗೂ ಸಹ ಪ್ರತೀ ವರ್ಷ ಅತ್ಯುತ್ತಮ ಸಾಧನೆ ಮಾಡಿದ ವಿದ್ಯಾರ್ಥಿಗೆ **ವೃದ್ಧ ಪಿತಾಮಹ ವೆಂಕಟಕೃಷ್ಣಯ್ಯ ಪತ್ರಿಕೋದ್ಯಮ ಬಹುಮಾನ** ಎಂಬ ಹೆಸರಿನಲ್ಲಿ ಸನ್ಮಾನ ಮಾಡಲಾಗುತ್ತದೆ.

ವೃದ್ಧ ಪಿತಾಮಹ ವೆಂಕಟಕೃಷ್ಣಯ್ಯನವರ ಜೀವಮಾನದ ಸಾಧನೆಗಳಿಗಾಗಿ ಅವರನ್ನು ನೆನಪಿನಲ್ಲಿಟ್ಟುಕೊಳ್ಳುವ ಮತ್ತು ಗೌರವಿಸುವ ಸಲುವಾಗಿ ಮೈಸೂರಿನ ಲ್ಯಾನ್ಸ್‌ಡೌನ್ ಕಟ್ಟಡದ ಮುಂಭಾಗದಲ್ಲಿ ಅವರ ಅಮೃತಶಿಲೆಯ ಪ್ರತಿಮೆಯನ್ನು ಪ್ರತಿಷ್ಠಾಪಿಸಲಾಗಿದೆ. ಇಂದು ಅದರ ಸುತ್ತ ಒಂದು ಉದ್ಯಾನವನವೂ ಇದೆ. ಆದರೆ ಇಷ್ಟೆಲ್ಲಾ ಮಾಡಿದ ಸರ್ಕಾರ ಇಂದು ಅದರ ಸಂರಕ್ಷಣೆ ಮತ್ತು ಶುಚಿತ್ವದ ಬಗ್ಗೆ ಗಮನಹರಿಸದಿರುವುದು ಬೇಸರದ ಸಂಗತಿ. ಸರ್ಕಾರದ ಬೇಜವಾಬ್ದಾರಿ ಒಂದು ಕಡೆ ಆದರೆ, ಉದ್ಯಾನವನದ ಸುತ್ತ ಹತ್ತು ಹಲವು ಪತ್ರಿಕಾ ಕಚೇರಿಗಳು ಇವೆ. ಅವರೂ ಕೂಡ ತಮ್ಮ ಪತ್ರಿಕೆಗಳಲ್ಲಿ 'ಕನ್ನಡ ಪತ್ರಿಕೋದ್ಯಮದ ಪಿತಾಮಹ'ನ ಪ್ರತಿಮೆಯ ಸ್ಥಿತಿಯನ್ನು ಬಿಂಬಿಸದಿರುವುದು ಒಂದು ವಿಪರ್ಯಾಸ. ಕಳೆದ ತಿಂಗಳಿನಲ್ಲಿ ನಡೆದ ದಸರಾ ನಾಡಹಬ್ಬದಲ್ಲಿ ಈ ಉದ್ಯಾನವನದ ಸುತ್ತಮುತ್ತಲಿನ ಕಟ್ಟಡಗಳು, ರಸ್ತೆಗಳು ನವವಧುವಿನಂತೆ ಸಿಂಗಾರಗೊಂಡಿದ್ದವು. ಆದರೆ ತಾತಯ್ಯ ಮಾತ್ರ ನಿರಾಶ್ರಿತನಂತೆ, ನಿರ್ಲಕ್ಷಿತನಂತೆ ಆ ವೈಭವವನ್ನು ನೋಡುತ್ತಾ ನಿಂತಿದ್ದರು. ದಸರಾ ಹಬ್ಬವೇನೋ ಮುಗಿದಿದೆ. ಮುಂದಿನ ದಸರಾಕ್ಕಾದರೂ ಈ ಪ್ರತಿಮೆ ನವ ವರನಂತೆ ಸಿಂಗರಿಸಿಕೊಳ್ಳಬಹುದೆಂಬ ಆಶಾವಾದ ನನ್ನದು, ಜೊತೆಗೆ ತಾತಯ್ಯನ ಪ್ರತಿಮೆಯದ್ದೂ ಕೂಡ.

---

**ಶಮಂತ್ ಪಾಟೀಲ್ ಜಿ.**
'ನಮ್ಮನೆ', ೧೩೭/೧, ಅಂಚೆ ಹಡಜನ, ಮೈಸೂರು-ದೇವಲಾಪುರ ರಸ್ತೆ, ಮೈಸೂರು - ೫೭೧ ೩೧೧



# ಮಾನವ ಧರ್ಮ

ಪ್ರಪಂಚದಲ್ಲಿ ಇಂದು ಹಲವು ಧರ್ಮಗಳು ಅಸ್ತಿತ್ವದಲ್ಲಿವೆ. ಇವೆಲ್ಲ ಒಂದು ನಿರ್ದಿಷ್ಟವಾದ ಕಾಲದಲ್ಲಿ ಮನುಷ್ಯರಿಂದ ಸ್ಥಾಪಿಸಲ್ಪಟ್ಟವು. ಸುಮಾರು ೨೫೦೦ ವರ್ಷಗಳ ಹಿಂದೆ ಬುದ್ಧನಿರಲಿಲ್ಲ, ಬೌದ್ಧಧರ್ಮವೂ ಇರಲಿಲ್ಲ. ಅಂತೆಯೇ ಕ್ರಿಸ್ತನಿಂದ ಮೊದಲಾಗಿದ್ದು ಕ್ರೈಸ್ತ ಧರ್ಮ. ಮಹಮ್ಮದ್ ಪೈಗಂಬರ್ ಆದಮೇಲೆ ಬಂದಿದ್ದು ಇಸ್ಲಾಂ. ಹಿಂದೂಧರ್ಮದ ವೈಶಿಷ್ಟ್ಯವೆಂದರೆ ಅದಕ್ಕೆ ಸ್ಥಾಪಕನಿಲ್ಲ. ಅಸ್ಪಷ್ಟವಾಗಿ ನಾಲ್ಕೈದು ಸಾವಿರ ವರ್ಷಗಳ ಹಿಂದೆ ಮೊದಲಾದ ಈ ಧರ್ಮಕ್ಕೂ ಮನುಷ್ಯನೇ ಮೂಲ. ಈ ಧರ್ಮಗಳೆಲ್ಲಾ ತುಂಬಾ ಸದುದ್ದೇಶದಿಂದ, ವ್ಯಕ್ತಿಯ ಮತ್ತು ಸಮಾಜದ ಕಲ್ಯಾಣಕ್ಕಾಗಿ ಶ್ರೇಷ್ಠ ವ್ಯಕ್ತಿಗಳಿಂದ ರೂಪಿಸಲ್ಪಟ್ಟವು.

ಪ್ರತಿಯೊಂದು ಧರ್ಮಕ್ಕೂ ನಂಬಿಕೆ ಮುಖ್ಯ. ನಂಬಿಕೆ, ಅಂದ ಮೇಲೆ ಮುಗಿಯಿತಲ್ಲ. ಮೂಲ ವಿಷಯಗಳ ಚರ್ಚೆಗೆ, ಪ್ರಶ್ನೆಗೆ ಅಷ್ಟು ಅವಕಾಶವಿರುವುದಿಲ್ಲ. ತಾರ್ಕಿಕ ವಾದವನ್ನು ತಲೆಹರಟೆಯೆಂದು ಅಲ್ಲಗಳೆಯುತ್ತಾರೆ.

ಪ್ರತಿಯೊಂದು ಧರ್ಮವೂ ವಿಶ್ವಧರ್ಮ, ಮಾನವ ಧರ್ಮ ಎಂದು ಆಯಾಯ ಧರ್ಮದ ಅನುಯಾಯಿಗಳು ವಾದಿಸುತ್ತಾರೆ. ಕಾಲಕ್ರಮೇಣ ಒಂದೊಂದು ಧರ್ಮವೂ ಶಾಖೋಪಶಾಖೆಗಳಾಗಿ ಒಡೆದು ಸಾಕಷ್ಟು ಗೊಂದಲಕ್ಕೆ ಅವಕಾಶಕೊಟ್ಟಿವೆ.

ಧರ್ಮವು ವ್ಯಕ್ತಿಗತವಾಗಬೇಕಾದದ್ದು ಹೋಗಿ ಬಹುತೇಕ ವಂಶಗತವಾಗಿದೆ. ನಮ್ಮ ತಂದೆ ಹಿಂದೂ. ಅದಕ್ಕಾಗಿ ನಾನೂ ಹಿಂದೂ. ಮುಸ್ಲಿಮರ ಮಗ ಮುಸ್ಲಿಂ ಆಗಲೇಬೇಕು. ಹೀಗಾಗಿ ಎಲ್ಲ ಧರ್ಮಗಳು ಮಾನವ ಜನಾಂಗವನ್ನು ಶಾಶ್ವತವಾಗಿ ಒಡೆದಿವೆ.

ಪ್ರತಿಯೊಂದು ಧರ್ಮಕ್ಕೂ ಒಂದೊಂದು ಆಧಾರ ಗ್ರಂಥವಿದೆ. ಹಿಂದೂಗಳಿಗೆ ವೇದ, ಭಗವದ್ಗೀತೆ, ಕ್ರಿಶ್ಚಿಯನ್ನರಿಗೆ ಬೈಬಲ್, ಮಹಮ್ಮದೀಯರಿಗೆ ಕುರಾನ್. ಈ ಗ್ರಂಥಗಳು ಸಾಕ್ಷಾತ್ ಭಗವಂತನ ವಾಣಿ, ಸರ್ವಮಾನ್ಯ ಎಂಬ ನಂಬಿಕೆಯಿದೆ. ಪೂರ್ವಗ್ರಹ ಪೀಡಿತರಾಗದೆ, ಭಾವಾವೇಶವಿಲ್ಲದೆ, ಪಟ್ಟಭದ್ರಹಿತಗಳಿಲ್ಲದೆ, ಮುಕ್ತ ಮನಸ್ಸಿನಿಂದ ಧೈರ್ಯವಾಗಿ ಯೋಚನೆ, ವಿವೇಚನೆ ಮಾಡಿದಾಗ, ಹಲವು ಮುಖ್ಯ ವಿಷಯಗಳಲ್ಲಿ ತೀವ್ರ ವ್ಯತ್ಯಾಸಗಳು ಸ್ಪಷ್ಟವಾಗಿ ಕಾಣುತ್ತವೆ. ಅಷ್ಟೇ ಅಲ್ಲ, ಮೇಲ್ಕಂಡ ಯಾವುದೇ ಒಂದು ಧರ್ಮಗ್ರಂಥವನ್ನು ಆಳವಾಗಿ, ವೈಚಾರಿಕವಾಗಿ ಪರಿಶೀಲನೆ ಮಾಡಿದಾಗ, ಸಾಕಷ್ಟು ವಿರೋಧಾಭಾಸಗಳು ಎದ್ದುಕಾಣುತ್ತವೆ.

ಇಂತಹ ಗ್ರಂಥಗಳಲ್ಲಿ ತಪ್ಪು ಕಂಡುಹಿಡಿಯುವುದು ನನ್ನ ಉದ್ದೇಶವಲ್ಲ. ಈ ಎಲ್ಲ ಗ್ರಂಥಗಳು ಆಯಾಯ ಧರ್ಮಗಳಂತೆ ಮನುಷ್ಯ ಕೃತ ಎಂದು ತಿಳಿಸುವುದು ನನ್ನ ಉದ್ದೇಶ. ಅಂದಮೇಲೆ ಇವುಗಳಿಗೆಲ್ಲ ಇತಿಮಿತಿಗಳು ಇದ್ದೇ ಇವೆ. ಆದ್ದರಿಂದ ಅವುಗಳಲ್ಲಿ ಇರುವುದೆಲ್ಲ ಅಕ್ಷರಶಃ ಸತ್ಯ ಎಂದು ಯಾಂತ್ರಿಕವಾಗಿ ನಂಬುವುದು ವಿಹಿತವಲ್ಲ. ಸಾಂಪ್ರದಾಯಿಕ ಧರ್ಮಗಳು ಲೇವಾದೇವಿಗಳಾಗಿವೆ, ವಾಣಿಜ್ಯೋದ್ಯಮಗಳಾಗಿವೆ. ಹಣಕ್ಕೆ ಪ್ರಾಧಾನ್ಯ ಇದ್ದಕಡೆ ಧರ್ಮವಿಲ್ಲ. ಧರ್ಮದ ಮಧ್ಯವರ್ತಿಗಳು ದಳ್ಳಾಳಿಗಳು. ದೇವರನ್ನು ನಮ್ಮ ಯಾವುದೇ ದೈನಂದಿನ ಕಲಾಪಗಳಲ್ಲಿ ಉಪಯೋಗಿಸಬಾರದು. ದೇವರನ್ನು ವಿರೋಧಿಸಬೇಕಾಗಿಲ್ಲ, ನಿರ್ಲಕ್ಷಿಸಬೇಕು.

ಸಾವೇ ಜೀವನದ ಕೊನೆಯೇ ಅಥವಾ ಸತ್ತಮೇಲೆ ಏನಾದರೂ ಇದೆಯೇ ಎಂಬ ಬಹುಮುಖ್ಯವಾದ ಪ್ರಶ್ನೆಯು ಮನುಷ್ಯನನ್ನು ಶತಮಾನಗಳಿಂದ ಕಾಡುತ್ತಿದೆ. ಹಿಂದೂ ಧರ್ಮದ ಕರ್ಮಸಿದ್ಧಾಂತದಂತೆ ಪುನರ್ಜನ್ಮ ಇದೆ. ಮುಸ್ಲಿಂ ಮತ್ತು ಕ್ರಿಶ್ಚಿಯನ್ ಧರ್ಮಗಳು ಒಪ್ಪುವುದು ಒಂದೇ ಜನ್ಮವನ್ನು, ಬಹುಜನ್ಮಗಳನ್ನು ಅಲ್ಲ. ಹಿಂದೂ ಧರ್ಮದಂತೆ ಮನುಷ್ಯನಿಗೆ ಮಾತ್ರವಲ್ಲ, ಪ್ರತಿಯೊಂದು ಜೀವಿಗೂ ಆತ್ಮವಿದೆ. ಇಸ್ಲಾಂ ಮತ್ತು ಕ್ರೈಸ್ತ ಧರ್ಮಗಳು ಇದನ್ನು ನಂಬುವುದಿಲ್ಲ. ಇವುಗಳಲ್ಲಿ ಯಾವುದು ನಿಜ, ಯಾವುದು ಸುಳ್ಳು ? ಪ್ರತಿಯೊಂದು ಧರ್ಮವೂ ದೈವವಾಣಿಯಾದ ಮೇಲೆ ನಾವು ಯಾವ ದೇವರನ್ನು ನಂಬಬೇಕು ?

ದೇವರು ಇದ್ದಾನೆಯೋ ಇಲ್ಲವೋ ಎನ್ನುವುದು ನಂಬಿಕೆಯ ಮಾತು. ಮನುಷ್ಯನ ಅಸ್ತಿತ್ವ ಮಾತ್ರ ಸತ್ಯ ಸಂಗತಿ. ಹೋದ ಜನ್ಮ ಅಥವಾ ಮುಂದಿನ ಜನ್ಮ ಕೂಡ ಊಹೆ ಅಥವಾ ಮತಶ್ರದ್ಧೆಯಾಗಬಹುದು. ಅತ್ಯಂತ ಶ್ರೇಷ್ಠವಾದ ಈ ಜನ್ಮದಲ್ಲಿ ಅತ್ಯಂತ ಶ್ರೇಷ್ಠ ಸಾಧನೆಯನ್ನು ಮಾಡಲು ಪ್ರಯತ್ನಿಸಬೇಕು. ಎಲ್ಲ ವಾದಗಳಿಗಿಂತ ಮುಖ್ಯವಾದುದು ಮಾನವತಾವಾದ.

ಆಗಲೇ ಮನುಷ್ಯ ಕೇಂದ್ರಬಿಂದುವಾಗಲು ಸಾಧ್ಯ. ಆಗ ನಮ್ಮ ಸಂಪೂರ್ಣ ಗಮನ, ಪ್ರಯತ್ನ ಮನುಷ್ಯನ ಉನ್ನತಿ ಮತ್ತು ವಿಕಾಸದ ಕಡೆಗೆ ಹೋಗುತ್ತದೆ. ಇಂತಹ ಮಾನವೀಯತೆ, ಮಾನವತಾವಾದವೇ, ಒಡೆದುಹೋಗಿರುವ ಮಾನವ ಜನಾಂಗವನ್ನು ಒಂದುಗೂಡಿಸಿ ವಿಶ್ವನಿಯಮವಾಗಲು ಸಾಧ್ಯ. ಅದು ಸಾರ್ವತ್ರಿಕ, ಸಾರ್ವಕಾಲಿಕ. ವಿಶ್ವನಿಯಮವೇ ಸತ್ಯನಿಯಮ.

– 'ತೆರೆದಮನ'ದಿಂದ

ಡಾ॥ ಎಚ್. ನರಸಿಂಹಯ್ಯ

## ಮಳೆ-ಇಳೆ

ಬಾನ ಒಡಲನು ಸೀಳಿ
ಮಿಂಚು ಬಳ್ಳಿಯ ಹರಿಸಿ
ಬರಲಾರೆಯಾ ಇಳಿದು ಇಳೆಗೆ

ಬೆಂದು ಬಾಡಿದ ಭುವಿಗೆ
ಹಸುರು ಹೊದಿಕೆಯ ಹಾಸಲು
ಬರಲಾರೆಯ ಇಳಿದು ಇಳೆಗೆ

ನಿನ್ನ ದಾರಿಯ ಕಾದು
ನೆತ್ತರುಣಿಸಿದ ಜನರ
ಕಾಣ ಬಾ ಇಳಿದು ಇಳೆಗೆ

ನೊಂದುಹೋಗಿಹ ಮನಕೆ
ತಂಪನೀಯಲು ಇಂದು
ಬರಲಾರೆಯ ಇಳಿದು ಇಳೆಗೆ

ನೇಸರನ ಮರೆಮಾಡಿ
ಕಾರ್ಮೋಡದಲಡಗಿರುವಿ
ಬರಲಾರೆಯ ಇಳಿದು ಇಳೆಗೆ

ನೀರ ಕಲರವ ಹರಿಸಿ
ಮಣ್ಣ ವಾಸನೆ ಬೀರಿ
ಬರಲಾರೆಯಾ ಇಳಿದು ಇಳೆಗೆ

ಭುವಿಯ ಗರ್ಭಕೆ ಇಳಿದು
ಹಸುಳೆಗಳ ಮನ ಸೆಳೆದು
ಬರಲಾರೆಯಾ ಇಳಿದು ಇಳೆಗೆ.

ವರ್ಷಾ ಹೂಗಾರ
ಕಾಗವಾಡ - ೫೯೧ ೨೨೨
ಬೆಳಗಾವಿ ಜಿಲ್ಲೆ



HOSATHU Kannada Monthly / March 2005 Rs. 10 RNI Regn. No. KARKAN/1999/614 REGD. CPMG / KA / BGE - 7 / 2003-05
Licenced to post without prepayment. Licence No. WPP-14 Posted at Bangalore PSO on the 28th/3rd of every month



Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Chief Editor : Dr. G. Ramakrishna